# ಕರ್ನಾಟಕದ ಕ್ಯಾತಪ್ಪನ ದೈವಗಳ : ಸಾಂಸ್ಕೃತಿಕ ಕಥನ

(ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾ ಪ್ರಬಂಧ)

ಸಂಶೋಧಕರು
**ಚಿತ್ತಯ್ಯ ಕೆ.**

ಮಾರ್ಗದರ್ಶಕರು
**ಡಾ. ಸಿ.ಟಿ. ಗುರುಪ್ರಸಾದ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ






**ಸಮಾಜ-ವಿಜ್ಞಾನ ನಿಕಾಯ ಜಾನಪದ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ – ೫೮೩ ೨೭೬

**೨೦೧೮**

# ‘ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ’

(ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್‌ಡಿ ಪದವಿಗಾಗಿ ಸಲ್ಲಿಸಿದ ಮಹಾ ಪ್ರಬಂಧ)

ಸಂಶೋಧಕರು

ಚಿತ್ತಯ್ಯ.ಕೆ.



ಮಾರ್ಗದರ್ಶಕರು

ಡಾ.ಸಿ.ಟಿ.ಗುರುಪ್ರಸಾದ್

ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ. ವಿದ್ಯಾರಣ್ಯ. ೫೮೩೨೭೬.

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

"ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ" ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದಿಂದ ಪಿಎಚ್.ಡಿ ಪದವಿಗಾಗಿ ಚಿತ್ತಯ್ಯ.ಕೆ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾ ಪ್ರಬಂಧವು ಮೂಲದ್ದಾಗಿರುತ್ತದೆ. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೧೪/-/೧೮

ಸ್ಥಳ: ವಿದ್ಯಾರಣ್ಯ

(ಡಾ.ಸಿ.ಟಿ.ಗುರುಪ್ರಸಾದ್)
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು.
ಜಾನಪದ ಅಧ್ಯಯನ ವಿಭಾಗ,
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ,
ಹಂಪಿ ವಿದ್ಯಾರಣ್ಯ, ೫೮೩೨೭೬

# ಸಂಶೋಧಕರ ಘೋಷಣ ಪತ್ರ

'ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ' ಎಂಬ ಮಹಾ ಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಡಾ. ಸಿ.ಟಿ.ಗುರುಪ್ರಸಾದ್, ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸಿರುತ್ತೇನೆ. ಪ್ರಸ್ತುತ ಮಹಾ ಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೧೪/೨/೧೭.
ಸ್ಥಳ: ವಿದ್ಯಾರಣ್ಯ

ಚಿತ್ತಯ್ಯ.ಕೆ.
ಸಂಶೋಧನ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ,
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ,
ಹಂಪಿ ವಿದ್ಯಾರಣ್ಯ, ೫೮೩೨೭೬

## ಪರಿವಿಡಿ

**ಅಧ್ಯಾಯ : ನಾಲ್ಕು**

**ಕ್ಯಾತಪ್ಪ ದೈವ ಮತ್ತು ಮೌಖಿಕ ಸಾಹಿತ್ಯದ ಸತ್ಯಾವಲೋಕನ**



**ಅಧ್ಯಾಯ : ಐದು**

**ಕ್ಯಾತಪ್ಪದೈವದ ಬಗೆಗಿ ಕಾರ್ಯಾತ್ಮಕ ಪ್ರಕಾರಗಳ ಆಧಾರಗಳು**

ಅಧ್ಯಾಯ : ಆರು



ಅಧ್ಯಾಯ : ಏಳು



ಅನುಬಂಧ : ಒಂದು



ಅನುಬಂಧ : ಎರಡು

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

೧.೪. ಅಧ್ಯಯನದ ವಿಧಿ – ವಿಧಾನಗಳು

೧.೫. ಅಧ್ಯಯನದ ಇದುವರೆಗಿನ ಸಮೀಕ್ಷೆಯ ಸಂಶ್ಲೇಷಣೆ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಪ್ರಸ್ತಾವನೆ

ಕರ್ನಾಟಕದ ಪ್ರತಿ ಹಳ್ಳಿಯೂ ಸಾಂಸ್ಕೃತಿಕ ವೈವಿಧ್ಯತೆಗಳಿಂದ ಕೂಡಿದ್ದು ಸಂಸ್ಕೃತಿಯ ಭಾಗವಾಗಿ ರೂಪುಗೊಂಡಿದೆ. ನಾಡಿನ ಜನಪದ ಸಾಹಿತ್ಯ ಪರಂಪರೆ ಹಾಗೂ ಸಂಸ್ಕೃತಿಯಲ್ಲಿ ಗ್ರಾಮ ಸಂಸ್ಕೃತಿಗೆ ಉನ್ನತ ಸ್ಥಾನವಿದೆ. ಸಂಸ್ಕೃತಿಗೆ ಗ್ರಾಮಗಳು ತನ್ನದೇ ಆದ ಕೊಡುಗೆಗಳನ್ನು ನೀಡುತ್ತಾ ಬಂದಿವೆ. ಆದ್ದರಿಂದ ಆದಿ ಮಾನವನ ಮೂಲ ನೆಲೆಯನ್ನು ತಿಳಿಸಿಕೊಡುವ ಮೌಖಿಕ ಸಾಹಿತ್ಯ ಮತ್ತು ಸಂಸ್ಕೃತಿಯೂ ಮನುಕುಲದ ಬೆಳವಣಿಗೆಯನ್ನು ವಿಸ್ಕೃತ ನೆಲೆಯಲ್ಲಿ ಹಂತ ಹಂತವಾಗಿ ತಿಳಿಸಿಕೊಡುವಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಜನಪದವು ಜನರಿಂದ ಸೃಷ್ಟಿಯಾಗಿರುವಂತದ್ದು, ನವ ನಾಗರಿಕತೆಯ ಲೋಕದಿಂದ ದೂರದಲ್ಲಿಯೇ ಇರುವ ಜನಪದ ಸಂಸ್ಕೃತಿಯೂ ಗ್ರಾಮೀಣ ಜನರ ಜೀವನದಲ್ಲಿ ಹಾಸು ಹೊಕ್ಕಾಗಿದೆ. ಜನಪದರು ತಮ್ಮ ಸೃಜನಶೀಲ ದೃಷ್ಟಿಕೋನದಿಂದ ಕಲೆ, ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ತಾವೇ ಸೃಷ್ಟಿಸಿ, ಪೋಷಿಸಿ, ಬೆಳೆಸಿಕೊಂಡು ಇಂದಿಗೂ ಮರೆಯಲಾರದಂತ ಕಾಣಿಕೆ ನೀಡಿದ್ದಾರೆ. ಆದಿ ಕಾಲದಿಂದಲೂ ದೈವ-ದೇವತೆ, ದೇವರುಗಳು, ದೇವಾಲಯಗಳು, ಹಬ್ಬ, ಆಚರಣೆ, ಜಾತ್ರೆ, ಸಂಪ್ರದಾಯ, ನಂಬಿಕೆ, ವಿಧಿ-ವಿಧಾನ, ಸಂಸ್ಕಾರ, ಕ್ರೀಡೆ ಮುಂತಾದುವುಗಳ ಮಹತ್ವವನ್ನು ಪಡೆದಷ್ಟು ಯಾವ ಸಂಗತಿಗಳು ಪ್ರಾಧಾನ್ಯತೆ ಪಡೆದಿಲ್ಲ ಎನ್ನಬಹುದು. ಆದ್ದರಿಂದ ದೈವಗಳು ಜನಪದ ಸಂಸ್ಕೃತಿಯ ಒಂದು ಭಾಗವಾಗಿಯೇ ಇವೆ. ಜಾನಪದೀಯವಾದ ಸಾಂಸ್ಕೃತಿಕ ಸಂಗತಿಗಳನ್ನು ವಿಶ್ಲೇಷಿಸುವಾಗ ಅಲ್ಲಿನ ದೈವಗಳನ್ನು ಅಧ್ಯಯನ ಮಾಡುವುದು ಅಗತ್ಯ ಹಾಗೂ ಅನಿವಾರ್ಯವೂ ಆಗುತ್ತದೆ.

"ಗ್ರಾಮ ದೇವತೆ ಎಂದರೆ ಗ್ರಾಮಸ್ಥರ ಕಲ್ಪನೆಯ ದೇವತೆ"[7] ಜನಪದರು ತಮ್ಮ ಮತ್ತು ಗ್ರಾಮದ ರಕ್ಷಣೆಗೆ ನೆಲೆನಿಂತ ದೇವತೆಗೆ ಪೂರಕವಾದ ಐತಿಹ್ಯ, ಕಥೆ, ಪುರಾಣ, ಹಾಡುಗಳನ್ನು ಕಲ್ಪಿಸಿಕೊಂಡು, ತಮ್ಮ ಸಮಸ್ಯೆಗಳಿಗೆ ರಕ್ಷಣಾತ್ಮಕ ಪರಿಹಾರ ಹುಡುಕಿಕೊಳ್ಳಲು ಸಾಧ್ಯವಾಗಿದೆ. ಈ ಸಾಧ್ಯತೆಗಳ ಫಲವಾಗಿ ಜನಪದ ದೈವಗಳನ್ನು ನೋಡುವ, ಆರಾಧಿಸುವ ಆಚರಣೆಗಳನ್ನು ರೂಢಿಸಿಕೊಳ್ಳುವ ಜನಪದ ಜೀವನ ವಿಧಾನವನ್ನು ಹಾಗೂ ಚಿಂತನೆಗಳನ್ನು ಮನಃಶಾಸ್ತ್ರೀಯ ಹಾಗೂ ಇತರೆ ಜ್ಞಾನ ಶಾಖೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ದೃಷ್ಟಿಯಿಂದ ಜನಪದ ದೈವಗಳ ಅಧ್ಯಯನ ತುಂಬಾ ಸಹಕಾರಿಯಾಗುತ್ತದೆ.

ಪ್ರಸ್ತುತ ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಬಿ.ಎಂ.ಶ್ರೀ ಹೇಳಿರುವಂತೆ "ಜನವಾಣಿ ಬೇರು ಕವಿವಾಣಿ ಹೂ" ಎನ್ನುವಂತೆ ಜನಪದವನ್ನು ಎಲ್ಲದಕ್ಕೂ ಮೂಲವೆಂದು ಗುರುತಿಸಲಾಗಿದೆ. ಹೀಗೆ ಸಂಸ್ಕೃತಿಯ ಅನನ್ಯತೆ ಮತ್ತು ಬದುಕಿನ ತಿರುವುಗಳನ್ನು ಆಚರಿಸಿಕೊಂಡು ಬರುತ್ತಿರುವ ಪ್ರತಿಯೊಂದು ಅಂಶಗಳಿಗೂ ಪ್ರಾಧಾನ್ಯತೆಯನ್ನು ನೀಡುತ್ತಾ ಅವರು ಪ್ರಕೃತಿಯ ಎಲ್ಲಾ ಸಕಲ ಜೀವಿಗಳಲ್ಲಿಯೂ ದೈವತ್ವವನ್ನು ಕಾಣುತ್ತಾ ಬಂದಿದ್ದಾರೆ. ಆದ್ದರಿಂದ ಜನಪದ ಸಾಹಿತ್ಯ ಸಂಸ್ಕೃತಿ ಕುರಿತಾಗಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಆನೇಕ ವಿದ್ವಾಂಸರುಗಳು ಭಿನ್ನ ಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಿರುವುದನ್ನು ಈಗಾಗಲೇ ಗಮನಿಸಿದ್ದೇವೆ. ಜನಪದರ ಪ್ರತಿಯೊಂದು ಕ್ರಿಯೆ ಸಾಹಿತ್ಯಿಕವಾಗಿ ರೂಪುಗೊಂಡಿರುವುದನ್ನು ಜನಪದದ ಹೆಚ್ಚುಗಾರಿಕೆಯನ್ನು ತಿಳಿಸುತ್ತದೆ.

ಭೂಮಿ ಸೃಷ್ಟಿಯಾದ ಎಷ್ಟೋ ವರ್ಷಗಳ ಮೇಲೆ ಮಾನವ ಸೃಷ್ಟಿಯಾಗಿದ್ದಾನೆ. ಆದಿ ಮಾನವ ತನ್ನ ಅಲೆಮಾರಿ ಜೀವನದಲ್ಲಿ ಪ್ರಕೃತಿಯ ಶಕ್ತಿಗಳನ್ನು ಅಂದರೆ ಗುಡುಗು, ಮಿಂಚು, ಸಿಡಿಲು, ಮಳೆ ಮೊದಲಾದುಗಳ ಭಯದಿಂದ ಆರಂಭವಾದ ದೇವರ ಆರಾಧನೆ ಜನಪದರಲ್ಲಿ ಭಕ್ತಿಯಿಂದ ಆರಂಭವಾಯಿತು. ದೇವರ ನಂಬಿಕೆ, ಪೂಜಾ ವಿಧಿ–ವಿಧಾನಗಳು ಬದಲಾಗಿ ಪ್ರಕೃತಿಯ ಎಲ್ಲಾ ವೈಪರಿತ್ಯಗಳಿಗೆ ಒಂದು ಶಕ್ತಿ ಕಾರಣವೆಂದು, ಆ ಶಕ್ತಿಯನ್ನು ದೇವರೆಂದು ಕರೆಯುವುದನ್ನು ಪ್ರಾರಂಭಿಸಿದ. ಈ ಶಕ್ತಿ ಇಲ್ಲದಿದ್ದರೆ ಪ್ರಕೃತಿಯಲ್ಲಿ ಯಾವ ಘಟನೆಗಳು ನಡೆಯಲು ಸಾಧ್ಯವಿಲ್ಲ ಎಂಬ ಪ್ರಬಲ ನಂಬಿಕೆಯಿಂದ ತನ್ನ ಸರ್ವಸ್ವವನ್ನು ದೇವರಿಗೆ ಅರ್ಪಿಸಿಕೊಂಡು ತನ್ನ ನೋವು–ನಲಿವು, ಸುಖ–ದುಃಖ, ಆಸೆ–ಆಕಾಂಕ್ಷೆ, ಪರಿಸರ ಸಂಬಂಧದ ಪ್ರೇಮ–ಕಾಮ ಎಲ್ಲವನ್ನು ದೇವರಿಗೆ ಅರ್ಪಿಸಿ ಅ ಧೀನನಾದ. ರೋಗ–ರುಜಿನ, ಮಳೆ–ಬೆಳೆ ಬದುಕಿನ ಬೇಕು ಬೇಡುಗಳನ್ನು ಪರಿಹರಿಸಿಕೊಂಡನು. ಸ್ತ್ರೀದೇವತೆ ಹಾಗೂ ದೈವಗಳು ಇಂದಿಗೂ ಆರಾಧಿಸುತ್ತಿರುವುದನ್ನು ಗಮನಿಸಬಹುದು. ಜನಪದರೊಂದಿಗೆ ದೈವಗಳು ಹುಟ್ಟಿಕೊಂಡವು. ಹಾಗಾಗಿ ಜನರು ತಮ್ಮ ಬದುಕಿನ ಕ್ರಮ, ವಿವಾದ, ವೈಮನಸುಗಳನ್ನು ಮರೆಯಲು

ಹಾಗೂ ಬದುಕಿನ ಬಗೆಗಿನ ಭಾವನೆಗಳಿಗೆ ಅವನು ಹಟ್ಟಿ ಹಾಗೂ ಗ್ರಾಮಗಳನ್ನು ಆಶ್ರಯಿಸಿದ್ದಾನೆ ಎನ್ನಬಹುದು.

ಮನುಷ್ಯ ಕ್ರಮೇಣ ಕೃಷಿ ಮಾಡುವುದನ್ನು ಆರಂಭಿಸಿ ಒಂದು ಕಡೆ ನೆಲೆನಿಂತ. ಮಾನವನು ಮನೆಯ ನಂತರ, ಹಟ್ಟಿ, ನಂತರ ಗ್ರಾಮ ಆಮೇಲೆ ಊರನ್ನು ನಿರ್ಮಾಣ ಮಾಡಿಕೊಂಡನು. "ಹಟ್ಟಿ ಎಂದರೆ ದನಕರುಗಳ ಬೀಡು" ಕಾಡಡವಿಯಲ್ಲಿ ದನಕರುಗಳನ್ನು ಮೇಯಿಸಿಕೊಂಡು ಜೀವನ ನಡೆಸುವ ಚಿಕ್ಕ ಚಿಕ್ಕ ಸಮೂಹವನ್ನೇ ಹಟ್ಟಿ ಎಂದು ಕರೆಯುತ್ತೇವೆ. ಪ್ರಾಚೀನ ಕಾಲದಲ್ಲಿ ಎಲ್ಲೆಡೆಗಳು ಹಟ್ಟಿಗಳಿರುವುದು ಕಂಡು ಬರುತ್ತದೆ. ಹಟ್ಟಿ ಶಬ್ದದ ಆರಂಭ ರೂಪ ಪಟ್ಟಿ, ಹಟ್ಟಿ, ಪಾಟ, ಪಾಡಿ, ವಾಡಿ ಈ ಬಗೆಯಲ್ಲಿ ನಿರೂಪಿತವಾಗಿರುವುದನ್ನು ಕಾಣುತ್ತೇವೆ. "ದನವೇ ದೈವ, ದನವೇ ಧನ' ಹೀಗೆ ಗುಂಪು ಗುಂಪಿನ ದನಗಳನ್ನು ಕಾಯುವವನಿಗೆ ಹಿಂಡುಕಾರ, ದನಗಾರ ಹಾಗೂ ಹಟ್ಟಿಕಾರ ಎಂತಲೂ ಕರೆಯುತ್ತಾರೆ."[೨]

ಕಾಡುಗೊಲ್ಲರು, ಕುರುಬರು, ಬೇಡ ಬುಡಕಟ್ಟುಗಳು ನಾಗರಿಕ ಪ್ರಪಂಚದಿಂದ ದೂರವಿದ್ದು ತಮ್ಮ ಉಪಜೀವನಕ್ಕಾಗಿ ಗುಡ್ಡ ಬೆಟ್ಟ ಕಾಡು ಹಾಗೂ ಕಣಿವೆಗಳನ್ನು ಹುಡುಕಿಕೊಂಡು ಹೋಗಿ ಬದುಕುತ್ತಾ ವಿಶಿಷ್ಟ ಜೀವನವನ್ನು ಸೃಷ್ಟಿಸಿಕೊಂಡಿರುವುದಲ್ಲದೆ ತಮ್ಮದೇ ಆದ ರೀತಿಯಲ್ಲಿ ನ್ಯಾಯ ವ್ಯವಸ್ಥೆಯನ್ನು ಹೊಂದಿ ಪ್ರಕೃತಿಯ ನಡುವೆ ಸಹಜವಾಗಿ ಬಾಳುವೆಯನ್ನು ನಡೆಸಿದ್ದಾರೆ. ಈ ಸಮೂಹ ಅಥವಾ ಜನಾಂಗಗಳನ್ನೇ ವಿದ್ವಾಂಸರುಗಳು ಬುಡಕಟ್ಟು ಎಂದು ಕರೆದಿದ್ದಾರೆ. ಬುಡಕಟ್ಟು ಎಂಬ ಪದವನ್ನು ಇಂಗ್ಲಿಷಿನ 'ಟ್ರೈಬ್' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬುಡಕಟ್ಟು ಎಂದು ಬಳಸಲಾಗುತ್ತಿದೆ. ಹೀಗೆ ನಾಡಿನ ಪ್ರಮುಖ ಬುಡಕಟ್ಟುಗಳಲ್ಲೊಂದಾದ "ಕಾಡುಗೊಲ್ಲರು ಕಳ್ಳೆಮುಳ್ಳಿನ ಕಂಟಕಾವರಣದೊಳಗೆ ಬದುಕು ಕಟ್ಟಿಕೊಂಡು ತಮ್ಮದೇ ಆದ ನ್ಯಾಯ ವ್ಯವಸ್ಥೆಯನ್ನು ಹೊಂದಿ ಪ್ರಕೃತಿ ನಡುವೆ ಬದುಕಿ ಬಾಳುವೆ ಮಾಡುವ ಮುಗ್ಧರು."[೩] ಅವರ ವಾಸದ ತಾಣಗಳು ಹಾಗೂ ದೈವಗಳ ಆರಾಧನಾ ಕೇಂದ್ರಗಳು ಸಾಂಸ್ಕೃತಿಕ ಶೋಧನೆಗೆ ಹೊಸ ಆಯಾಮವನ್ನು ಒದಗಿಸುತ್ತವೆ.

"ಬುಡಕಟ್ಟು ಜನರ ಸಂಸ್ಕೃತಿಯೆ ಅವರ ಧರ್ಮ, ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧ, ಅಲೋಚನಾ ವಿಧಾನ, ದರ್ಶನ, ಪೂಜಾವಿಧಾನ, ದೇವತಾ ಆರಾಧನೆ ಹೀಗೆ ಎಲ್ಲವನ್ನು ಅವರಿಗೆ ಧಾರೆ ಎರೆದಿದೆ. ಅವರ ಸಂಸ್ಕೃತಿಯ ದರ್ಶನದಂತೆ ಅವರು ಬದುಕುತ್ತಾರೆ. ಹಾಗೂ ಜೀವಿಸುತ್ತಾರೆ."[೪] ಈ ವಿಶ್ಲೇಷಣೆಯಲ್ಲಿ ಪ್ರಕೃತಿ, ಧರ್ಮ, ಸಂಸ್ಕೃತಿ ಈ ಮೂರು ಬುಡಕಟ್ಟು ಜನರ ಬದುಕಿನೊಳಗೆ ಮುಪ್ಪರಿಗೊಂಡು ಕೃತ್ರಿಮವಲ್ಲದ ಸಹಜ ಜೀವನ ಅಭಿವ್ಯಕ್ತಗೊಳ್ಳುತ್ತದೆ.

ಯಾವುದೇ ಒಂದು ಜನಾಂಗ ಒಂದೆಡೆ ನೆಲೆನಿಂತು ವಿಶಿಷ್ಟ ಬದುಕನ್ನು ಕಟ್ಟಿಕೊಂಡು ಅಲ್ಲಿ ತನ್ನದೇ ಆದ ವಿಶಿಷ್ಟ ಭಾಷೆ ಹಾಗೂ ಸಂಸ್ಕೃತಿಯನ್ನು ಬೆಳೆಸಿರುತ್ತದೆ. ಆ ಜನಾಂಗಕ್ಕೆ ಆಶ್ರಯ ನೀಡಿದ ಸ್ಥಳಗಳು ಪ್ರಮುಖ ಸ್ಥಾನ ಪಡೆದುಕೊಂಡಿರುತ್ತವೆ. ನಾಗರಿಕ ಸಮಾಜದ ಲಕ್ಷಣಗಳನ್ನು ಮೈಗೂಡಿಸಿಕೊಳ್ಳಲು ತವಕಿಸುತ್ತಲೇ ತನ್ನ ಪಾರಂಪರಿಕ ಸಂಪ್ರದಾಯ ಮತ್ತು ಆಚರಣೆಗಳನ್ನು ಉಳಿಸಿಕೊಳ್ಳಲು ಹೆಣಗುತ್ತಿರುವ ಹಲವು ಬುಡಕಟ್ಟು ಸಮುದಾಯಗಳಲ್ಲಿ ಕಾಡುಗೊಲ್ಲರು ಪ್ರಮುಖವಾಗಿ ಕಂಡು ಬರುತ್ತಾರೆ. ಗಿರಿದುರ್ಗ, ವನದುರ್ಗ ಹಾಗೂ ಜಲದುರ್ಗಕ್ಕೆ ಹೆಸರಾದ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ತುಮಕೂರು, ಮದುಗಿರಿ, ನಿಡಗಲ್ಲು ಹಾಗೂ ಆಂಧ್ರದ ಗಡಿಯಂಚಿನಲ್ಲಿರುವ ಸ್ಥಳಗಳನ್ನು ಹೆಸರಿಸಬಹುದು. ಇಂತಹ ಪ್ರದೇಶಗಳು ಪವಿತ್ರ ಸ್ಥಳವಾಗಿರುವುದಲ್ಲದೆ ಬುಡಕಟ್ಟು ಜನರ ಸಾಂಸ್ಕೃತಿಕ ಕೇಂದ್ರವಾಗಿಯೂ ಆಕರ್ಷಣಿಯವಾಗಿವೆ. ಈ ಸ್ಥಳಗಳು ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ಹಾಗೂ ಅಂಶಗಳನ್ನು ಪ್ರತಿನಿಧಿಸುತ್ತವೆ. ಬುಡಕಟ್ಟು ಸಮುದಾಯಗಳ ನೆಲೆಗಳು ಅವರ ಕಲೆ, ಸಾಹಿತ್ಯ, ಸಂಸ್ಕೃತಿ ಹಾಗೂ ಆಚರಣೆ ಮುಂತಾದ ಅಂಶಗಳು ಜನಪದ ಸಂಶೋಧಕರನ್ನು ಆಕರ್ಷಿಸುವುದರ ಜೊತೆಗೆ ಮಾನವ ಶಾಸ್ತ್ರಜ್ಞರಿಗೂ ಅತ್ಯಮೂಲ್ಯವಾದ ಅಧ್ಯಯನದ ಕ್ಷೇತ್ರಗಳಾಗಿವೆ.

ಆಂಧ್ರದ ಗಡಿ ಭಾಗ ಮತ್ತು ಮಧ್ಯಕರ್ನಾಟಕದ ಪ್ರಧಾನ ಜಿಲ್ಲೆಗಳಲ್ಲಿ ಕಂಡುಬರುವ ಕಾಡುಗೊಲ್ಲರ ದೈವಗಳ ಆರಾಧನಾ ಕೇಂದ್ರಗಳು ಸಾಂಸ್ಕೃತಿಕ ನೆಲೆಗಳಾಗಿ ಕಂಡು ಬರುತ್ತವೆ. ಈ ಸಮುದಾಯದಲ್ಲಿ ವಿಶಿಷ್ಟ ಸಂಪ್ರದಾಯದಿಂದ ಆರಾಧನೆಗೊಳ್ಳುತ್ತಿರುವ ದೈವ ಎಂದರೆ ಕ್ಯಾತಪ್ಪ. ಈತ ಮೂಲತಃ ಪಶುಪಾಲಕ, ಕೃಷಿಕ. ಈತನನ್ನು ಕುರಿತ ಮೌಖಿಕ ಸಾಹಿತ್ಯ ವಿಪುಲವಾಗಿ ದೊರೆಯುತ್ತದೆ. ಹಾಗೂ ಇಲ್ಲಿನ ಜನರ ಆಚಾರ-ವಿಚಾರಗಳು, ನಂಬಿಕೆಗಳು, ಹಬ್ಬ-ಜಾತ್ರೆಗಳು ವರ್ಷದುದ್ದಕ್ಕೂ ವಿಶಿಷ್ಟವಾಗಿ ಜರುಗುತ್ತವೆ. ನಾಗರಿಕತೆಯ ಪ್ರಭಾವದಿಂದ ಜಾತ್ರೆಗಳ ಆಚರಣೆಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದರೂ, ಅವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಬುಡಕಟ್ಟು ಸಂಸ್ಕೃತಿಯ ಅಂಶಗಳು ಕಾಣಸಿಗುತ್ತವೆ. ಹಾಗೆಯೇ ಆಳುವವರ, ಸ್ಥಾಪಿತ ಹಿತಾಸಕ್ತರ ಹತೋಟಿಯಲ್ಲಿರುವ ಲಿಖಿತ ಮಾಧ್ಯಮಗಳು ಪ್ರತಿಪಾದಿಸುವ ವಿಷಯಗಳಿಗೂ ಮೌಖಿಕ ಪರಂಪರೆಯಲ್ಲಿ ದೊರೆಯುವ ಅಂಶಗಳಿಗೂ ಅನೇಕ ಸಂದರ್ಭದಲ್ಲಿ ಹೊಂದಾಣಿಕೆಯಾಗುವುದಿಲ್ಲ. ಇಂತಹ ಕುತೂಹಲಗಳಿಂದ "ಕ್ಯಾತಪ್ಪ ದೈವ" ಕುರಿತ ಸಾಂಸ್ಕೃತಿಕ ಕಥನದ ಅಧ್ಯಯನದಲ್ಲಿ ಸಂಪ್ರದಾಯ, ಆಚರಣೆ, ಜಾತ್ರೆ-ಉತ್ಸವಗಳನ್ನು ದಾಖಲಿಸುವುದರ ಜೊತೆಗೆ ಹೊಸದಾಗಿ ಏನನ್ನಾದರೂ ಹೇಳಲು ಸಾಧ್ಯವೋ ಎಂದು ಪರಿಶೀಲಿಸಿ ನೋಡಲಾಗಿದೆ. "ಜಾನಪದ ಕ್ಷೇತ್ರ ಬಹು ವಿಸ್ತಾರವೂ ವ್ಯಾಪಕವೂ ಆದ ಒಂದು ಜ್ಞಾನಕ್ಷೇತ್ರ."[೫] ಹಾಗಾಗಿ ಉಳಿದೆಲ್ಲ ಕ್ಷೇತ್ರಗಳಿಗಿಂತ ಅದು

ವಿಶಿಷ್ಟವಾದುದು. ಮಾನವನಷ್ಟೇ ಹಳೆಯದಾದ ಜಾನಪದ ಮನುಷ್ಯನ ಬದುಕಿನ ಹಲವು ಮುಖಗಳ ಸಮಷ್ಠಿ ಸೃಷ್ಟಿಯಾಗಿದೆ. ಜನಪದ ಸಂಸ್ಕೃತಿಯಲ್ಲಿ ಆದಿಯಿಂದ ಆಧುನಿಕ ಕಾಲದವರೆಗೆ ಮಾನವ ನಡೆದುಬಂದ ದಾರಿಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ದಿನಮಾನಗಳು ಉರುಳಿದಂತೆಲ್ಲ ಮಾನವನ ಜೀವನ ವಿಧಾನವೂ ಬದಲಾಗುತ್ತಲೇ ಹೋಗುತ್ತದೆ. ಆದ್ದರಿಂದ ನಮಗೆ ದೂರವಾಗಿರುವ ಪೂರ್ವಿಕರ ಬದುಕಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಅರ್ಥಮಾಡಿಕೊಂಡು ಮುಂದಿನ ಯುವ ಜನತೆಗೆ ಆ ಜೀವನ ಮೌಲ್ಯಗಳ ಮಹತ್ವವನ್ನು ತಿಳಿಸಿಕೊಡುವ ಸಲುವಾಗಿ ಇಂದು ಜಾನಪದವನ್ನು ಆಳವಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಏಕೆಂದರೆ ಜಾನಪದ ಸಂಸ್ಕೃತಿಯ ಅಧ್ಯಯನ ಎನ್ನುವುದು ಜನಪದರ ಬದುಕಿನ ಸಮಗ್ರ ಅಧ್ಯಯನವೂ ಆಗಿದೆ.

ಸಾಮಾನ್ಯವಾಗಿ ಬುಡಕಟ್ಟು ಜನಾಂಗಗಳಲ್ಲಿ ಸೂರ್ಯ ಹಾಗೂ ಚಂದ್ರರನ್ನು ಅವರು ಕುಲ ಅಥವಾ ತಮ್ಮ ವಂಶದ ದೇವತೆಗಳನ್ನಾಗಿ ಸ್ವೀಕರಿಸಿರುತ್ತಾರೆ. ಅಂತಯೇ ತಮ್ಮ ಸಮುದಾಯದ ಜೊತೆಯಲ್ಲಿ ಬದುಕಿ ಬಾಳಿದ ವ್ಯಕ್ತಿ ಅಲ್ಲಿ ಸಾಂಸ್ಕೃತಿಕ ಪುರುಷನಾಗಿ ಪ್ರಸಿದ್ಧಿ ಪಡೆಯುತ್ತಾನೆ. ಹಾಗೂ ಪೂಜೆಗೆ ಒಳಪಡುತ್ತಾನೆ. ಇದು ಕಾಡುಗೊಲ್ಲ, ಮ್ಯಾಸಬೇಡ ಹಾಗೂ ಇತರೆ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುವ ಸಾಮಾನ್ಯ ಅಂಶವಾಗಿದೆ. ಕಾಡುಗೊಲ್ಲರು ಪಶುಪಾಲಕ ಸಂಸ್ಕೃತಿಯ ಮೂಲದಿಂದ ಬಂದವರಾದ್ದರಿಂದ ಕಳ್ಳೆಮುಳ್ಳಿನ ಪೌಳಿಗಳು, ಹುಲ್ಲಿನ ಗುಬ್ಬಗಳು, ಗುಡಿಗಳು, ಈರಗಾರರ ಸಮಾಧಿಗಳು ಹಾಗೂ ಗುಡ್ಡೆಗಳನ್ನು ಸ್ಥಾಪನೆ ಮಾಡಿಕೊಂಡಿರುವುದಲ್ಲದೆ ತಮ್ಮ ಕುಲಮೂಲದ ದೈವಗಳನ್ನು ಪ್ರತಿಷ್ಠಾಪಿಸಿಕೊಂಡು ತಮ್ಮದೇ ಆದ ರೀತಿಯಲ್ಲಿ ಆರಾಧಿಸುತ್ತಾ ಬಂದಿದ್ದಾರೆ. ಹಬ್ಬ ಹರಿದಿನಗಳನ್ನು ಆಚರಿಸುತ್ತಾ ಹಾಡಿ ಕುಣಿದು, ಕುಣಿಯುತ್ತಾ ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕನ ನಡಾವಳಿಗಳನ್ನು ಪಾಲಿಸುತ್ತಾ ಅವುಗಳನ್ನು ಪರಿಪಾಲನೆ ಮಾಡಿಕೊಂಡು ತಮ್ಮದೇ ಆದ ಸಹಜವಾದ ರೀತಿಯಲ್ಲಿ ಕೌಟುಂಬಿಕ ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಸ್ವತಃ ತಾವುಗಳೇ ಕಟ್ಟಿಕೊಂಡಿರುವ ಸಾಂಸ್ಕೃತಿಕ ನಾಯಕರ ಸೃಷ್ಟಿ ಪುರಾಣಗಳು, ಜನಪದ ಹಾಡುಗಳು, ಕಥನಗಳು ಇವು ನಾಡಿನ ವಿದ್ವಾಂಸರ ಗಮನ ಸೆಳೆದಿವೆ.

ತಮ್ಮ ಜನಾಂಗವನ್ನು ಸಂಘಟಿಸಿ ಹಿತ ಕಾಪಾಡಿದ ಸಾಂಸ್ಕೃತಿಕ ವೀರರನ್ನು ದೈವಗಳನ್ನಾಗಿ ಮಾಡಿಕೊಂಡು ಅವರ ಆರಾಧನೆಗೆ ಗುಡಿ-ಗುಬ್ಬಗಳನ್ನು ನಿರ್ಮಿಸಿ ಅವುಗಳಿಗೆ ಭಾವನೆಗಳ ಛಾಪುಮೂಡಿಸಿ, ಭಕ್ತಿ, ಶ್ರದ್ಧೆಗಳಿಂದ ಸಂಪ್ರದಾಯ, ಆಚರಣೆ, ನಂಬಿಕೆ ಮುಂತಾದ ಪದ್ಧತಿಗಳನ್ನು ರೂಢಿಸಿಕೊಂಡಿದ್ದಾರೆ. ಸಮುದಾಯದ ಒಳಿತಿಗಾಗಿ

ಸೃಷ್ಟಿಸಿಕೊಂಡ ದೈವಗಳನ್ನು ಸಂತೃಪ್ತಿ ಪಡಿಸಲು ಹಬ್ಬ, ಜಾತ್ರೆ, ಉತ್ಸವಗಳ ನೆಪದಲ್ಲಿ ಹರಕೆ, ಬಲಿ, ಉರುಳು ಸೇವೆ, ತಲೆಮುಡಿ ಹಾಗೂ ನೈವೇಧ್ಯ ಮುಂತಾದ ಈ ಆಚರಣೆಗಳು ಅವರ ಬದುಕಿನ ತಳಹದಿಯಾಗಿ ಮುಂದುವರಿಯುತ್ತಿವೆ.

ದೈವಗಳ ಅಧ್ಯಯನವೆಂದರೆ ಅದು ಸಂಸ್ಕೃತಿಯ ಅಧ್ಯಯನ. ಸಂಸ್ಕೃತಿಯು ಮಾನವ ಸಮಾಜದ ಉಸಿರು. ಅದು ಮಾನವ ಸಮಾಜ ಮತ್ತು ಕುಟುಂಬ ಜೀವನದ ಅಭಿವ್ಯಕ್ತಿ. ಪ್ರಾಕೃತಿಕ ಜೀವಿಯಾದ ಮಾನುಷ್ಯನ ವ್ಯಕ್ತಿತ್ವ ಬೆಳವಣಿಗೆ ಹೊಂದುವುದು ಒಂದು ಸಾಂಸ್ಕೃತಿಕ ಪರಿಸರದಲ್ಲಿ. ಯಾವುದೇ ಒಂದು ಸಂಸ್ಕೃತಿಯೂ ಒಂದು ಜನ ಸಮುದಾಯದ ಎಲ್ಲ ಬಗೆಯ ಆಚರಣೆಗಳನ್ನು ಒಳಗೊಳ್ಳುತ್ತದೆ. ಆದ್ದರಿಂದ ಪ್ರಚಲಿತದಲ್ಲಿ ಆರಾಧನೆಗೊಳ್ಳುತ್ತಿರುವ ಸಾಂಸ್ಕೃತಿಕ ವೀರರು ಹಾಗೂ ಈರಗಾರರು ಬದುಕಿ ಬಾಳಿ ಧಾರ್ಮಿಕ ಚೌಕಟ್ಟನ್ನು ನಿರ್ಮಿಸಿ ಹೋಗಿದ್ದಾರೆ. ಇಂಥವರೆಲ್ಲರೂ ಕಾಡುಗೊಲ್ಲರಲ್ಲಿ ದೈವತ್ವದ ಸ್ವರೂಪ ಪಡೆದು ದೇವರುಗಳಾಗಿ ಆರಾಧಾನೆಗೊಳ್ಳುತ್ತಿರುವುದು ಕಂಡುಬರುತ್ತದೆ.

"ಸಂಸ್ಕೃತಿ ಎನ್ನುವುದು ಮಾನವ ಜೀವನ ವಿಧಾನದ ಪ್ರತೀಕ ಅಥವಾ ಜೀವಿತ ಕ್ರಮದ ಒರೆಗಲ್ಲು, ಮನುಷ್ಯ ತನ್ನ ಸಾಮಾಜಿಕ ಜೀವನದಲ್ಲಿ ತಾನು ರೂಢಿಸಿಕೊಂಡಿರುವ ಆಚಾರ-ವಿಚಾರಗಳು, ಸಂಪ್ರದಾಯಿಕವಾಗಿ ಬಂದ ಪದ್ಧತಿಗಳ ಜೀವನ ಮೌಲ್ಯಗಳು ಹಾಗೂ ವಸ್ತುಗಳ ಸಂಗ್ರಹವೇ ಸಂಸ್ಕೃತಿ"[೬] ಯಾವುದೇ ಒಂದು ಸಮುದಾಯದ ಸಂಸ್ಕೃತಿಯು ಪರಂಪರೆಯಿಂದ ಬರುವಂತಹದ್ದು. ಅದು ಆ ಸಮುದಾಯದ ಸಂಪತ್ತು ಕೂಡ ಆಗಿರುತ್ತದೆ. ಹೀಗೆ ಅಮೂರ್ತ ಸ್ವರೂಪದ ಭಾಷೆ, ನಂಬಿಕೆ, ಆಚರಣೆಗಳು, ರೂಢಿಸಂಪ್ರದಾಯಗಳು, ಲೋಕಾಚಾರ, ನೈತಿಕ ನಿಯಮಗಳು, ಮೌಲ್ಯಾದರ್ಶಗಳು, ಸಿದ್ಧಾಂತಗಳು ಹಾಗೂ ಜೀವನ ದರ್ಶನ, ಕಲೆ, ಸಾಹಿತ್ಯ, ನೃತ್ಯ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಅಲ್ಲದೆ, ಅದು ಸಭ್ಯತೆ, ಶಿಷ್ಟಾಚಾರ, ಅಭಿಪ್ರಾಯಗಳು, ಚಿಂತನಾ ಮೌಲ್ಯಗಳು, ಆಸಕ್ತಿ ಅಭಿರುಚಿಗಳು, ಹವ್ಯಾಸಗಳು, ಮನೋರಂಜನಾ ವಿಧಾನಗಳು ಮುಂತಾದುಗಳನ್ನು ಒಳಗೊಂಡಿದ್ದು ಆ ಸಮುದಾಯದ ಮನಸ್ಸಿನ ಸೂಕ್ಷ್ಮ ಎಳೆಗಳ ಭಾವನೆಗಳನ್ನು ಪ್ರತಿಬಿಂಬಿಸುತ್ತವೆ.

### ೧.೧ ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ವಿಷಯ "ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ"ವಾಗಿದ್ದು, ಕ್ಯಾತಪ್ಪ ದೈವಗಳ ಮೌಖಿಕ ಪರಂಪರೆಯಲ್ಲಿ ಬರುವ ಕಟ್ಟೆಮನೆಗಳು, ಬೆಡಗುಗಳು, ಕತೆ, ಪುರಾಣ, ಐತಿಹ್ಯ ಆತನ ಜಾತ್ರೆ, ಉತ್ಸವ, ಆಚರಣೆಗಳನ್ನು ಸಂಶೋಧನಾತ್ಮಕವಾಗಿ ಅಧ್ಯಯನ ಮಾಡುವುದು ಅಧ್ಯಯನದ ಉದ್ದೇಶವಾಗಿದೆ.

೧. ಕ್ಯಾತಪ್ಪದೈವ ಕುರಿತು ಇರುವ ಕಥನಗಳು, ಪುರಾಣ, ಸಂಪ್ರದಾಯ, ಆಚರಣೆಗಳು ಮತ್ತು ವೈಶಿಷ್ಟ್ಯಗಳ ಬಗ್ಗೆ ಅರಿಯಲು ತುಮಕೂರು, ಹಾಸನ, ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ ಮುಂತಾದ ಭಾಗದಲ್ಲಿ ಕ್ಷೇತ್ರ ಕಾರ್ಯ ಕೈಗೊಂಡು ಅವುಗಳ ಬಗೆಗಿನ ಮಾಹಿತಿ ಸಂಗ್ರಹಿಸುವುದು.

೨. ಕ್ಯಾತಪ್ಪನ ಕುರಿತ ಕಥೆ, ಐತಿಹ್ಯ, ಪುರಾಣಗಳು, ಕಥನಗಳ ಬಗ್ಗೆ ವಿಮರ್ಶಾತ್ಮಕ ಜಾನಪದೀಯ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದಲ್ಲದೆ, ಪ್ರಸ್ತುತ ಸಮಾಜದಲ್ಲಿ ಕ್ಯಾತಪ್ಪ ದೈವಗಳ ಕುರಿತು ಜನಪದರು ಮೌಖಿಕವಾಗಿ ಕಟ್ಟಿಕೊಂಡಿರುವ ಕಥನ ಕಾವ್ಯಗಳನ್ನು ಸಂಗ್ರಹಿ ವಿಶ್ಲೇಷಿಸುವುದು.

೩. ಕ್ಯಾತಪ್ಪ ದೈವಗಳ ಕುರಿತು ಆಚರಿಸುತ್ತಿರುವ ಹಬ್ಬ, ಹರಿದಿನ, ಜಾತ್ರೆ, ಉತ್ಸವ ಹಾಗೂ ಸಾಂಸ್ಕೃತಿಕ ಆಚರಣೆಗಳ ಬಗ್ಗೆ ಅರಿಯುವುದು.

೪. ಕ್ಯಾತಪ್ಪನ ಪರಿಕಲ್ಪನೆಯನ್ನು ಈಗಾಗಲೇ ಸಾಂಕೇತಿಕವಾಗಿ ಬರಹ ರೂಪದಲ್ಲಿ ಪ್ರಕಟವಾದ ಲೇಖನಗಳ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ವಿವೇಚಿಸುವುದು. ಆ ಮೂಲಕ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ಲೋಕದೊಳಗಿನ ಜೀವಸತ್ವವನ್ನು ಶೋಧಿಸುವುದು. ಶಿಷ್ಟ ಹಾಗೂ ಜಾನಪದ ಬದುಕುಗಳ ಮಧ್ಯೆ ಇರುವ ಭಿನ್ನತೆ ಹಾಗೂ ಸಾಮ್ಯತೆಗಳನ್ನು ಗುರುತಿಸುವುದು.

೫. ಕ್ಯಾತಪ್ಪನ ಆರಾಧನೆಯಲ್ಲಿ ಕಂಡುಬರುವ ಪ್ರಮುಖ ಸಾಂಸ್ಕೃತಿಕ ಧಾರೆಗಳ ಅನನ್ಯ ಗುಣಗಳನ್ನು ಅರಿಯುವುದು. ಕ್ಯಾತಪ್ಪನ ಬಗೆಗಿನ ಮೌಖಿಕ ಸಾಹಿತ್ಯ ಸಂಗ್ರಹಿಸುವುದರ ಜೊತೆಗೆ ವ್ಯಾಪಕ ಕ್ಷೇತ್ರಕಾರ್ಯದಿಂದ ಆ ದೈವಗಳನ್ನು ವಿಶಿಷ್ಟ ಅಧ್ಯಯನಕ್ಕೆ ಒಳಪಡಿಸಲು ಉದ್ದೇಶಿಸಲಾಗಿದೆ.

೬. ಕ್ಯಾತಪ್ಪನ ಕುರಿತು ಕೇವಲ ಸಾಂಕೇತಿಕ ಬರಹಗಳು ರಚನೆಯಾಗಿವೆ ಹೊರತು, ಆತನ ಬಗ್ಗೆ ಇದುವರೆಗೂ ಯಾವುದೇ ಸಮಗ್ರ ಅಧ್ಯಯನ ನಡೆದಿಲ್ಲ, ಹಾಗಾಗಿ ಪ್ರಸ್ತುತ ಸಂಶೋಧನೆಯ ಮುಖ್ಯ ಉದ್ದೇಶವು ಕರ್ನಾಟಕದ ಕ್ಯಾತಪ್ಪ ದೈವಗಳ ಸಾಂಸ್ಕೃತಿಕ ಕಥನದ ಅಧ್ಯಯನವಾಗಿದೆ.

### ೧.೨ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು 'ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ' ಎಂಬ ಪ್ರಬಂಧಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸ್ಪಷ್ಟತೆಗಾಗಿ ಅಧ್ಯಯನದ ವ್ಯಾಪ್ತಿಯನ್ನು ಕ್ಯಾತಪ್ಪನ ಮೂಲ ನೆಲೆ ಚನ್ನಮ್ಮನಾಗತಿಹಳ್ಳಿಯ ಪುರ್ಲೆಹಳ್ಳಿ ಬಳಿ ಇರುವ ವಸತಿದಿಬ್ಬದ ಹಟ್ಟಿ, ಚಿತ್ರದುರ್ಗದ ಕರವಿನಕಟ್ಟೆ, ಮೇಲುದುರ್ಗದ ಗೊಲ್ಲರಕಟ್ಟೆ, ಯರಬಳ್ಳಿ, ದಿಂಡದಹಳ್ಳಿ,

ಚಿಕ್ಕಜಾಜೂರು, ಇಸ್ಸಮುದ್ರ ಗೊಲ್ಲರಹಟ್ಟಿ, ಕೇತೇದೇವರಹಟ್ಟಿ, ಗಾಣದಾಳು ಗೊಲ್ಲರಹಟ್ಟಿ, ಬುಕ್ಕಪಟ್ಟಣ ಕೇತೇದೇವರಹಟ್ಟಿ, ಚಾಮರಾಜನಗರದ ಬಿಳಿಗಿರಿರಂಗನಬೆಟ್ಟದ ಕೆ.ಗುಡಿ, ತುಮಕೂರು ಗುಬ್ಬಿ ಗೊಲ್ಲರಹಟ್ಟಿ, ದೇವರಹಟ್ಟಿ, ಎತ್ತಪ್ಪನಹಟ್ಟಿ, ಟಿ.ಎನ್.ಕೋಟೆ, ಪರಶುರಾಂಪುರ, ಡಿ.ಉಪ್ಪಾರಹಟ್ಟಿ, ಸೂರನಹಳ್ಳಿ, ಕ್ಯಾತಗೊಂಡನಹಳ್ಳಿ, ಹೊನ್ನೂರು, ಕೂಡ್ಲಿಗಿ ಕ್ಯಾಸನಗೆರೆ, ಚಿಕ್ಕಜ್ಯೋಗಿಹಳ್ಳಿ, ಗೋವಿಂದಗಿರಿ, ಬೊಮ್ಮಗಟ್ಟ, ನಡುವಲಹಟ್ಟಿ, ಸೂರಮ್ಮನಹಳ್ಳಿ ಕರಡಿಹಳ್ಳಿ, ಜರ್ಮಲಿ, ಶಿವಾಪುರ, ಬೊಮ್ಮನಗೊಂಡನಹಳ್ಳಿ ಗೊಲ್ಲರಹಟ್ಟಿ, ಮೊಳಕಾಲ್ಮೂರು ಹೊಸಹಟ್ಟಿ, ಅಣ್ಣೆಬೆಟ್ಟ, ಶಿವಗಂಗೆಬೆಟ್ಟದ ಬಸಾಪುರ, ಡಿ.ಉಪ್ಪಾರಹಟ್ಟಿ, ಕೊರ್ಲಕುಂಟೆ, ಆಂಧ್ರದ ಐಗರ್ಲಹಳ್ಳಿ, ಪೆರಗುಪಾಳ್ಯ, ಪಗಡಲಬಂಡೆ, ಪುಲಸಲಮರಡಿ, ಬಂಜಗೆರೆ, ಚೌಳೂರು, ಗೌರೀಪುರ ಮುಂತಾದ ಸ್ಥಳಗಳನ್ನು ಕ್ಷೇತ್ರಾಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಹೀಗೆ ಕ್ಯಾತಪ್ಪ ದೈವವನ್ನು ಮುಖ್ಯವಾಗಿರಿಸಿಕೊಂಡು ವ್ಯಾಪಕ ಕ್ಷೇತ್ರಕಾರ್ಯ ಮಾಡಿ ಕ್ಯಾತಪ್ಪನ ಆಚರಣೆ-ಸಂಪ್ರದಾಯಗಳನ್ನು ಕುರಿತು ಅಧಿಕೃತ ವ್ಯಕ್ತಿಗಳು, ದೇವಸ್ಥಾನಗಳ ಗೌಡರು, ಪೂಜಾರಿಗಳಿಂದ, ದೇವರ ಆರಾಧಕರಿಂದ ಹಾಗೂ ಜನಪದ ಹಾಡುಗಾರರಿಂದ ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನವು ಈಗಾಗಲೇ ಕ್ಯಾತಪ್ಪನ ಬಗ್ಗೆ ನಡೆದಿರುವ ಅಧ್ಯಯನಗಳ ಹಾಗೂ ಸಮೀಕ್ಷೆಗಳ ಮುಖಾಂತರ ದೊರೆತ ಅಗತ್ಯವಾದ ಮಾಹಿತಿಯನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

### ೧.೩ ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಾಯಗಳನ್ನಾಗಿ ವಿಭಾಗ ಮಾಡಿಕೊಳ್ಳಲಾಗಿದೆ. **ಮೊದಲನೆ ಅಧ್ಯಾಯವು** ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಆಗಿದ್ದು ಇದು ನಿಬಂಧದ ವಿಧಿ-ವಿಧಾನ, ಸ್ವರೂಪ ಮತ್ತು ವ್ಯಾಪ್ತಿಯನ್ನು ಪರಿಶೀಲಿಸುವುದರೊಂದಿಗೆ ಅಧ್ಯಯನದ ಹಿನ್ನೆಲೆ, ಬುಡಕಟ್ಟು ಸಮುದಾಯ ಮತ್ತು ದೈವದ ಬಗೆಗೆ ಇದುವರೆಗೆ ನಡೆದ ಸಮೀಕ್ಷೆ, ಅಧ್ಯಯನದ ಚೌಕಟ್ಟು ಮೊದಲಾದ ವಿವರಗಳನ್ನು ಒಳಗೊಂಡಿದೆ.

**ಅಧ್ಯಾಯ ಎರಡು** ಜನಪದರಲ್ಲಿ ಕ್ಯಾತಪ್ಪ ದೈವದ ವಿಶ್ವಾಸಾರ್ಹತೆಯ ಸಾಂಸ್ಕೃತಿಕ ಕಥನ ಇದರಲ್ಲಿ ದೈವದ ಉಗಮ, ವಿಕಾಸ, ಕ್ಯಾತಪ್ಪನ ಹುಟ್ಟು ಬೆಳವಣಿಗೆ, ಕ್ಯಾತಪ್ಪ ಪದದ ಅರ್ಥ ಮತ್ತು ನಿಷ್ಪತ್ತಿ, ಕ್ಯಾತಪ್ಪನ ಪವಾಡಗಳು ಮತ್ತು ದೈವದ ತಾತ್ವಿಕತೆ ಮೊದಲಾದುಗಳ ಬಗ್ಗೆ ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಮೂರು** ಕರ್ನಾಟಕದಲ್ಲಿ ಕ್ಯಾತಪ್ಪ ದೈವದ ಸಂವೇದನಾಶೀಲ ಆರಾಧನಾ ನೆಲೆಗಳು ಇದರಲ್ಲಿ ದೈವಗಳ ಆರಾಧನಾ ಸ್ಥಳ, ಆ ಪ್ರದೇಶದ ಜನಪದ ಸಂಸ್ಕೃತಿ ಮತ್ತು ಅಲ್ಲಿನ ಸಾಂಸ್ಕೃತಿಕ ಮಹತ್ವ, ಮತ್ತು ದೈವಗಳ ಜಾತ್ರೆ, ಉತ್ಸವ, ಹಬ್ಬ-ಹರಿದಿನ,

ಆಚರಣೆ ನಂಬಿಕೆಗಳು, ಪುರಾಣ ಮತ್ತು ಐತಿಹ್ಯಗಳನ್ನು ಕುರಿತ ಅಧ್ಯಯನ ನಡೆಸಲಾಗಿದೆ. ಅಲ್ಲದೆ ರೇಖಾನಕ್ಷೆ ಹಾಗೂ ಛಾಯಾಚಿತ್ರದ ಮೂಲಕ ಪರಿಚಯವನ್ನು ಮಾಡಿಕೊಡಲಾಗಿದೆ.

**ಅಧ್ಯಾಯ ನಾಲ್ಕು** ಕ್ಯಾತಪ್ಪದೈವ ಮತ್ತು ಮೌಖಿಕ ಸಾಹಿತ್ಯದ ಸತ್ಯಾವಲೋಕನ ಜನಪದ ಪರಂಪರೆಯಲ್ಲಿ ಕಂಡುಬರುವ ಕ್ಯಾತಪ್ಪ ದನಗಾಹಿಯಾಗಿ, ಸಾಂಸ್ಕೃತಿಕ ವೀರನಾಗಿ ಹಾಗೂ ಪುರಾಣ ಪುರುಷನಾಗಿ ಆರಧಾನೆಗೆ ಒಳಪಟ್ಟಿದ್ದಾನೆ. ಈತನನ್ನು ಕುರಿತಂತೆ ಕಾಡುಗೊಲ್ಲರ ಸಮುದಾಯದಲ್ಲಿನ ಮೌಖಿಕ ಸಾಹಿತ್ಯ ಹೇರಳವಾಗಿ ಸೃಷ್ಟಿಯಾಗಿದೆ. ಕ್ಯಾತಪ್ಪನನ್ನು ಕುರಿತ ಜನಪದ ಗೀತೆ, ಸೋಬಾನೆಪದ, ಪವಾಡ. ಕತೆಗಳು, ಪುರಾಣ ಮತ್ತು ಐತಿಹ್ಯಗಳನ್ನು ಬಳಸಿಕೊಂಡು ಅಧ್ಯಯನ ನಡೆಸಲಾಗಿದೆ.

ಈ ಪ್ರಬಂಧದ ರಚನೆಯ ಸಂದರ್ಭದಲ್ಲಿ ಎಲ್ಲಿಯೂ ಸಹ ನಕಲು ಸಂದರ್ಭಗಳನ್ನು ಸೃಷ್ಟಿಸಿಕೊಂಡಿರುವುದಿಲ್ಲ. ಮತ್ತು ಚಾರಿತ್ರಿಕ ಅಂಶಗಳು ಆತನು ಸುತ್ತಾಡಿದ ಪ್ರದೇಶಗಳನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ ಅಲ್ಲಿ ನಡೆಸುವಂತಹ ಸಂಪ್ರದಾಯ–ಆಚರಣೆಗಳಿಗೆ ಹೆಚ್ಚಿನ ಆದ್ಯತೆ ಕೊಡಲಾಗಿದೆ. ಕೇತಪ್ಪನ ಆಚರಣೆಗಳನ್ನು ನಿಗದಿಪಡಿಸಿದ ದಿನದಂತೆ ಭಾಗವಹಿಸಿ ಅಲ್ಲಿನ ಅಂಶವನ್ನು ಟೇಪ್ ರೆಕಾರ್ಡರ್ ಮತ್ತು ಛಾಯಾಚಿತ್ರದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಅಧ್ಯಾಯ ಐದು** ಕ್ಯಾತಪ್ಪದೈವದ ಬಗ್ಗೆ ಕಾರ್ಯಾತ್ಮಕ ಪ್ರಕಾರಗಳ ಆಧಾರಗಳು ಇದರಲ್ಲಿ ಜನಪದ ಪರಂಪರೆಯಲ್ಲಿ ಅನನ್ಯತೆ ಉಳಿಸಿಕೊಂಡಿರುವ ಆಚಾರ ವಿಚಾರ, ರೂಢಿ ಸಂಪ್ರದಾಯ, ಇಲ್ಲಿನ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ಕೇಂದ್ರಗಳು, ಬೆಡಗು, ಕಟ್ಟೆಮನೆಗಳನ್ನು ಕಾಣಬಹುದು. ಇಲ್ಲಿನ ಪಶುಪಾಲಕ ವಲಸೆಗಾರರ ಆಚರಣೆಗಳನ್ನು ಕುರಿತು ಈ ಪ್ರದೇಶದ ವಕ್ತೃಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ದಾಖಲಿಸಲಾಗಿದೆ. ಅಲ್ಲಿನ ಹಬ್ಬ ಕುಣಿತ, ಪ್ರದರ್ಶನಾತ್ಮಕ ಕಲೆಗಳನ್ನು ಪ್ರಸ್ತಾಪಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ನೆಲೆಗಳ ಏರಿಳಿತಗಳನ್ನು ವಿವರಿಸಲಾಗಿದೆ. ಮತ್ತು ಹಬ್ಬ, ಜಾತ್ರೆ, ಉತ್ಸವ, ಜೀವನಾವರ್ತನ ಕ್ರಿಯೆಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಆರು** ಬಹುಸಂಸ್ಕೃತಿ ಮತ್ತು (ಕ್ಯಾತಪ್ಪ)ದೇಶಿ ಜಾತ್ರೆಯ ಮಹಾಲೋಕೋಕ್ತಿ ಇದರಲ್ಲಿ ಜಾತ್ರೆಯ ಒಟ್ಟು ನಂಬಿಕೆ, ಸಂಪ್ರದಾಯ–ಆಚರಣೆಗಳನ್ನು ದಾಖಲಿಸಲಾಗಿದೆ. ಜಾತ್ರೆಯಲ್ಲಿ ಕಂಡು ಬರುವ ವರ್ತಮಾನದ ಪಲ್ಲಟಗಳು. ಯಾವ ಯಾವ ಸಂದರ್ಭಗಳಲ್ಲಿ ಕ್ಯಾತಪ್ಪನ ಆಚರಣೆಗಳು ಉಳಿದುಕೊಂಡಿವೆ ಎಂಬುವುದನ್ನು ಜನಪದರ ಅಭಿಪ್ರಾಯದ ಮೂಲಕ ಗುರುತಿಸಲಾಗಿದೆ. ಕ್ಯಾತಪ್ಪನ ಪರಂಪರೆಯ ಮುಂದುವರಿಕೆಯ ಸಾಧ್ಯತೆ, ಆಚರಣೆಗಳು, ಆತನಿಗೆ ಒಪ್ಪಿಸುವ ಹರಕೆಗಳು, ಕುರಿತಂತೆ ಕೂಲಂಕಷವಾಗಿ ಈ ಅಧ್ಯಾಯದಲಿ ವಿವರಿಸಲಾಗಿದೆ.

**ಅಧ್ಯಾಯ ಏಳರಲ್ಲಿ** ಸಮಾರೋಪ; ಈ ಅಧ್ಯಾಯದಲ್ಲಿ ನನ್ನ ಒಟ್ಟು ಸಂಶೋಧನೆಯಲ್ಲಿ ಕಂಡುಕೊಂಡ ಫಲಿತಗಳು, ಸಲಹೆಗಳು ಹಾಗೂ ಕೇತ್ರಕಾರ್‍ಯದ ಅನುಭವಗಳು ಮತ್ತು ಅಧ್ಯಯನದ ಸಾಧ್ಯತೆಗಳನ್ನು ಕ್ರೋಢೀಕರಿಸಿ ಅವುಗಳನ್ನು ವಿವರಿಸಲಾಗಿದೆ. ಈ ಬುಡಕಟ್ಟು ದೈವಗಳಲ್ಲಿ ಕ್ಯಾತಪ್ಪನ ಸಾಂಸ್ಕೃತಿಕ ಕಥನ ಮತ್ತು ವರ್ತಮಾನದ ಪಲ್ಲಟಗಳು, ಆತನ ಪರಂಪರೆಯ ಮುಂದುವರಿಕೆಯ ಸಾಧ್ಯತೆಗಳಲ್ಲಿನ ಸಾಂಸ್ಕೃತಿಕ ಅನನ್ಯತೆಯನ್ನು ಕುರಿತು ಗಮನಾರ್ಹವಾಗಿ ಚರ್ಚಿಸಲಾಗಿದೆ.

ಹೀಗೆ ಈ ಮಹಾಪ್ರಬಂಧವು ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡಿದೆ. ಆಧುನಿಕತೆಯ ಮುಂದುವರಿದಂತೆಲ್ಲ ಸಂಸ್ಕೃತಿಯು ಬದಲಾವಣೆಗೊಳ್ಳುತ್ತ ಹೋಗುತ್ತದೆ. ಬದಲಾವಣೆ ಎಂದರೆ ಸಂಪೂರ್ಣ ಹೊಸತಲ್ಲ. ಮೂಲ ಸಂಸ್ಕೃತಿಯೇ ಹೊಸತನ್ನು ಸೇರಿಸಿಕೊಳ್ಳುವುದು. ಇದರ ಮೇಲೆ ಶಿಷ್ಟ ಸಂಸ್ಕೃತಿಯ ಪ್ರಭಾವವು ಹೆಚ್ಚಾಗಿ ಆಗಿರುತ್ತದೆ. ಇಂತಹ ಹಲವಾರು ಬದಲಾವಣೆಗಳು ಕ್ಯಾತಪ್ಪನ ಸಂಪ್ರದಾಯ ಆಚರಣೆಗಳಲ್ಲಿ ಕಂಡುಬಂದರೂ ಆದರ ಅನನ್ಯತೆಯನ್ನು ಉಳಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಅದನ್ನು ಸಂಗ್ರಹಿಸಿ, ದಾಖಲಿಸುವ ಮತ್ತು ಅಧ್ಯಯನದ ಮೂಲಕ ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಮಾಡಲಾಗಿದೆ.

### ೧.೪ ಅಧ್ಯಯನದ ವಿಧಿ ವಿಧಾನಗಳು

ಕ್ಯಾತಪ್ಪ ದೈವಗಳ ಕುರಿತ ಇದುವರೆಗಿನ ಸಂಶೋಧನೆಗಳು ಪುರಾಣ ದೃಷ್ಟಿಕೋನದಿಂದ ಅವಲೋಕಿಸಲಾಗಿದೆ. ಪ್ರಸ್ತುತ ಅಧ್ಯಯನದ ದೃಷ್ಟಿಕೋನ ಭಿನ್ನತೆಯಿಂದ ಕೂಡಿದ್ದು, ದೈವಗಳ ಅಧ್ಯಯನದ ಬಹುಶಿಸ್ತಿಯ ನೆಲೆಗಳನ್ನು ಗುರುತಿಸಲು ಭೌಗೋಳಿಕ ಸಿದ್ಧಾಂತ, ಪ್ರದಶನಾತ್ಮಕ ಸಿದ್ಧಾಂತ, ಸಾಂಸ್ಕೃತಿಕ ಸಿದ್ಧಾಂತ, ಮಾನವಶಾಸ್ತ್ರ ಸಿದ್ಧಾಂತ ಮತ್ತು ದೇಸಿ ಸಿದ್ಧಾಂತವನ್ನು ಅಧ್ಯಯನ ಮಾಡಲು ಅಳವಡಿಸಿಕೊಳ್ಳಲಾಗಿದೆ. ಜನಪದರ ಪ್ರಜ್ಞೆ, ಭಾವನೆಗಳು, ಆಚರಣೆಗಳು, ಸಂಪ್ರದಾಯಗಳು, ಕಥನಗಳು, ಜಾತ್ರೆ, ಉತ್ಸವಗಳನ್ನು ಒಳಗೊಂಡಿದೆ. ಪ್ರಸ್ತುತ ಪ್ರಬಂಧ ಕರ್ನಾಟಕದ ಕ್ಯಾತಪ್ಪ ದೈವಗಳ ಸಾಂಸ್ಕೃತಿಕ ಅಧ್ಯಯನ ಹಾಗೂ ಅದರ ವಿವರಣೆಗೆ ಸಂಬಂಧಿಸಿದಂತೆ ಜನಪದರನ್ನು ನೇರವಾಗಿ ಭೇಟಿ ಮಾಡಿ ವಕ್ತೃಗಳಿಂದ ಮಾಹಿತಿ ಸಂಗ್ರಹಣೆ ಮಾಡಲಾಗಿದೆ. ಮತ್ತು ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ದೈವಗಳ ಅಧ್ಯಯನ ಕ್ರಮ, ಅವುಗಳ ಸ್ವರೂಪ, ದೈವಗಳ ಬಗ್ಗೆ ಇದುವರೆಗೆ ನಡೆದಿರುವ ಅಧ್ಯಯನದ ಬಗೆಗೆ ಸ್ಥೂಲವಾದ ವಿವರಣೆಯನ್ನು ನೀಡಲಾಗಿದೆ. ಈ ಅಧ್ಯಯನವು ಪ್ರಧಾನವಾಗಿ ದೈವದ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯವನ್ನೇ ಅವಲಂಬಿಸಿದೆ. ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶಗಳಿಗೆ ಭೇಟಿ ನೀಡಿ

ಕ್ಯಾತಪ್ಪ ದೈವಾರಾಧನೆಗೆ ಸಂಬಂಧಿಸಿದ ವಕ್ತೃಗಳನ್ನು ಸಂದರ್ಶಿಸುವ ಮೂಲಕ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಅಡಕಗೊಳಿಸಲಾಗಿದೆ.

### ೧.೪.೧ ದತ್ತಾಂಶ ಸಂಗ್ರಹಣೆ

ಈ ಹಿಂದೆ ನಡೆದ ಅಧ್ಯಯನಗಳು ಯಾವ ದೃಷ್ಟಿಕೋನದಡಿ ನಡೆದಿವೆ ಎಂಬುವುದನ್ನು ಲೇಖನಗಳು, ಗ್ರಂಥಗಳು, ನಿಯತಕಾಲಿಕೆಗಳು, ಪತ್ರಿಕೆಗಳು ಹೀಗೆ ಅನೇಕ ಅಂಶಗಳಿಂದ ತಿಳಿಯಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದತ್ತಾಂಶಗಳ ಸಂಗ್ರಹಣೆ ಮಾಡಿ ಸೂಕ್ಷ್ಮ ವಿಶ್ಲೇಷಣೆಯ ಮೂಲಕ ಈ ಪ್ರಬಂಧಕ್ಕೆ ಅಳವಡಿಸಲಾಗಿದೆ.

### ೧.೪.೨ ಸಂದರ್ಶನ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಆಂಧ್ರದ ಅಮರಾಪುರ, ಬೆಸ್ತರಹಳ್ಳಿಯ ಬೊಮ್ಮದೇವರ ತೋಪು, ಚಾಮರಾಜ ನಗರದ ಬಿಳಿಗಿರಿ ರಂಗನಾಥನ ಬೆಟ್ಟದ ಕೆ.ಗುಡಿ, ಕನ್ನೇರ ಕಾಲೋನಿ, ಸಂಪಿಗೆತೋಪು, ತುಮಕೂರು ಜಿಲ್ಲೆ ತುಪ್ಪದಕೋಣದ ಗೊಲ್ಲರಹಟ್ಟಿ, ದೇವರಹಟ್ಟಿ, ಗುಬ್ಬಿ, ಶಿರಾ ತಾಲ್ಲೂಕಿನ ಬುಕ್ಕಪಟ್ಟಣದ ಕೇತೇದೇವರಹಟ್ಟಿ, ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರ, ಪುರ್ಲೆಹಳ್ಳಿ ಬಳಿ ಕ್ಯಾತಪ್ಪನ ವಸತಿ ದಿಬ್ಬದಹಟ್ಟಿ, ಟಿ.ಎನ್.ಕೋಟೆ, ಜಾಜೂರು, ಪಿ.ಗೌರೀಪುರ, ಸಿದ್ದೇಶ್ವರನದುರ್ಗ, ದ್ಯಾವರನಹಳ್ಳಿ, ಹಿರಿಯೂರು ತಾಲ್ಲೂಕಿನ ಯರಬಳ್ಳಿ ಗೊಲ್ಲರಹಟ್ಟಿ, ಬಳ್ಳಾರಿ ಜಿಲ್ಲೆಯಲ್ಲಿರುವ ಜರ್ಮಲಿ, ಬೊಮ್ಮಗಟ್ಟ, ಮರಿಯಮ್ಮನಹಳ್ಳಿ, ಆಲೂರು, ಸೂರಗೊಂಡನಹಳ್ಳಿ, ಗೋವಿಂದಗಿರಿ, ಕ್ಯಾಸನಕೆರೆ, ಗುಂಡಮಣಗು, ಶಿವಾಪುರ, ದಾವಣಗೆರೆಯ ದಿಂಡದಹಳ್ಳಿ, ಅನಗೋಡು, ಹದಡಿ, ಲೋಕಿಕೆರೆ, ಹಿರಿಯೂರು, ಚನ್ನಮ್ಮನಾಗತಿಹಳ್ಳಿ, ಬಂಜಗೆರೆ, ಗಾಣದಾಳು, ಜಾನಕಲ್ಲು, ಜನ್ನೇನಹಳ್ಳಿ ಮುಂತಾದ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಕ್ಯಾತಪ್ಪದೈವಗಳ ಕುರಿತು ಜನಪದರು ಕಟ್ಟಿರುವ ಮೌಖಿಕ ಕಾವ್ಯಗಳು, ಕಥನಗಳು, ಐತಿಹ್ಯ ಮತ್ತು ಜಾತ್ರೆಯ ಆಚರಣಾಲೋಕ ಮತ್ತು ವರ್ತಮಾನದ ಸಂದರ್ಭದಲ್ಲಿ ಕ್ಯಾತಪ್ಪದೈವಗಳ ಬಗ್ಗೆ ಇರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅತಿ ಮುಖ್ಯವಾದಂತಹ ವಿಷಯಗಳ ಸಂಗ್ರಹಣೆಯ ಸಂದರ್ಭದಲ್ಲಿ ಛಾಯಾ ಚಿತ್ರಗಳನ್ನು ತೆಗೆದುಕೊಂಡು ಕ್ಯಾತಪ್ಪ ದೈವಗಳ ನೆಲೆಗಳಿರುವ ಪ್ರದೇಶದ ಭೂಪಟಗಳ ಕರಡುಗಳನ್ನು ತಯಾರಿಸಿಕೊಳ್ಳಲಾಗಿದೆ. ಕ್ಯಾತಪ್ಪನನ್ನು ಕುರಿತ ಬೇರೆ ಬೇರೆ ಸ್ಥಳಗಳಲ್ಲಿನ ವಿಶಿಷ್ಟವಾದ ಸಾಂಸ್ಕೃತಿಕ ಹಾಗೂ ವೈಚಾರಿಕ ಅಂಶಗಳ ಬಗೆಗೆ ಹೆಚ್ಚಿನ ಗಮನಹರಿಸಲಾಗಿದೆ.

### ೧.೪.೩ ಅಧ್ಯಯನದ ಸಾಧನಗಳು

ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನ ಎಂಬ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಲು ಅಗತ್ಯ ಸಾಧನಗಳಾದ ವೀಡಿಯೋ ಕ್ಯಾಮೆರಾ, ವಾಯ್ಸ್ ರೆಕಾರ್ಡ್‌ರ್, ಬಹು ಮಾಧ್ಯಮಗಳನ್ನು ಬಳಸಿಕೊಂಡು ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಈ ದೈವದ ಸಾಂಸ್ಕೃತಿಕ ಅನನ್ಯತೆಯನ್ನು ಎತ್ತಿಹಿಡಿಯುವ ಗಂಭೀರವಾದ ಗ್ರಂಥಗಳು, ಅಥವಾ ಲೇಖನಗಳು ಪ್ರಕಟವಾಗಿರದ ಕಾರಣ ಇಂತಹ ಅಧ್ಯಯನ ಅತ್ಯವಶ್ಯಕವಾದುದಾಗಿದೆ. ಇದುವರೆಗೆ ಪ್ರಕಟವಾದ ಲೇಖನಗಳು ಕೇವಲ ಕೆಲ ಆಚರಣೆ ಸಂಪ್ರದಾಯಗಳ ವರದಿಯನ್ನು ಮಾಡಿವೆಯೇ ಹೊರತು ಅವುಗಳ ಹಿಂದಿರುವ ತಾತ್ವಿಕತೆಯನ್ನು ಗುರುತಿಸಿಲ್ಲ. ಆದ್ದರಿಂದ ಸಂಪ್ರದಾಯಿಕ ಆಚರಣೆಗಳನ್ನು ಮಾನವ ಶಾಸ್ತ್ರೀಯ, ಸಮಾಜಶಾಸ್ತ್ರೀಯ, ಮನಃಶಾಸ್ತ್ರೀಯ ಮತ್ತು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಈ ಅಧ್ಯಯನಕ್ಕೆ ಪೂರಕವಾದ ಸಾಧನಗಳನ್ನು ಉಪಯೋಗಿಸಿಕೊಂಡು ಅಗತ್ಯ ಮಾಹಿತಿ ಸಂಗ್ರಹಿಸಿ ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

### ೧.೫ ಅಧ್ಯಯನದ ಇದುವರೆಗಿನ ಸಮೀಕ್ಷೆಯ ಸಂಶ್ಲೇಷಣೆ

ಕ್ಯಾತಪ್ಪನನ್ನು ಕುರಿತ ಸಂಶೋಧನಾತ್ಮಕ ಅಧ್ಯಯನಗಳು ಹೆಚ್ಚಾಗಿ ನಡೆದಿಲ್ಲ. ಆದರೆ ಆತನ ಪುರಾಣ, ಕಥೆ, ಕಾವ್ಯಗಳನ್ನು ಒಳಗೊಂಡ ಬರಹ ಹಾಗೂ ಬಿಡಿ ಬಿಡಿಯಾದ ಲೇಖನಗಳು ಅಲ್ಲಲ್ಲಿ ಪ್ರಕಟವಾಗಿವೆ. ಇನ್ನು ಕೆಲವು ಜಾತ್ರಾ ಆಚರಣೆಗೆ ಸಂಬಂಧಿಸಿ ಸಾಂದರ್ಭಿಕ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಒಟ್ಟಾರೆಯಾಗಿ ಇದುವರೆಗೆ ನಡೆದಿರುವ ಎಲ್ಲಾ ಸಾಂಕೇತಿಕ ಅಧ್ಯಯನಗಳ ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿದೆ.ಈ ಬಗ್ಗೆ ಸಂಶೋಧಕರೆಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ದಕ್ಷಿಣ ಭಾರತದ ದೈವಗಳ ಬಗ್ಗೆ ಕುತೂಹಲಗೊಂಡು ಸಾಕಷ್ಟು ಅಧ್ಯಯನಗಳು ನಡೆದಿವೆ. ಕ್ರಿ.ಶ.೧೮೬೭ರಲ್ಲಿ ಜರ್ಮನಿಯ ಕ್ರೈಸ್ತಪಾದ್ರಿ ಜೋಗನ್‌ಬಾಲ್ ರವರ ಜೀನ್ಯಾಲಜಿ ಆಫ್ ದಿ ಸೌತ್ ಇಂಡಿಯನ್ ಗಾಡ್ಸ್ ಕೃತಿಯ ನಾಲ್ಕು ಭಾಗಗಳಲ್ಲಿ ಮೊದಲನೆ ಅಧ್ಯಾಯದಲ್ಲಿ ತ್ರಿಮೂರ್ತಿಗಳ ಬಗ್ಗೆ, ಮೂರನೆ ಅಧ್ಯಾಯದಲ್ಲಿ ಗ್ರಾಮದೇವತೆಗಳ ಬಗೆಗೆ ವಿಸ್ತಾರವಾದ ಚರ್ಚೆಯನ್ನು ಮಾಡಿದ್ದಾರೆ. ನಾಲ್ಕನೆ ಅಧ್ಯಾಯದಲ್ಲಿ ಉಳಿದ ದೈವಗಳು ಮತ್ತು ಋಷಿಮುನಿಗಳ ವಿವರಗಳಿವೆ. "ಗ್ರಾಮ ದೇವತೆಗಳನ್ನು ಪೂಜಿಸಲು ಅಸಹ್ಯಪಟ್ಟುಕೊಳ್ಳುತ್ತಿದ್ದರೆಂದೂ, ಶಿಷ್ಟ ದೇವರುಗಳು ಕಷ್ಟದಿಂದ ಪಾರುಮಾಡದಿದ್ದಾಗ ವೈದಿಕರು ಗ್ರಾಮ ದೇವತೆಗಳ ಮೊರೆ ಹೋಗುತ್ತಿದ್ದರು. ಆದರೂ ಕಡಿಮೆ"[೭] ಎಂದಿದ್ದಾರೆ. ಇವರ ಹೇಳಿಕೆಯಲ್ಲಿ ವೈದಿಕರಿಗೆ ಗ್ರಾಮ ದೇವತೆಗಳ ಮೇಲೆ ಅಸಡ್ಡೆ ಇದ್ದು ಕೆಲವು

ಸಂದರ್ಭಗಳಲ್ಲಿ ಮಾತ್ರ ಗ್ರಾಮ ದೇವತೆಯನ್ನು ಆಶ್ರಯಿಸುತ್ತಿದ್ದರೆಂಬುವುದು ಸ್ಪಷ್ಟವಾಗುತ್ತದೆ. ಆದರೆ ಗ್ರಾಮ ದೇವತೆಗಳ ಹಬ್ಬ, ಜಾತ್ರೆಯಂದು ವೈದಿಕರು ಗ್ರಾಮ ದೇವತೆಯನ್ನು ಅಲಂಕರಿಸಿ ಅಡ್ಡೆಯ ಮೇಲೆ ಮೆರವಣಿಗೆ ಮಾಡಿ ರಥಕ್ಕೇರಿಸಿ ದೈವ ಕಾರ್ಯ ನಡೆಸಿಕೊಡುವುದನ್ನು ಕಾಣಬಹುದು. ಅಲ್ಲದೆ ಬಹುತೇಕ ಗ್ರಾಮದೇವತೆಗಳು ವೈದಿಕ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ವೈದಿಕರಿಂದಲೇ ಆರಾಧಿಸಲ್ಪಡುವುದನ್ನು ಕಾಣಬಹುದಾಗಿದೆ.

ಕ್ರಿ.ಶ.೧೮೯೭ರಲ್ಲಿ ಅಬ್ಬೆದುಬೈ ರವರು 'ಹಿಂದು ಮ್ಯಾನರ್ಸ್ ಆಫ್ ಕಸ್ಟಮ್ಸ್ ಅಂಡ್ ಸೆರಮನ್ನಿಸ್' ಕೃತಿಯಲ್ಲಿ ದೇವತೆಗಳ ಬಗೆಗೆ ಕೂಲಂಕಷವಾಗಿ ಚರ್ಚಿಸಿದ್ದಾರೆ. "ಭಾರತೀಯ ಸಂಪ್ರದಾಯದಲ್ಲಿ ದೇವತೆಗಳೆಂದು ಪರಿಗಣಿಸಿ ಪೂಜಿಸಲ್ಪಡುವ ಪ್ರಾಣಿ, ಪಕ್ಷಿಗಳ ಬಗ್ಗೆ ಅವುಗಳಲ್ಲೂ ಮಂಗ, ಬಸವ, ಗರುಡ, ಹಾವು, ಮೀನು ಇವುಗಳು ದೇವಸ್ಥಾನದಲ್ಲಿ ಪೂಜಿಸಲ್ಪಟ್ಟಿವೆ"[೮] ಎಂದು ವಿವರಿಸಿದ್ದಾರೆ. ಈ ವಿದ್ವಾಂಸರ ಪ್ರಕಾರ ದೇವತೆಗಳು ಏರುವ ಪ್ರಾಣಿ ವಾಹನಗಳನ್ನು ಕುರಿತಂತೆ ದೈವವಾಹನಗಳಾಗಿ ದೈವಕ್ಕೇರಿದವೆಂಬ ವಿಡಂಬನೆಯಿರಬಹುದು.

೧೯೧೩ರಲ್ಲಿ ಮಿಲ್ಬರ್ ಥಿಯೇಡರ್ ಎಲ್ಮೋರ್ ಅವರ ಆಧುನಿಕ 'ಹಿಂದು ಧರ್ಮದ ಮೇಲೆ ದ್ರಾವಿಡ ದೇವತೆಗಳು'ಎಂಬ ಕೃತಿಯಲ್ಲಿ ಹಿಂದು ಧರ್ಮದ ಮೇಲೆ ದ್ರಾವಿಡ ದೇವತೆಗಳಿಂದ ಉಂಟಾದ ಪರಿಣಾಮಗಳ ಚರ್ಚೆ ವಿಸ್ತಾರವಾಗಿದೆ. ಗ್ರಾಮದೇವತೆಗಳನ್ನು ದ್ರಾವಿಡ ದೇವತೆಗಳೆಂದು ಗುರುತಿಸಿದ್ದಾರೆ. "ಮೇಲ್ವರ್ಗದವರು ಗ್ರಾಮದೇವತೆಗಳನ್ನು ಭಯದಿಂದ ಪೂಜಿಸುತ್ತಿದ್ದಾರೆ. ಪೂರ್ವಿಕರು ಆರಾಧಿಸುವ ಗ್ರಾಮ ದೇವತೆಗಳ ಆಚರಣೆಗಳ ಹಿನ್ನೆಲೆಯಲ್ಲಿ ಯುವ ಜನಾಂಗಕ್ಕೆ ತಿಳಿಯುವುದು ಪ್ರಗತಿಯ ಕುರುಡಾಗಿದೆ ಎಂದಿದ್ದಾರೆ. ಇವರ ಹೇಳಿಕೆಯಲ್ಲಿ ಎಲ್ಮೋರರ ಸ್ವತಂತ್ರ[೯] ವಿಚಾರಧಾರೆಗಳಿವೆ. ಇವುಗಳನ್ನು ಪರಿಶೀಲಿಸಿದರೆ ಗ್ರಾಮ ದೇವತೆಗಳ ಬಗೆಗೆ ಇವರಿಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ ವೆಂಬುವುದು ತಿಳಿಯುತ್ತದೆ. ಅಲ್ಲದೆ ಗ್ರಾಮ ದೇವತೆಗಳಿಗೆ ಭವಿಷ್ಯವಿಲ್ಲ. ಹಿಂಸೆ, ಬಲಿ ಮುಂತಾದ ಮೌಢ್ಯತೆಯಿಂದಾಗಿ ಯುವ ಜನಾಂಗ ದೂರವಿರಬೇಕೆಂಬ ಕಾಳಜಿಯು ವ್ಯಕ್ತವಾಗುತ್ತದೆ.

೧೯೨೧ ರಲ್ಲಿ ಪ್ರಕಟವಾದ ಮದ್ರಾಸ್ ಚರ್ಚಿನ ಬಿಷಪ್‌ಹೆನ್ರಿ ವೈಟ್‌ಹೆಡ್ ಇವರು ತಮ್ಮ 'ದಕ್ಷಿಣ ಭಾರತದ ಗ್ರಾಮ ದೇವತೆಗಳು' ಕೃತಿಯಲ್ಲಿ ಗ್ರಾಮ ದೇವತೆಗಳಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ವೈಜ್ಞಾನಿಕವಾಗಿ ಪರಿಹರಿಸುವ ಪ್ರಯತ್ನ ಮಾಡಿದ್ದಾರೆ. ಹಿಂದು ಧರ್ಮವನ್ನು ಪ್ರಪಂಚದ ವಿವಿಧ ಧರ್ಮಗಳೊಂದಿಗೆ ಹೋಲಿಸಿ ನೋಡಿದ್ದಾರೆ. ಗ್ರಾಮ ದೇವತೆಗಳ ಹುಟ್ಟು, ಬಲಿ ಆಚರಣೆಗಳ ಬಗೆಗೆ ವೈಜ್ಞಾನಿಕ ಮಾದರಿಯ ಉತ್ತರವನ್ನು ನೀಡಿದ್ದಾರೆ. ಅಷ್ಟಲ್ಲದೆ ದಕ್ಷಿಣ ಭಾರತದ ಹಳ್ಳಿಗಳು ಅಭಿವೃದ್ಧಿಗೊಳ್ಳಬೇಕಾದರೆ

ನಂಬಿಕೆ, ಆಚರಣೆ, ವಿಧಿ-ವಿಧಾನಗಳು ನಿರ್ಮಲಗೊಂಡು ಕ್ರೈಸ್ತ ಧರ್ಮದ ನೆಲೆಯಾಗಬೇಕು ಎಂದಿದ್ದಾರೆ. ಇದು ಅವರ ಮತಾಂತರದ ಸೂಕ್ಷ್ಮತೆಯಾಗಿದೆ. ಹಾಗೂ ಗ್ರಾಮ ದೇವತೆಗಳನ್ನು ನಂಬಿದವರ ಪ್ರಮಾಣ ಹೆಚ್ಚಿದ್ದರಿಂದ ಎಲ್ಲರನ್ನು ಸೆಳೆಯುವ ಪ್ರಯತ್ನ ಲೇಖಕರಾಗಿದೆ.

೧೯೩೩ ರಲ್ಲಿ ಪ್ರಣಬ್ ಬಂದೋಪಾಧ್ಯಾಯ ರವರು ಮದರ್ಸ್ ಗಾಡ್ಸ್ ದುರ್ಗಾ ಕೃತಿಯಲ್ಲಿ ದುರ್ಗೆಯ ಶಕ್ತಿ, ಆಚರಣೆಗಳು, ದುರ್ಗ ದೇವಾಲಯದ ಐತಿಹಾಸಿಕ ಮಹತ್ವವನ್ನು ವಿವರಿಸುವುದರೊಂದಿಗೆ ಆಧುನಿಕ ಸಂದರ್ಭದಲ್ಲಿ ಬದಲಾದ ದೇವಿಯ ಸ್ವರೂಪವನ್ನು ಚರ್ಚಿಸಿದ್ದಾರೆ.

೧೯೭೧ ರಲ್ಲಿ ಎನ್.ಎಸ್.ಭಟ್ಟಾಚಾರ್ಯ ಅವರ 'ಭಾರತೀಯ ಮಾತೃದೇವತೆಗಳು' ಕೃತಿಯಲ್ಲಿ ಗ್ರಾಮದೇವತೆಗಳು ಪ್ರಾಚೀನ ಭಾರತದ ಸಾಮಾಜಿಕ ಸಂಸ್ಥೆಗಳ ಪ್ರತಿನಿಧಿಗಳಂತೆ ಕಂಡು ಬರುತ್ತವೆ ಎಂದಿದ್ದಾರೆ. ಹಾಗೂ ಈ ದೇವತೆಗಳ ಹುಟ್ಟು ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುವ ವೈಜ್ಞಾನಿಕ ದೃಷ್ಟಿಕೋನದ ಕೃತಿಯಾಗಿದೆ. ಗ್ರಾಮ ದೇವತೆಗಳ ಅಧ್ಯಯನಕ್ಕೆ ಆಯಾ ಸಮಾಜದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳು ಹೇಗೆ ಉಪಯುಕ್ತವಾಗುತ್ತವೆ ಎಂಬುವುದನ್ನು ಚರ್ಚಿಸಿದ್ದಾರೆ. ೧೯೭೮ ರಲ್ಲಿ ಮಹೇಶಚಂದ್ರ ಪ್ರಸಾದ್ ಶ್ರೀ ವಾಸ್ತವ ಅವರ 'ಭಾರತೀಯ ಕಲೆ, ಪುರತತ್ವ ಶಾಸ್ತ್ರ ಮತ್ತು ಸಾಹಿತ್ಯ ಮಾತೃದೇವತೆ ಕೃತಿಯು ಮಾತೃದೇವತಾ ಪಂಥವನ್ನು ಚಾರಿತ್ರಿಕ ದೃಷ್ಟಿಯಿಂದ ವಿವಿಧ ಕಾಲ ಘಟ್ಟಗಳಲ್ಲಿ ಅಂದರೆ ವೈದಿಕ-ವೈದಿಕ ಪೂರ್ವ, ವೈದಿಕೋತ್ತರ, ಮೌರ್ಯ, ಗುಪ್ತರಾಜ ಮನೆತನಗಳ ಕಾಲದಲ್ಲಿನ ಗ್ರಾಮ ದೇವತೆಗಳ ಸ್ವರೂಪವನ್ನು ವಿವರಿಸಿದ್ದಾರೆ. ಜನಪದ ದೇವತೆಗಳು ಎಂಬ ಅಧ್ಯಾಯದಲ್ಲಿ ಉತ್ತರ ಭಾರತದ ಪ್ರಮುಖ ದೇವತೆಗಳನ್ನು ಹೆಸರಿಸಿದ್ದಾರೆ. ಇವರು ಕೃತಿಯ ಕೊನೆಯಲ್ಲಿ ಕೊಟ್ಟಿರುವ ೪೪ ಮಾತೃ ದೇವತೆಗಳ ಚಿತ್ರಗಳು ಗ್ರಾಮ ದೇವತೆಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತವೆ. ಗ್ರಾಮ ದೇವತೆಗಳ ಅಧ್ಯಯನಕ್ಕೆ ಉಪಯುಕ್ತ ಮಾದರಿಗಳನ್ನು ನೀಡುವುದರಿಂದ ಸಂಶೋಧನಕಾರರು ಗಮನಿಸಲೇ ಬೇಕಾಗುತ್ತದೆ.

೧೯೩೬ರಲ್ಲಿ ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಸಂಪಾದಕತ್ವದಲ್ಲಿ ಪ್ರಕಟವಾದ 'ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್' ಮೂರನೆ ಸಂಪುಟದಲ್ಲಿ ಕಾಡುಗೊಲ್ಲರ ಆರಾಧ್ಯ ದೈವಗಳಲ್ಲಿ ಒಂದಾದ ಹಾಗೂ ಬುಡಕಟ್ಟಿನ ಪ್ರಧಾನವಾದ ಅಂಶಗಳನ್ನು ಹೊಂದಿರುವ ಕ್ಯಾತಪ್ಪನ ಕಳ್ಳೆ ಮುಳ್ಳಿನ ಗುಡಿಕಟ್ಟುವ ವಿಧಾನ, ಪರಿಷೆ, ಆಚರಣೆ ಬಗ್ಗೆ ಮೊದಲಿಗೆ ಪ್ರಸ್ತಾಪಿಸಿದ ಕೀರ್ತಿ ಇವರದು. ಆದರೆ 'ಕ್ಯಾತೇದೇವರ

ಮುಳ್ಳಿನ ತೇರು ಎಂದು ಗುರುತಿಸಿದ್ದಾರೆ. ಬಹು ಮುಖ್ಯವಾಗಿ ಕಾಡುಗೊಲ್ಲರ ಸಂಪ್ರದಾಯ ಆಚರಣೆಗಳ ಬಗ್ಗೆ ಸ್ಥೂಲವಾಗಿ ಪರಿಚಯಿಸಿದ್ದಾರೆ.

ಕ.ರಾ.ಕೃ ರವರು ದಕ್ಷಿಣ ಕರ್ನಾಟಕದ ಬಹುಭಾಗದಲ್ಲಿ ಕ್ಷೇತ್ರಕಾರ್ಯವನ್ನು ಮಾಡಿ ಕಾಡುಗೊಲ್ಲರ ದೇವರುಗಳಾದ ಕೂಡಲಿ ಲಿಂಗಯ್ಯ, ಗೌರಸಂದ್ರದ ಮಾರಕ್ಕ, ಭರಮಗಿರಿ ಈರಣ್ಣ ಮುಂತಾದುವರ ಕಥನ ಗೀತೆಗಳನ್ನು ಸಂಗ್ರಹಿಸಿ 'ನಾಡಮೇಲ್ಲಾ ಹರಿದಾವೆ' ಎಂಬ ಹೆಸರಿನಲ್ಲಿ ೧೯೬೨ರಲ್ಲಿ ಕಾವ್ಯ ಸಂಕಲನ ಪ್ರಕಟಿಸಿದ್ದಾರೆ. ಇದು ಗೊಲ್ಲರ ಸಾಹಿತ್ಯ ಅಧ್ಯಯನಕ್ಕೆ ಉಪಯುಕ್ತ ಮಾಹಿತಿ ನೀಡುತ್ತದೆ.

ತೀ.ನಂ.ಶಂಕರನಾರಾಯಣ ಅವರ 'ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆ' ಎಂಬ ವಿಷಯದ ಮೇಲೆ ಅಧ್ಯಯನ ಮಾಡಿ ತಮ್ಮ ಪಿಎಚ್.ಡಿ ಪ್ರಬಂಧವನ್ನು ೧೯೭೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಕಾಡುಗೊಲ್ಲರ ಸಂಸ್ಕೃತಿ, ಪುರಾಣದೇವರುಗಳು, ಸಾಂಸ್ಕೃತಿಕವೀರರು, ಸಂಪ್ರದಾಯ ಆಚರಣೆಗಳ ಅನನ್ಯತೆಯನ್ನು ಶೋಧಿಸಿದ್ದಾರೆ. ಒಂದು ಸಮುದಾಯದ ಸಂಸ್ಕೃತಿ ಮತ್ತು ಕ್ಯಾತಪ್ಪ, ಚಿತ್ತಯ್ಯ, ಕಾಟಪ್ಪ ಇನ್ನಿತರೆ ದೇವರುಗಳ ಪುರಾಣಗಳ ವಿಶ್ಲೇಷಣೆ ಹಾಗೂ ಅವುಗಳನ್ನು ಶಾಸ್ತ್ರಿಯವಾಗಿ, ವೈಜ್ಞಾನಿಕವಾಗಿ ಹೇಗೆ ಅಧ್ಯಯನ ಮಾಡಬಹುದು ಎಂಬುವುದಕ್ಕೆ ಇದೊಂದು ಆಕರ ಗ್ರಂಥವಾಗಿದೆ.

೧೯೭೯ ರಲ್ಲಿ ಪ್ರಕಟವಾದ ಬೋರಲಿಂಗಯ್ಯ ಹಿ.ಚಿ. ಅವರ 'ಉಜ್ಜನಿ ಚೌಡಮ್ಮ' ಕೃತಿ ವಿಭಿನ್ನ ರೀತಿಯದಾಗಿದೆ. ದೇವತೆಯನ್ನು ಕುರಿತಂತೆ ಬಹುಮುಖಿ ಅಧ್ಯಯನವನ್ನು ಮಾಡಿದ್ದಾರೆ. ಈ ಕೃತಿಯಲ್ಲಿ ಮಾರಮ್ಮ, ಹೆಬ್ಬಾರಮ್ಮ, ಚೌಡಮ್ಮ ಈ ಮೂರು ದೇವತೆಗಳಲ್ಲಿ ಮಾರಮ್ಮ, ಹೆಬ್ಬಾರಮ್ಮ ದೇವತೆಗಳ ಪುರಾಣಗಳಲ್ಲಿ ಏಕಾಶಯವಿರುವುದನ್ನು ಗುರುತಿಸಬಹುದು. ಹೆಬ್ಬಾರಮ್ಮ ತಾನು ಮದುವೆಯಾದ ಕೆಳಜಾತಿಯವನ ಮೇಲಿನ ದ್ವೇಷವನ್ನು ತೀರಿಸಿಕೊಳ್ಳಲು ಚೌಡಮ್ಮನ ಹಬ್ಬದಂದು ಹೊಲೆಯನಿಗೆ ಜನಿವಾರ ಹಾಕುವ, ಕೊಂಡ ತುಳಿಯುವ ಆಚರಣೆ ಹೇಗೆ ಬಂದಿತೆಂಬುವುದರ ವಿಶ್ಲೇಷಣೆ ಈ ಕೃತಿಯಲ್ಲಿ ಅನನ್ಯವಾದ ಅಂಶವಾಗಿದೆ. ಇಲ್ಲಿ ಜನಿವಾರ ಉನ್ನತ ಜಾತಿಯವರ ಸ್ವತ್ತಲ್ಲ ಅದೊಂದು ದಾರವೇ ವಿನಃ ಜಾತಿ ಲೇಪನದ ಅವಶ್ಯಕತೆಯಿಲ್ಲ ಎನ್ನುವುದು ಲೇಖಕರ ವೈಚಾರಿಕ ಅಭಿಪ್ರಾಯವಾಗಿದೆ. ಚೌಡಮ್ಮ ದೇವತೆಯ ಜೊತೆಗೆ ಹೆಬ್ಬಾರಮ್ಮನ ಕುರಿತ ಮಾಹಿತಿಗಳಿದ್ದು, ದೈವ ಹಾಗೂ ದೇವತೆಗಳ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಯನ್ನು ಒಳಗೊಂಡಿದೆ. ಮತ್ತು ಕರ್ನಾಟಕದ ವಿವಿಧ ಬುಡಕಟ್ಟುಗಳ ದೈವಾರಾಧನೆಗಳು ಕುರಿತ ಬುಡಕಟ್ಟು ದೈವಾರಾಧನೆ. ಕೃತಿಯಲ್ಲಿಯೂ ದೈವಾರಾಧನೆಯ ಸ್ವರೂಪವನ್ನು ತಿಳಿಸಿದ್ದಾರೆ.

೧೯೮೨ ರಲ್ಲಿ ಸಿದ್ದಲಿಂಗಯ್ಯ ರವರ 'ಅವತಾರಗಳು' ಕೃತಿಯಲ್ಲಿ ದೇವತೆಗಳನ್ನು ಮನೋವೈದಿಕ, ಸಾಂಸ್ಕೃತಿಕ ಚಿಂತನೆಯ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಈ ವಿಶ್ಲೇಷಣೆಯಲ್ಲಿ ನಾಸ್ತಿಕ ಪ್ರಜ್ಞೆ ಕಂಡುಬರುತ್ತದೆ. ಅಲ್ಲದೆ ಮಾನವನ ಸಹಜ ಸ್ವಭಾವಗಳಿಗೆ ತಕ್ಕಂತೆ ವಿವಿಧ ಬಗೆಯ ದೇವರುಗಳನ್ನು ಅಣಕಿಸುವ ವಿಶಿಷ್ಟ ಚಿಂತನೆಯ ಕೃತಿಯಾಗಿದೆ.

ಚನ್ನಣ್ಣ.ಡಿ.ವಾಲೀಕಾರರ 'ಹೈದರಬಾದ್ ಕರ್ನಾಟಕದ ಗ್ರಾಮ ದೇವತೆಗಳು' ಎಂಬ ಕೃತಿಯು ರಾಯಚೂರು, ಗುಲ್ಬರ್ಗ, ಬೀದರ್ ಜಿಲ್ಲೆಗಳ ಗ್ರಾಮ ದೇವತೆಗಳು ಮತ್ತು ಅಲ್ಲಿನ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಸಂದರ್ಭದಲ್ಲಿ ನಿರ್ವಹಿಸುವ ಪಾತ್ರವನ್ನು ಕುರಿತು ಸೈದ್ಧಾಂತಿಕವಾಗಿ, ವೈಜ್ಞಾನಿಕವಾಗಿ, ವಿಮರ್ಶಾತ್ಮಕವಾಗಿ ಚರ್ಚಿಸಿ ವಿಶ್ಲೇಷಿಸಿದ್ದಾರೆ. ದೇವರ ಹೆಸರಿನಲ್ಲಿ ನಡೆಯುವ ಸಾಮಾಜಿಕ ಅನಿಷ್ಟಪದ್ಧತಿಗಳನ್ನು, ಶೋಷಣೆಗಳನ್ನು ಕುರಿತು ಕೃತಿಯೂದಕ್ಕೂ ಚರ್ಚಿಸಿ. ಈ ಪದ್ದತಿಗಳನ್ನು ನಿರ್ಮೂಲನೆ ಮಾಡಬೇಕೆಂಬ ಚಿಂತನೆಯನ್ನು ನಡೆಸಿದ್ದಾರೆ. ಕೃತಿಯ ಆರಂಭದಲ್ಲಿ ಗ್ರಾಮ ದೇವತೆಗಳನ್ನು ಅಧ್ಯಯನ ಮಾಡಿರುವ ಕ್ರಮವೇ ಭಿನ್ನವಾಗಿದ್ದು, ಮುಂದಿನ ಸಂಶೋಧಕರಿಗೆ ಸಾಕಷ್ಟು ಹೊಸ ಹೊಳಹುಗಳನ್ನು ನೀಡುವ ಉಪಯುಕ್ತ ಕೃತಿಯಾಗಿದೆ.

ಲಿಂಗಯ್ಯ ಡಿ. ರವರ ೧೯೮೪ ರಲ್ಲಿ ಪ್ರಕಟವಾದ 'ಕರ್ನಾಟಕದ ಗ್ರಾಮ ದೇವತೆಗಳು' ಈ ಕೃತಿಯಲ್ಲಿ ಸಾಕಷ್ಟು ವಿವರಗಳನ್ನು ನೀಡಿದ್ದಾರೆ. ಆದಿ ಮಾನವ ನಾಗರಿಕನಾದಂತೆ ಶಿಷ್ಟ ದೇವತೆಗಳ ಸಂಖ್ಯೆಗಿಂತ ಆರ್ಥಿಕವಾಗಿ ಗ್ರಾಮ ದೇವತೆಗಳು ಸೃಷ್ಟಿಯಾದವು. ಪುರುಷ ದೈವಗಳು ಸಾಕಷ್ಟು ಸಂಖ್ಯೆಯಲ್ಲಿದ್ದವೆಂದು ಹೆಸರಿಸಿದ್ದಾರೆ. ಗ್ರಾಮ ದೇವತೆಗಳನ್ನು ಸ್ತ್ರೀ-ಪುರುಷ ದೇವತೆಗಳೆಂದು ಪರಿಭಾವಿಸಿದ್ದಾರೆ. ಜಾನಪದೀಯ ಹಿನ್ನೆಲೆಯಲ್ಲಿ ಗ್ರಾಮ ದೇವತೆಗಳ ವರ್ಗೀಕರಣವನ್ನು ಮಾಡಿದ್ದಾರೆ. ಈ ಕೃತಿ ಗ್ರಾಮ ದೇವತೆಗಳ ಅಧ್ಯಯನಕ್ಕೆ ಉತ್ತಮವಾದ ಹಿನ್ನೆಲೆಯನ್ನು ಒದಗಿಸುತ್ತದೆ.

೧೯೮೪ ರಲ್ಲಿ ಪ್ರಕಟವಾದ ಹಂಪ ನಾಗರಾಜಯ್ಯ ರವರ 'ಕರ್ನಾಟಕದ ಜಾತ್ರೆಗಳು' ಕೃತಿಯಲ್ಲಿ ಗ್ರಾಮ ದೇವತೆಗಳ ಹಬ್ಬದ ಆಚರಣೆಗೆ ಪೂರಕವಾಗಿ ನಡೆಯುವ ಜಾತ್ರೆಗಳನ್ನು ವಾಣಿಜ್ಯ ಚಟವಟಿಕೆಯೊಂದಿಗೆ ಕಲೆತುಕೊಂಡಿರುವ ಜನ ಜೀವನದ ಸಾಂಸ್ಕೃತಿಕ ಸಂಬಂಧಗಳನ್ನು ವಿವರಿಸಲಾಗಿದೆ. ಜಾತ್ರೆಯೊಂದಿಗೆ ಗ್ರಾಮ ದೇವತೆಗಳ ಪಾತ್ರ ಮತ್ತು ವೈಶಿಷ್ಟ್ಯತೆಯನ್ನು ವಿವರಿಸಿದ್ದಾರೆ. ಆಧುನಿಕತೆಯ ಹಿನ್ನೆಲೆಯಲ್ಲಿ ಜಾತ್ರೆಗಳ ಸ್ವರೂಪ ಮತ್ತು ಬದಲಾಗುತ್ತಿರುವ ಪ್ರಕ್ರಿಯೆಯನ್ನು ತುಂಬಾ ಸೂಕ್ಷ್ಮವಾಗಿ ಗುರುತಿಸಿದ್ದಾರೆ.

೧೯೮೮ ರಲ್ಲಿ ಪ್ರಕಟವಾದ ಶಿವಕುಮಾರಸ್ವಾಮಿ ಸಿ.ಎಸ್.ರವರ ಸಂಪಾದಕತ್ವದ 'ಕರ್ನಾಟಕದ ಜಾತ್ರೆಗಳು' ಕೃತಿಯಲ್ಲಿ ನಾಡಿನಾದ್ಯಂತ ನಡೆಯುವ ಜಾತ್ರೆಗಳು, ಜಾತ್ರೆಗಳಿಗಿರುವ ಪ್ರಾದೇಶಿಕ ಹಿನ್ನೆಲೆ, ಕಲೆ, ಸಮಾಜ, ಧರ್ಮ, ಸಂಸ್ಕೃತಿ ಹಾಗೂ

ಸಾಹಿತ್ಯದ ಹಿನ್ನೆಲೆಯಲ್ಲೂ ಜಾತ್ರೆಗಳು ಮಹತ್ವದ ಸ್ಥಾನವನ್ನು ಇಂದಿಗೂ ಪಡೆದುಕೊಂಡಿವೆ. ಅಲ್ಲದೆ ಶಿಷ್ಟ ದೇವತೆಗೆ ಸಂಬಂಧಿಸಿದ ಜಾತ್ರೆಗಳನ್ನು ಮಠದ ಜಾತ್ರೆಗಳೆಂದೂ, ಗ್ರಾಮ ದೇವತೆಗೆ ನಡೆಯುವ ಜಾತ್ರೆಗಳನ್ನು ಗುಡಿ ಜಾತ್ರೆಗಳೆಂದು ಕರೆದಿದ್ದಾರೆ.

ಕಾಳೇಗೌಡ ನಾಗವರ ರವರು 'ಕಾಡುಗೊಲ್ಲರ ಹಟ್ಟಿ ಒಂದು ಅಧ್ಯಯನ' ಪ್ರಬಂಧದಲ್ಲಿ ಗೊಲ್ಲರ ಆರಾಧನಾ ದೈವಗಳ ರೂಪುರೇಷೆ ದೈವರಾಧನೆಯಲ್ಲೂ ತೀವ್ರ ಭಕ್ತಿಭಾವದ ತೀವ್ರತೆ ಹೇಗಿರುತ್ತದೆ ಎಂಬುವುದನ್ನು ವಿಶ್ಲೇಷಿಸಿದ್ದಾರೆ.

ಕೃಷ್ಣಮೂರ್ತಿ ಹನೂರು ರವರು 'ಚಿತ್ರದುರ್ಗ ಜಿಲ್ಲೆಯ ಪ್ರಮುಖ ಬುಡಕಟ್ಟುಗಳಾದ ಮ್ಯಾಸಬೇಡ ಮತ್ತು ಕಾಡುಗೊಲ್ಲರ' ಬಗ್ಗೆ ವಿಸ್ತೃತ ಕ್ಷೇತ್ರಕಾರ್ಯ ನಡೆಸಿ ಜನಪದ ಮಹಿಳೆಯರನ್ನು ಕುರಿತಂತೆ 'ಕತ್ತಲದಾರಿ ದೂರ' (೧೯೮೧), ಜನಪದ ವೀರಗೀತೆಗಳು (೧೯೮೨), ಎಂಬ ಎರಡು ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರು ಅತ್ಯಂತ ಪರಿಶ್ರಮದಿಂದ ಮಾಹಿತಿ ಸಂಗ್ರಹಿಸಿ ಅದನ್ನು ಶಾಸ್ತ್ರಿಯವಾಗಿ ವರ್ಗೀಕರಿಸಿದ್ದಾರೆ. ಈ ಕಥನಗೀತೆಗಳ ಕೃತಿಯಲ್ಲಿರುವ ಅಧ್ಯಯನ ಪೂರ್ಣವಾಗಿದೆ.

ಮೀರಾಸಾಬಿಹಳ್ಳಿಶಿವಣ್ಣ ರವರು 'ಕಾಡುಗೊಲ್ಲ ಇಬ್ಬರು ಸಾಂಸ್ಕೃತಿಕವೀರರು' ಕುರಿತ ಮಹಾಪ್ರಬಂಧವನ್ನು ೧೯೯೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಕೃತಿಯಲ್ಲಿ ಕಾಡುಗೊಲ್ಲರ ಸಂಪ್ರದಾಯದ ಒಳಪದರುಗಳನ್ನು ಎಳೆ ಎಳೆಯಾಗಿ ಬಿಡಿಸಿಟ್ಟಿದ್ದಾರೆ. ಅದುವರೆಗೂ ಅಜ್ಞಾತವಾಗಿದ್ದ ಮೂವತ್ತಕ್ಕೂ ಹೆಚ್ಚು ಕಾಡುಗೊಲ್ಲರ ಈರಗಾರರು ಹಾಗೂ ಈರಗಾತಿಯರ ಬಗ್ಗೆ ಪ್ರಥಮವಾಗಿ ಬೆಳಕುಚೆಲ್ಲಿದಲ್ಲದೆ, ಕ್ಯಾತೆದೇವರ ಹುರುಳಿ-ನವಣೆ ವ್ರತಾಚರಣೆ ಮತ್ತು ಕಳ್ಳೆಮುಳ್ಳಿನ ಜಾತ್ರೆಯ ವಿವರಣೆ ನೀಡಿದ್ದಾರೆ. ಇವರ ಕೃತಿಗಳು ಕಾಡುಗೊಲ್ಲರ ಸಂಸ್ಕೃತಿ ಮತ್ತು ಕಾವ್ಯ ಗ್ರಹಿಕೆಗೆ ಹೆಚ್ಚು ಸಹಾಯಕವಾಗಿವೆ.

ಅವರೇ ಹೇಳಿರುವಂತೆ "ಕಾಡುಗೊಲ್ಲರ ಇಡೀ ಜೀವನವೆಲ್ಲ ದೈವಭಕ್ತಿ ವ್ಯಾಪಿಸಿದೆ. ಅವರು ಹಾಡಿರುವ ಈ ಗೀತೆಗಳು ಅವರಿಗೆ ತಮ್ಮ ದೈವದ ಮಹಿಮೆ ಮಾತ್ರ ಮುಖ್ಯವಾಗಿದೆ"[೧೦] ಎಂಬ ಅಂಶ ಎದ್ದು ಕಾಣುತ್ತದೆ. ಕಥಾ ಸೌಂದರ್ಯವನ್ನಾಗಲಿ, ಕಾವ್ಯ ಸತ್ವವನ್ನಾಗಲಿ ಎಲ್ಲಿಯೂ ಲಕ್ಷಿಸಿದಂತೆ ಕಂಡುಬರುವುದಿಲ್ಲ. ಕ್ಯಾತಪ್ಪ ಜನಪದರ ಜೀವನಾಡಿ ನಿಂತಿದ್ದಾನೆ.

ಹಿರೇಮಠ ಎಸ್.ಎಸ್. ಕರ್ನಾಟಕದ ಜನಪದರು ಮತ್ತು ಬುಡಕಟ್ಟು ಸಮುದಾಯಗಳು ಆಚರಿಸುವ ಹಬ್ಬಗಳು ಕುರಿತಂತೆ ೧೯೯೭ರಲ್ಲಿ ಕರ್ನಾಟಕ ಸಂಸ್ಕೃತಿಯ ಪರಂಪರೆಯ ಮಾಲಿಕೆಯಲ್ಲಿ ಪ್ರಕಟವಾದ 'ಹಬ್ಬಗಳು-ಜಾತ್ರೆಗಳು' ಎಂಬ ಕೃತಿಯಲ್ಲಿ ಕಾಡುಗೊಲ್ಲರ ಹಬ್ಬಗಳು, ಜಾತ್ರೆಗಳು, ಕುಲದೇವರುಗಳ ಬಗ್ಗೆ ತಮ್ಮದೇ ಆದ ವಿಶ್ಲೇಷಣೆ ನಡೆಸಿದ್ದಾರೆ.

೧೯೯೭ ರಲ್ಲಿ ಪ್ರಕಟವಾದ ಸಿದ್ದಲಿಂಗಯ್ಯ ರವರ 'ಗ್ರಾಮ ದೇವತೆಗಳು' ಈ ಕೃತಿ ಒಂದು ಜಾನಪದೀಯ ಅಧ್ಯಯನವಾಗಿದ್ದು ಬೆಂಗಳೂರು ಜಿಲ್ಲೆಯ ದೇವತೆಗಳನ್ನು ಹೆಚ್ಚಾಗಿ ವಿಶ್ಲೇಷಿಸಿದ್ದಾರೆ. ವೈದೀಕರಣ ಆಧುನಿಕರಣದ ಒಂದು ಭಾಗವಾಗಿ ಪ್ರತಿಷ್ಠಿತ ದೇವತೆಗಳಿಗೆ ಸಿಗುವ ಸೌಲಭ್ಯಗಳೆಲ್ಲ ಗ್ರಾಮ ದೇವತೆಗಳಿಗೆ ಸಿಗುತ್ತದೆ ಎಂದಿದ್ದಾರೆ. ಕರ್ನಾಟಕದ ಗ್ರಾಮ ದೇವತೆಗಳನ್ನು ಸಮಗ್ರ ಅಧ್ಯಯನ ಮಾಡಿರುವ ಇವರು ಗ್ರಾಮ ದೇವತೆಗಳನ್ನು ಮೂರು ರೀತಿಯ ವರ್ಗೀಕರಣ ಮಾಡಿ ಸಂಶೋಧನೆಗೆ ಹೊಸ ಆಯಾಮವನ್ನು ನೀಡಿದ್ದಾರೆ.

೨೦೦೧ ರಲ್ಲಿ ಪ್ರಕಟವಾದ ನಿಂಗಣ್ಣ ಸಣ್ಣಕ್ಕಿ ರವರ 'ಶಂಬಾ ಜೋಶಿರವರ ಸಾಹಿತ್ಯದಲ್ಲಿ ಗ್ರಾಮ ದೇವತೆಗಳು' ಎಂಬ ಕೃತಿಯಲ್ಲಿ ಭಾರತೀಯ ಸಂಸ್ಕೃತಿ ದೇವಾಲಯಗಳಲ್ಲಿದೆ. ಗ್ರಾಮ ದೇವತೆಗಳಿಗಾಗಿ ದೇವಾಲಯಗಳು ನಿರ್ಮಾಣವಾಗಿವೆ ಎಂದಿದ್ದಾರೆ. ಅಲ್ಲದೆ ಗ್ರಾಮ ದೇವತೆಗಳನ್ನು ವೈದಿಕ ಮತ್ತು ಅ ವೈದಿಕ ದೇವತೆಗಳೆಂದು ವಗೀಕರಿಸಿದ್ದಾರೆ. ಅಪಾರ ಸಂಬಂಧ, ದೇವತೆ, ಪೂಜಾ ಆಚರಣಾ ದೇವತೆ, ಲಿಂಗ ಪ್ರಕಾರ ದೇವತೆಗಳೆಂದು ವಗೀಕರಿಸಿದ್ದಾರೆ.

೨೦೦೩ ರಲ್ಲಿ ಪ್ರಕಟವಾದ ತಿಮ್ಮಯ್ಯ ರವರ 'ಶಿರಾ ತಾಲ್ಲೂಕಿನ ಗ್ರಾಮ ದೇವತೆಗಳು' ಎಂಬ ಸಂಶೋಧನಾ ಪ್ರಬಂಧದಲ್ಲಿ ದೈವ ಸೃಷ್ಟಿಯ ಕಾರಣಗಳನ್ನು ಕುರಿತು ಚರ್ಚಿಸಿದ್ದಾರೆ. ಗಂಗಾಧರ ದೈವಜ್ಞ ರವರು 'ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ' ಎಂಬ ಕೃತಿಯಲ್ಲಿ ಬುಡಕಟ್ಟು ಪುರಾಣ ನಿರೂಪಿಸುವ ಸಂದರ್ಭದಲ್ಲಿ ಕ್ಯಾತಪ್ಪನ ಪುರಾಣವನ್ನು ಚಿತ್ರಿಸಿದ್ದಾರೆ.

ಮೇತ್ರಿ ಕೆ.ಎಂ. ಅವರ 'ಕೃಷ್ಣಗೊಲ್ಲರ ಕಥನ ಕಾವ್ಯಗಳು' (೨೦೦೦) ಎಂಬ ಸಂಕಲನದಲ್ಲಿ ಸಾಂಸ್ಕೃತಿಕ ವೀರರಾದ ಈರಣ್ಣ, ಗೌರಸಮುದ್ರದ ಮಾರಕ್ಕ, ಕಾಟಯ್ಯ, ಚಿತ್ತಯ್ಯ, ನಿಂಗಣ್ಣ(ಕ್ಯಾತಪ್ಪ), ಬೊಮ್ಮಲಿಂಗ ಮೊದಲಾದವರ ಕುರಿತ ಕಾವ್ಯ ಸಂಗ್ರಹಿಸಿದ್ದಾರೆ.

ಮಲ್ಲಿಕಾರ್ಜುನ.ಕೆ.ಎಂ. ಅವರು 'ಕಾಡುಗೊಲ್ಲರ ಜನಪದ ಮಹಾ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ' ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ೨೦೦೭ ರಲ್ಲಿ ಮಹಾಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಕಾಡುಗೊಲ್ಲ ಸಮುದಾಯದಲ್ಲಿ ಪ್ರಚಲಿತದಲ್ಲಿರುವ ಆರಾಧನೆಗಳು, ಸಾಂಸ್ಕೃತಿಕ ವೀರರು, ಪುರಾಣ ದೇವರುಗಳು ಮತ್ತು ಕಾಡುಗೊಲ್ಲರ ನಡುವೆ ಬದುಕು ಬಾಳುವೆ ಮಾಡಿದ, ಧಾರ್ಮಿಕ ಚೌಕಟ್ಟು ನಿರ್ಮಿಸಿದ ಕ್ಯಾತಪ್ಪ,(ಕ್ಯಾತೆಲಿಂಗ,) ಕಾಟಪ್ಪ,(ಕಾಟಮಲಿಂಗ) ಚಿತ್ತಯ್ಯ, (ಚಿತ್ತರಲಿಂಗ,) ಪಾತಪ್ಪ (ಪಾತೇಲಿಂಗ) ಇವರುಗಳ ಬಗೆಗಿನ ಮಹಾ ಕಾವ್ಯಗಳನ್ನು

ಅಂತರ್‌ಶಿಸ್ತಿನ ಅಧ್ಯಯನದ ಮೂಲಕ ವಿಶ್ಲೇಷಿಸಿದ್ದಾರೆ. ಕಾಡುಗೊಲ್ಲರ ಮಹಾ ಕಾವ್ಯಗಳ ಅಧ್ಯಯನಕ್ಕೆ ಇದು ಒಂದು ಆಕರ ಗ್ರಂಥವಾಗಿದೆ.

ವೀರೇಂದ್ರಕುಮಾರ್.ಬಿ.ಪಿ. ಅವರು ಏಪ್ರಿಲ್-ಮಾರ್ಚ್ ೨೦೦೦ರಲ್ಲಿ ದುರ್ಗದ ಸಿರಿಗನ್ನಡ ತ್ರೈಮಾಸಿಕದಲ್ಲಿ ಪ್ರಕಟಿಸಿದ 'ಬುಡಕಟ್ಟು ಸಂಸ್ಕೃತಿಯ ಹಿನ್ನೆಯಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿ ಜಾತ್ರೆ' ಎಂಬ ಕಿರು ಲೇಖನದಲ್ಲಿ ಕಾಡುಗೊಲ್ಲರ ಕ್ಯಾತಪ್ಪನ ಆಚರಣೆಯನ್ನು ಉಲ್ಲೇಖಿಸಿದ್ದಾರೆ. ಸಂಪ್ರದಾಯ, ಆಚರಣೆ, ನಂಬಿಕೆ, ಜಾತ್ರೆ, ಉತ್ಸವಗಳ ವಿವರಣೆಗೆ ಈ ಲೇಖನ ಉಪಯುಕ್ತವಾಗಿದೆ.

ಲಕ್ಷ್ಮಣ್‌ತೆಲಗಾವಿ ಅವರು ಚಿತ್ರದುರ್ಗದ 'ರಾಜಾ ಬಿಚ್ಚುಗತ್ತಿ ಭರಮಣ್ಣನಾಯಕ' ಕೃತಿಯನ್ನು ೧೦೧೫ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ದೊರೆ ಭರಮ್ಮಣ್ಣನಾಯಕನ ಜೊತೆಗೆ ಕ್ಯಾತೇಲಿಂಗನಿಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳ ವಿವರಣೆಯನ್ನು ನೀಡಿದ್ದಾರೆ.

ಮುತ್ತಯ್ಯ.ಎಸ್.ಎಂ. ಅವರು 'ಕನ್ನಡ ಜನಪದ ಮಹಾ ಕಾವ್ಯಗಳು ಸಾಂಸ್ಕೃತಿಕ ಮುಖಾಮುಖಿ' ಎಂಬ ವಿಷಯದ ಮೇಲೆ ಸಂಶೋಧನ ಅಧ್ಯಯನ ನಡೆಸಿ ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಕಾವ್ಯಗಳನ್ನು ಅಧ್ಯಯನಕ್ಕೆ ಒಳಗು ಮಾಡಿದ್ದು ಪುರಾಣ ಪಾವಿತ್ರ್ಯತೆ, ಪ್ರತಿ ನಿರ್ಮಾಣ ಪ್ರಬಲ್ಯವಾದ ಸಾಂಸ್ಕೃತಿಕ ಅನನ್ಯತೆ ಕುರಿತು ಚರ್ಚಿಸಿದ್ದಾರೆ.

ಸಾಣಿಕೆರೆ ಸಣ್ಣೋಬಯ್ಯ ಅವರು 'ಕಾಡುಗೊಲ್ಲರು ಮತ್ತು ಮ್ಯಾಸನಾಯಕರು ಸಮಾಜ ಶಾಸ್ತ್ರೀಯ ಅಧ್ಯಯನ' ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ೨೦೦೪ರಲ್ಲಿ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಕೃತಿಯಲ್ಲಿ ಕ್ಯಾತಪ್ಪನ ಕಳ್ಳೆಮುಳ್ಳಿನ ಆಚರಣೆಗೆ ಕೆಲ ವಿವರಣೆ ನೀಡಿದ್ದಾರೆ.

ಅಜ್ಜಯ್ಯ ಹೆಚ್ ಅವರು 'ಕಾಡುಗೊಲ್ಲರ ಸಮಾಜಶಾಸ್ತ್ರೀಯ ಹಾಗೂ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ೨೦೦೯ರಲ್ಲಿ ಮಹಾ ಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾನಿಲಕ್ಕೆ ಸಲ್ಲಿಸಿದ್ದಾರೆ. ಅವರು ಕ್ಯಾತಪ್ಪನ ಜಾತ್ರೆ ಹಾಗೂ ಕ್ಯಾತಪ್ಪನ ಆರಾಧಕ ಬೆಡಗುಗಳು, ಸೂತಕಾದಿ ಆಚರಣೆಗಳು ಮತ್ತು ಜಾತ್ರೆಯ ಸಾಮಾಜಿಕ ದೃಷ್ಟಿಕೋನವನ್ನು ಕುರಿತು ಚರ್ಚಿಸಿದ್ದಾರೆ. ಈ ಅಧ್ಯಯನ ಸಾಮಾಜಿಕ, ಧಾರ್ಮಿಕ ಆಚರಣೆಗಳ ಸಾಂಸ್ಕೃತಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ.

ವಿಜಯಮ್ಮ ವಿ. ಅವರು 'ಕಾಡುಗೊಲ್ಲ ಸಂಪ್ರದಾಯ ಮತ್ತು ಆಚರಣೆಗಳು' ಎಂಬ ಕೃತಿಯನ್ನು ೨೦೦೨ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಕ್ಯಾತಪ್ಪನ ಜಾತ್ರಾ ಆಚರಣೆ ಹುರುಳಿ ಕೈ ತೊಳೆಯುವುದು, ಮದುವೆ, ಋತುಮತಿ ಸೂತಕದ ಆಚರಣೆಗಳನ್ನು ಬಗೆಗಿನ ವಿವರವನ್ನು ಸಂಗ್ರಹಿಸಿದ್ದಾರೆ.

ನಾಗರಾಜ ಬಿ. ಅವರ 'ದಿಗಂಬರ ದಿಂಬ ಹೊನ್ನಾರು' ೨೦೦೫ರಲ್ಲಿ ಹೊನ್ನಾರುವಿನಲ್ಲಿ ಪ್ರಕಟವಾದ 'ದಿಗಂಬರ ದಿಂಬ' ಎಂಬ ಲೇಖನದಲ್ಲಿ ಅಲ್ಲಿಗಣೆ ಕೋಲು ಗೊಲ್ಲರ ಸಂಪ್ರದಾಯ ಸಂಸ್ಕೃತಿಗಳು ಮತ್ತು ಅವರ ಬದುಕಿನ ವಿವಿಧ ಮಜಲುಗಳನ್ನು ಪ್ರಸ್ತಾಪಿಸಿದ್ದಾರೆ.

ನಾಗರಾಜ.ಪಿ ಅವರು 'ಹಿರಿಯೂರು ತಾಲ್ಲೂಕಿನ ಕಾಡುಗೊಲ್ಲರ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ೨೦೦೮ರಲ್ಲಿ ತಮ್ಮ ಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಕೃತಿ ಪುರಾಣ ಮತ್ತು ಇತಿಹಾಸದ ಹಿನ್ನೆಲೆಯಲ್ಲಿ ಕಾಡುಗೊಲ್ಲ ಸಮುದಾಯದ ಮೇಲೆ ಆದ ಆಧುನಿಕ ಪ್ರಭಾವ ಕುರಿತು ವಿಶ್ಲೇಷಿಸಿದೆ.

ಅನ್ನಪೂರ್ಣಮ್ಮ ಅವರು ಕಾಡುಗೊಲ್ಲರ ಬಗ್ಗೆ ವಿಶೇಷ ಅಧ್ಯಯನ ನಡೆಸಿರುವುದಲ್ಲದೆ, ಅವರು ತಮ್ಮ ಅಧ್ಯಯನಗಳಲ್ಲಿ ಕ್ಯಾತಪ್ಪನ ಮುಳ್ಳಿನ ಪರಿಷೆ ದ್ರಾವಿಡ ಸಂಸ್ಕೃತಿ ಮತ್ತು ಸಾಂಸ್ಕೃತಿಕ ವೀರರ ಬಗೆಗಿನ ವಿವರಗಳನ್ನು ಸಾಂಕೇತಿಕವಾಗಿ ಪ್ರಸ್ತಾಪಿಪಿಸಿದ್ದಾರೆ.

ರೇಖಾ ಅವರು 'ಪಾವಗಡ ತಾಲ್ಲೂಕಿನ ಕಾಡುಗೊಲ್ಲ ಮಹಿಳೆಯರು' ಎಂಬ ವಿಷಯದ ಅಧ್ಯಯನ ನಡೆಸಿ ೨೦೧೩ರಲ್ಲಿ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಕ್ಯಾತೇಲಿಂಗ, ಕಾಟಮಲಿಂಗ ಇವುಗಳ ಬಗೆಗೆ ವಿವರಣೆ ನೀಡಿದ್ದಾರೆ.

ಗೌಡಪ್ಪ ಜಿ.ಇ. ರವರು 'ಚಿತ್ರದುರ್ಗ ಜಿಲ್ಲೆಯ ಜಾತ್ರೆಗಳು ಸಾಮಾಜಿಕ ಅಧ್ಯಯನ' ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿದ್ದು ೨೦೧೬ರಲ್ಲಿ ಮೈಸೂರು ವಿಶ್ವ ವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಕೃತಿಯಲ್ಲಿ ಕ್ಯಾತಪ್ಪನ ಜಾತ್ರೆಯ ಆಚರಣೆಗಳನ್ನು ಸಾಮಾಜಿಕ ದೃಷ್ಟಿಯಲ್ಲಿ ಗ್ರಹಿಸಿದ್ದಾರೆ.

ಪಾವಗಡ ತಾಲ್ಲೂಕಿನ ಸಿದ್ದಣ್ಣ ಎಸ್.ರವರು "ಕಾಡುಗೊಲ್ಲರ ಐತಿಹಾಸಿಕ ಹಾಗೂ ಚಾರಿತ್ರಿಕ ಅದ್ಯಯನ ಎಂಬ ವಿಷಯದ ಪ್ರಬಂಧವನ್ನು ೨೦೧೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಉಪ್ಪಾರಹಟ್ಟಿ ಚಿತ್ತಯ್ಯ ಪತ್ರಕರ್ತರು ಇವರು ೨೦೦೪ರಲ್ಲಿ ಬರೆದ 'ಕ್ಯಾತಪ್ಪನ ಕಳ್ಳೆಮುಳ್ಳಿನ ಜಾತ್ರೆ' ಎಂಬ ಲೇಖನ ಪ್ರಜಾವಾಣಿಯ ಕರ್ನಾಟಕ ದರ್ಶನ ಮತ್ತು ೨೦೧೦ರಲ್ಲಿ ಆಧುನಿಕತೆಗೆ ಮಾಸದ ಕಾಡುಗೊಲ್ಲರ ಕ್ಯಾತಪ್ಪನ ಜಾತ್ರಾ ಆಚರಣೆಗಳನ್ನು ವೈಚಾರಿಕವಾಗಿ ಚರ್ಚಿಸುವುದರ ಮೂಲಕ ಲೇಖನವನ್ನು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿದ್ದಾರೆ.

ವಿರೂಪಾಕ್ಷ ಜಿ. ಸಂಶೋಧನಾ ವಿದ್ಯಾರ್ಥಿ ಹಂಪಿ ಅವರು 'ಕಾಡುಗೊಲ್ಲರ ಕಟ್ಟೆಮನೆ ಹಾಗೂ ಗುಡಿಕಟ್ಟುಗಳು, ಬೆಡಗುಗಳು' ಸೇರಿದಂತೆ ಸಂವಾದ ತ್ರೈಮಾಸಿಕ ಪತ್ರಿಕೆಯಲ್ಲಿ ಕ್ಯಾತಪ್ಪನ ಜಾತ್ರಾ ಆಚರಣೆಗಳ ವಿವರಗಳನ್ನೊಳಗೊಂಡ ಲೇಖನ ಪ್ರಕಟಿಸಿದ್ದಾರೆ.

ಇತ್ತೀಚೆಗೆ 'ಜನಿಗೆ' ಎಂಬ ತ್ರೈಮಾಸಿಕ ಪತ್ರಿಕೆಯು ಹೊರ ಬರುತ್ತಿದ್ದು ಜಯರಾಮ ರವರು ಸಂಪದಾಕರಾಗಿದ್ದಾರೆ. ಈ ಪತ್ರಿಕೆಯಲ್ಲಿ ಕಾಡುಗೊಲ್ಲರ ಆರಾಧ್ಯ ದೈವಗಳು, ಸಂಸ್ಕೃತಿ, ಸಂಪ್ರದಾಯಗಳು, ಆಚರಣೆಗೆ ಸಂಬಂಧಿಸಿದ ಸಣ್ಣಪುಟ್ಟ ಲೇಖನಗಳು ಪ್ರಕಟವಾಗುತ್ತಿವೆ. ಕಾಡುಗೊಲ್ಲ ಬುಡಕಟ್ಟು ಸಮುದಾಯದ ಆರಾಧ್ಯ ದೈವಗಳ ಸಾಂಸ್ಕೃತಿಕ ಅನನ್ಯತೆ. ಮತ್ತು ಚಲನಶೀಲತೆ, ಆರಾಧನೆ, ಸಂಪ್ರದಾಯ ಆಚಾರ-ವಿಚಾರ ಮತ್ತು ಮೌಖಿಕ ನುಡಿ ಸಂಪತ್ತನ್ನು ಒಳಗೊಂಡ ಲೇಖನಗಳು ಪ್ರಕಟಗೊಂಡಿವೆ. ಒಟ್ಟಾರೆಯಾಗಿ ದೈವ ಹಾಗೂ ಗ್ರಾಮ ದೇವತೆಗಳ ಸ್ವರೂಪ, ಉಗಮ, ವಿಕಾಸ, ದೇವರುಗಳ ಜಾತ್ರೆ, ಆಚರಣೆ ಸಂಪ್ರದಾಯದ ಕುರಿತ ಪ್ರಕಟಿತ ಬರಹಗಳ ಸಮೀಕ್ಷೆ ಇದಾಗಿದೆ.

ಇಷ್ಟೆಲ್ಲ ಅಧ್ಯಯನಗಳು ನಡೆದಿದ್ದರೂ ಕ್ಯಾತಪ್ಪ ದೈವಗಳ ಬಗ್ಗೆ ಪ್ರಾಸಂಗಿಕವಾಗಿ ಮಾತ್ರ ಕ್ಯಾತಪ್ಪನ ಬಗ್ಗೆ ಲೇಖನಗಳನ್ನು ಪ್ರಕಟಿಸಲಾಗಿದೆ. ಹಾಗಾಗಿ ದೈವಗಳನ್ನು ಪ್ರಾದೇಶಿಕ ಅನನ್ಯತೆಯೊಂದಿಗೆ ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ. ಪ್ರಸ್ತುತ ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನದಲ್ಲಿ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ತುಮಕೂರು, ಚಾಮರಾಜನಗರ ಈ ಪ್ರದೇಶದಲ್ಲಿ ಕಂಡುಬರುವಂತಹ ಎಲ್ಲಾ ಜಾತಿ, ಧರ್ಮದವರನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ಕ್ಯಾತಪ್ಪನ ಸಂಪ್ರದಾಯ-ಆಚರಣೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಮಾಹಿತಿಯನ್ನು ಸಂಗ್ರಹ ಮಾಡಲಾಗಿದೆ. ಹಾಗೂ ಹಿಂದಿನಿಂದಲೂ ಇದುವರೆಗೆ ನಡೆದುಕೊಂಡು ಬಂದಿರುವ ಸಂಪ್ರದಾಯಗಳ ಬಗೆಗೆ ಅಧ್ಯಯನ ನಡೆಸಿ ಮಾಹಿತಿಯನ್ನು ಸಂಗ್ರಹಿಸಿ ದಾಖಲಿಸಲಾಗಿದೆ.

**ಅಡಿ ಟಿಪ್ಪಣಿಗಳು**

೧. ಶಶಿಕಲಾ, ೨೦೧೩ ಟಿ.ನರಸೀಪುರ ತಾಲ್ಲೂಕಿನ ಹಬ್ಬ ಮತ್ತು ಜಾತ್ರೆಗಳು ಪುಟ ೨.

೨. ಶಂಬಾಜೋಶಿ-ಸಂಪುಟ೧-೩ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೩. ತೀ.ನಂ.ಶಂಕರನಾರಾಯಣ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ಆಚರಣೆಗಳು. ಪುಟ,೧೫೨

೪. ಮೀರಾಸಾಬಿಹಳ್ಳಿ ಶಿವಣ್ಣ.ಪಿ.ಬಿ. ಕಾಡುಗೊಲ್ಲರ ಸಂಸ್ಕೃತಿ ಪುಟ ೬.

೫. ಶಿವಕುಮಾರ್೨೦೦೯, ಮಂಡ್ಯ ಜಿಲ್ಲೆ ಗ್ರಾಮದೇವತೆಗಳು ಸಾಂಸ್ಕೃತಿಕ ಅಧ್ಯಯನ ಪುಟ-೬೭

೬. ಸಣ್ಣರಾಮ, ಬುಡಕಟ್ಟು ಸಂಸ್ಕೃತಿ, ೨೦೦೧,ಪುಟ-೨

೭. ರಾಜಪ್ಪ ದಳವಾಯಿ, ಕನ್ನಡದಲ್ಲಿ ಸಂಸ್ಕೃತಿ ನಿರ್ವಚನ, ಸಿ.ವಿ.ಜಿ.ಇಂಡಿಯಾ ಬೆಂಗಳೂರು ಪುಟ ೧೨೪

೮. ಶಿವಕುಮಾರ್ ೨೦೦೯,ಮಂಡ್ಯ ಜಿಲ್ಲೆ ಗ್ರಾಮದೇವತೆಗಳು ಸಾಂಸ್ಕೃತಿಕ ಅಧ್ಯಯನ ಪುಟ ೨.

೯. ಮಲ್ಲಿಕಾರ್ಜುನ ಕೆ.ಎಂ. ಕಾಡುಗೊಲ್ಲರ ಜನಪದ ಮಹಾಕಾವ್ಯಗಳಲ್ಲಿ ಮುಖಾಮುಖಿ ಸಂಘರ್ಷ ಪುಟ.೧೨೦

೧೦. ಕೃಷ್ಣಮೂರ್ತಿ ಹನೂರು, ೧೯೯೩, ಜನಪದ ವೀರ ಗೀತೆಗಳು ಪುಟ-೪.

ಅಧ್ಯಾಯ : ಎರಡು

# ಜನಪದರಲ್ಲಿ ಕ್ಯಾತಪ್ಪ ದೈವದ ವಿಶ್ವಾಸಾರ್ಹತೆಯ ಸಾಂಸ್ಕೃತಿಕ ಕಥನ

೨.೧. ಕ್ಯಾತಪ್ಪ ದೈವದ ಲೋಕಾನುಸಂಧಾನದ ಮಹೋನ್ನತಿ

೨.೨. ಕ್ಯಾತಪ್ಪ ಪದದ ನಿಷ್ಪತ್ತಿ ಮತ್ತು ಅರ್ಥ ವಿಸ್ತಾರದ ಹರವುಗಳು

೨.೩. ಕ್ಯಾತಪ್ಪ ದೈವದ ಜನನ ಮತ್ತು ಸಾಮಾಜಿಕ ಕಥನದ ಸೋಪಜ್ಞತೆ

೨.೪. ಕ್ಯಾತಪ್ಪ ದೈವವಾದ ಮತ್ತು ಪವಾಡಗಳ ಲೋಕಾನುಸಂಧಾನ

೨.೪.೧. ಕ್ಯಾತಪ್ಪ ದೈವದ ವಿಸ್ಮಯತೆ ಮತ್ತು ಅಲೌಕಿಕದ ತಾತ್ವಿಕತೆ

೨.೫. ಕ್ಯಾತಪ್ಪ ದೈವದ ಇತ್ಯಾತ್ಮಕ ಅನನ್ಯತೆಯ ವಿವೇಚನೆ

# ಅಧ್ಯಾಯ ೨

# ಜನಪದರಲ್ಲಿ ಕ್ಯಾತಪ್ಪ ದೈವದ ವಿಶ್ವಾಸಾರ್ಹತೆಯ ಸಾಂಸ್ಕೃತಿಕ ಕಥನ

## ೨.೧ ಕ್ಯಾತಪ್ಪ ದೈವದ ಲೋಕಾನುಸಂಧಾನದ ಮಹೋನ್ನತಿ

"ಮಾನವನ ಆತ್ಮಪ್ರಜ್ಞೆ ಅರಳಿ ಅವನು ತನ್ನ ಸುತ್ತಲಿನ ಪ್ರಪಂಚವನ್ನು ಕುತೂಹಲದಿಂದ ನೋಡಲು ಆರಂಭಿಸಿದಾಗ ಅವನಿಗೆ ತಕ್ಷಣ ಕಂಡದ್ದು ಪ್ರಕೃತಿ. ಅದರಲ್ಲಿನ ರೋಷ–ಪರಿಣಾಮ. ಸೂರ್ಯೋದಯ, ಸೂರ್ಯಾಸ್ತಮ, ಪ್ರಕೃತಿಯ ಸೊಬಗು, ಬಯಲಿನ ಹಸುರ ಹಬ್ಬ, ಗಾಳಿಯಲ್ಲಿ ನಲಿದಾಡುವ ವಿವಿಧ ಬಳ್ಳಿಯ ಹೂಗಳು, ರಾತ್ರಿ ಮಿನುಗುವ ನಕ್ಷತ್ರ, ತಂಪೆರೆಯುವ ಚಂದ್ರ, ಸಮುದ್ರದ ಹರವು, ಗಾಂಭಿರ್ಯ. ಒಂದೆಡೆ ಪ್ರಕೃತಿಯ ಕ್ರೂರತೆ, ಇನ್ನೊಂದೆಡೆ ಪ್ರಸನ್ನತೆ ಇವೆರಡನ್ನೂ ಕಂಡು ಆಶ್ಚರ್ಯ ಮತ್ತು ಸಂತೋಷ ಅವನಲ್ಲಿಯೇ ಉಂಟಾಯಿತು. ನೆಲ, ಜಲ, ಗಾಳಿ, ಬೆಂಕಿ, ಮಳೆ ಇತ್ಯಾದಿ ಪ್ರಕೃತಿಯಲ್ಲಿ ಒಂದು ಶಕ್ತಿಯಿದೆ ಎಂದು ಕಲ್ಪಿಸಿಕೊಂಡ ನಂತರ ಅದನ್ನು ನಂಬಿದ"[೧] ಈ ಕಲ್ಪನೆಯ ಹಿಂದೆ ಭಯ ಮತ್ತು ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ ಎಲ್ಲವನ್ನು ಮಾನವನ ವಿಕಾಸದ ಹಂತದಲ್ಲಿ ಕಾಣುತ್ತೇವೆ.

ಮಾನವನ ದೈವದ ಕಲ್ಪನೆ ಆಗಾಧವಾದುದು. ಭೂಮಿ, ಕಲ್ಲು, ಗಿಡ, ಮರ, ನದಿ, ಗುಡ್ಡ, ಬೆಟ್ಟ, ಸೂರ್ಯ, ಚಂದ್ರ, ಇತ್ಯಾದಿಗಳನ್ನು ಪೂಜ್ಯತೆಯಿಂದ ಆರಾಧಿಸಿಕೊಂಡು

ಬಂದ. ಆರಂಭದ ಬದುಕಿನಲ್ಲಿ ಕಂಡುಕೊಂಡ ಭಯವನ್ನು ತೊಡೆದು ತನಗೊದಗಿದ ಸಂಕಷ್ಟಗಳನ್ನು ನಿವಾರಿಸಿಕೊಳ್ಳಲು ಮನುಷ್ಯ, ದೈವದ ಕಲ್ಪನೆಗೆ ಮೊರೆ ಹೋಗಬೇಕಾಯಿತು. ಆತ ಯಾವಾಗ ಒಂದೆಡೆ ನೆಲೆ ನಿಂತು ವಾಸಿಸುವ ಸಂದರ್ಭದಲ್ಲಿ ಕ್ರೂರ ಪ್ರಾಣಿಗಳು, ಮಳೆ, ಗಾಳಿ, ಗುಡುಗು, ಮಿಂಚು, ಸಿಡಿಲು, ಬೆಂಕಿ, ಭೂಕಂಪ ಇವುಗಳಿಂದ ಉಂಟಾದ ಭಯವನ್ನು ನಿವಾರಿಸಿಕೊಳ್ಳುವ ಸಲುವಾಗಿ ದೈವದ ಕಲ್ಪನೆ ಆತನಲ್ಲಿ ಹೊಳೆಯಿತು.

"ಅದಿಮ ವ್ಯವಸ್ಥೆಯನ್ನು ದಾಟಿ ನಾಗರಿಕತೆಯ ಹೊಸ್ತಿಲನ್ನು ಮುಟ್ಟಿದ ಮೇಲೂ ಬಹಳ ಕಾಲದವರೆಗೆ ಮನುಷ್ಯ ತನ್ನ ಭೂತಕಾಲದ ಅರಂಭ ಹಂತದ ಅನೇಕ ಅಭ್ಯಾಸಗಳನ್ನು ಪೂರ್ಣವಾಗಿ ಬಿಡಲಾರದೆ ಹೋದ. ನಾಗರಿಕ ಸಮಾಜದ ಮನುಷ್ಯನ ಗ್ರಹಿಕೆಗಳು ಹಾಗೂ ನಂಬಿಕೆಗಳಲ್ಲೂ ಆದಿಮಕಾಲದ ವಿಧ ವಿಧವಾದ ನಂಬಿಕೆಗಳು ಹಾಗೆಯೇ ಅಂಟಿಕೊಂಡಿವೆ. ಅನಾಗರಿಕ ಅವಸ್ಥೆಯ ಸನ್ನಿವೇಶಗಳನ್ನು ವಿಶೇಷವಾಗಿ ತಿಳಿದುಕೊಳ್ಳುವ ಅವಶ್ಯವಿದೆ"[೨] ಕಾಡಡವಿಯಲ್ಲಿ ಗೆಡ್ಡೆಗೆಣಸು ತಿನ್ನುತ್ತ ಅಲೆಮಾರಿಯಾಗಿದ್ದ ಮನುಷ್ಯ ಒಂದೆಡೆ ನೆಲೆ ನಿಂತು ವಾಸಿಸಲು ಯಾವಾಗ ಪ್ರಾರಂಭಿಸಿದನೋ ಆವಾಗಲೇ ಅವನಲ್ಲಿ ಧೈವರಾಧನೆಯ ಕಲ್ಪನೆ ಗಟ್ಟಿಯಾಗಿ ನೆಲೆಯೂರಿತು. ದೇವರು ಎಂಬ ಕಲ್ಪನೆಯ ಹಿಂದೆ ಭಯ, ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ ಇವೆಲ್ಲವನ್ನು ಗುರುತಿಸಬಹುದು. ವಿಪತ್ತು, ಭಯ, ನಿರೀಕ್ಷೆ ಮತ್ತು ಉನ್ನತ ಮೌಲ್ಯಗಳ ಸಾಂಕೇತಿಕ ರೂಪದಲ್ಲಿ ದೇವರು ಎಂಬ ಕಲ್ಪನೆ ಮನುಷ್ಯನ ಮನಸ್ಸಿನಲ್ಲಿ ಸುಳಿದಾಡುತ್ತಲೇ ಇರುವುದನ್ನು ನಾವು ಇಂದಿಗೂ ಕಾಣಬಹುದು.

ಯಾವುದೇ ಜೀವಿ ಸತ್ತ ಮೇಲೆ ಅದರ ಜೀವನ ಕೊನೆಯಲ್ಲವೆಂದು ಅದರ ಚೈತನ್ಯ ಅಗೋಚರ ಪೂರ್ವ ಕಾಲದ ಮನುಷ್ಯ ತಿಳಿದಿದ್ದ. ಜೀವಿಯ ಚೈತನ್ಯ ಎಂದರೆ 'ಉಸಿರು' 'ಗಾಳಿ' ಎಂಬುದಾಗಿ ಆತ ಭಾವಿಸಿದ್ದ. ಗಾಳಿ ಅಥವಾ ಉಸಿರು ಎನ್ನುವುದು ಒಂದು ಚೈತನ್ಯ. ಅಂದರೆ ಸತ್ತವರ ಆತ್ಮ ಅಥವಾ ಉಸಿರು ಅಗೋಚರವಾಗಿ ಗಾಳಿಯಲ್ಲಿ ಸಂಚರಿಸುತ್ತಿರುತ್ತದೆ ಎಂಬುವುದನ್ನು ಬಲವಾಗಿ ನಂಬಿದ. ಇದನ್ನು ಆಫ್ರಿಕದ ಬುಡಕಟ್ಟು ಜನರು 'ಮನ' ಎಂದು ಕರೆಯುತ್ತಾರೆ. ಮನ ಎಂಬುವುದು ನಿರ್ಜೀವ ವಸ್ತುಗಳಲ್ಲಿರುವ ಶಕ್ತಿಯ ಸಂಕೇತವಾಗುತ್ತದೆ. ಅಂದರೆ ಚಲನಶೀಲವಲ್ಲದ ಒಂದು ಕಲ್ಲಿನಲ್ಲಿ ಸತ್ತ ಜೀವಿಯ (ಪ್ರಾಣಿ ಮತ್ತು ಮನುಷ್ಯ) ಶಕ್ತಿಯು ಅಡಗಿರಲು ಸಾಧ್ಯವೆಂಬ ತಿಳಿವಳಿಕೆಯನ್ನು ಮನುಷ್ಯ ಇಟ್ಟುಕೊಂಡಿದ್ದ. ಇದು ಮನುಷ್ಯನಲ್ಲಿ ದೇವರ ಕಲ್ಪನೆ ಮೂಡಲು ಸಾಧ್ಯವಾಯಿತು.

"ಕಾಲಾನುಕ್ರಮದಲ್ಲಿ ಮನುಷ್ಯ ಹೆಣವನ್ನು ಹೂಳಿದ ಅಥವಾ ಸಂಸ್ಕಾರ ಮಾಡಿದ

ಸ್ಥಳದಲ್ಲಿ ಆತನ ಸಂಕೇತವಾಗಿ ಕಲ್ಲು, ಗಿಡ, ಎಲೆ, ಬಳ್ಳಿ, ಕೋಲು ಇಡುವ ಪದ್ದತಿ ರೂಢಿಸಿಕೊಂಡ. ಹೀಗಾಗಿ ಅವುಗಳನ್ನು ಸತ್ತವರ ಸಂಕೇತವಾಗಿ ಬಳಕೆ ಮಾಡಿಕೊಂಡ. ಮನುಷ್ಯ ಕೂಡಲೇ ಅವರಲ್ಲಿರುವ ಚೈತನ್ಯವು ನಾಶವಾಗುವುದಿಲ್ಲವೆಂದು ಭಾವಿಸಿದನೋ ಹಾಗೆಯೇ ಆ ಚೈತನ್ಯ ಸಂಬಂಧವನ್ನು ಬದುಕಿನ ರೀತಿ–ನೀತಿಗಳ ಮೇಲೂ ಪ್ರಭಾವ ಬೀರುತ್ತಲೇ ಇರುತ್ತದೆಂದೂ ನಂಬಿದ. ತಮ್ಮ ಬದುಕು ಹಸನಾಗಲಿ ತಮ್ಮವರು ಆರೋಗ್ಯವಾಗಿರಲಿ ಎಂಬ ಕಾರಣಕ್ಕಾಗಿ ಮಾನವ ಅಂಥ ಆದೃಶ್ಯ ಶಕ್ತಿಯನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ"[೩] ಆ ಮೂಲಕ ತನ್ನ ಬದುಕಿನಲ್ಲಿ ಒಳ್ಳೆಯದನ್ನು ಸಾಧಿಸಿಕೊಳ್ಳುವ ಹಂಬಲ ಅವನದಾಗಿತ್ತು.

ಪ್ರಕೃತಿ ಶಕ್ತಿಯನ್ನು ತನ್ನ ಬದುಕಿನ ಬೆಳವಣಿಗೆಗೆ ಬಳಸಿಕೊಳ್ಳುವ ಉದ್ದೇಶದಿಂದ ಸತ್ತವರು ಕನಸಿನಲ್ಲಿ ಕಾಣಿಸಿಕೊಂಡರೆ ಅವರು ಇನ್ನು ಜೀವಂತವಾಗಿದ್ದು ಅವರು ಮಾರ್ಗದರ್ಶನ ನೀಡಲು ಬಂದಿದ್ದರೆಂಬುವುದು ಈಗಲೂ ರೂಢಿಯಲ್ಲಿದೆ. ಆದ್ದರಿಂದ ಅವರನ್ನು ಸಂತೃಪ್ತಿಪಡಿಸುವುದರ ಮೂಲಕ ನಾವು ಸದ್ಗತಿ ಪಡೆಯಬೇಕೆಂಬ ಕಾರಣಕ್ಕಾಗಿ ಮಾತಾ–ಪಿತೃ(ಹಿರಿಯರ)ಗಳ ಪೂಜೆ ಮೂಲಕ ಹಬ್ಬವನ್ನಾಗಿ ಇಂದಿಗೂ ಆಚರಿಸುತ್ತೇವೆ. ಏಕೆಂದರೆ ಪ್ರಕೃತಿಯಲ್ಲಿನ ಎಲ್ಲಾ ಶಕ್ತಿಗೂ ಮಾತೃವೇ ಮೂಲ. ಅವಳೇ ಸತ್ಯ ಎಂಬ ನಂಬಿಕೆ ಅನಾದಿ ಕಾಲದಿಂದಲೂ ರೂಪುಗೊಂಡಿದೆ. ಆಕೆ ಸೃಷ್ಟಿಕರ್ತೃಳು, ಜಗನ್ಮಾತೆ, ಲೋಕಮಾತೆ, ಜನನ–ಮರಣದ ವಿಷಯದಲ್ಲಿ ಆಕೆಯಲ್ಲಿ ಅಭೂತಶಕ್ತಿ ಇದೆ ಎಂಬ ನಂಬಿಕೆ ಅವನಲ್ಲಿ ಬೆಳೆದದ್ದರಿಂದ ಆರಂಭದ ದಿನಗಳಲ್ಲೇ ಸ್ತ್ರೀ ದೇವತೆ ಪೂಜಿಸುವ ಪದ್ಧತಿ ಬೆಳೆದು ಬಂದಿದೆ.

"ಆಹಾರ ಸಂಗ್ರಹಣೆ ಕಾಲದ ಸಂದರ್ಭದಲ್ಲಿ ಮನುಷ್ಯ ಪ್ರಾಣಿಗಳನ್ನು ಪಳಗಿಸಿ, ಪಶುಸಂಗೋಪನೆ ಪ್ರಾರಂಭಗೊಂಡಿತು. ಅಂದಿನಿಂದ ಪುರುಷ ಪ್ರಭುತ್ವ ಆರಂಭವಾಯಿತು"[೪] ಪುರುಷ ದೈವಗಳ ಸೃಷ್ಟಿಯೂ ಅಸ್ತಿತ್ವಕ್ಕೆ ಬಂದಿತು. ಅಲ್ಲದೆ ಆಯಯಾ ಸಮುದಾಯಗಳ ಸಾಂಸ್ಕೃತಿಕ ವೀರರು ದೈವವಾಗಿ ಆರಾಧನೆಗೊಂಡರು. ಸ್ತ್ರೀ ಕೃಷಿ ಅನ್ವೇಷಣೆ ಮಾಡಲು ಆರಂಭಿಸಿದಳು ಆದ್ದರಿಂದ ಸ್ತ್ರೀ ಫಲವಂತಿಯ ಸಂಕೇತವಾದಳು. ಭೂಮಿಯಲ್ಲಿ (ಸಸ್ಯ) ಧಾರಣ ಶಕ್ತಿ ಈ ಎರಡು ಒಂದೇ ರೀತಿಯಲ್ಲಿ ಕಂಡುಬಂದಿದ್ದರಿಂದ ಆ ಶಕ್ತಿಯನ್ನು ಮಾನ್ಯ ಮಾಡಿ ಆಕೆಯನ್ನು ಗೌರವಿಸಲಾಯಿತು. ಅಲ್ಲದೆ ಪುರುಷ ತನ್ನದೇ ಕೆಲಸ ಕಾರ್ಯಗಳಲ್ಲಿ ತೊಡಗಿದಾಗ ಕುಟುಂಬದ ಮೇಲ್ವಿಚಾರಣೆ ಮಕ್ಕಳ ಪಾಲನೆ ಪೋಷಣೆ, ಅಕ್ಕ ತಂಗಿಯರು, ತಮ್ಮ ತಂಗಿಯರು, ತಂದೆ ತಾಯಾಂದಿರು, ಭಾವನಾದಿನಿಯರು ಆಸರೆಯಾಗಿ ನಿಂತಳು. ಇದರಿಂದ ಸ್ತ್ರೀಗೆ ಸಮಾಜದಲ್ಲಿ ಮಹತ್ವದ ಸ್ಥಾನ ದೊರೆಯಿತು.

ಹೀಗೆ ಹುಟ್ಟು-ಫಲವಂತಿಕೆ ಮನುಷ್ಯರ ಹುಟ್ಟು-ಬೆಳವಣಿಗೆಯ ಒಂದು ಸಂಕೀರ್ಣ ರೂಪವಾಗಿ ಮಾತೃ ದೇವತೆ ಕಂಡು ಬರುತ್ತದೆ. ಫಲ ಸಮೃದ್ಧಿಯ ಏಕೈಕ ದೇವರು ಭೂಮಿಯೇ ಆಗಿರುವುದರಿಂದ ಅದೇ ನಮ್ಮ ದೇವರು ಎಂದು ನಂಬಿದರು. ಕೃಷಿ ಚಟವಟಿಕೆ ಒಂದು ಆರ್ಥಿಕ ಉದ್ಯೋಗದಂತೆ ವಿಕಾಸವಾಗಿ ಪ್ರಭುತ್ವದ ಪರಿಣಾಮ ಮಾಲೀಕತ್ವ ತನ್ನ ನೆಲೆ ಕಂಡುಕೊಂಡಿತು. ಆಸ್ತಿ ಒಡೆತನದ ಹಕ್ಕು ಬಂದಾಗ ಸ್ತ್ರೀ ಪುರುಷನ ಆಸ್ತಿಯಾದಳು.

"ಪೂರ್ವಿಕರು ದೈವದ ಕಲ್ಪನೆಯಲ್ಲಿ ಅಗಾಧವಾದ ನಂಬಿಕೆ ಮತ್ತು ಶ್ರದ್ಧೆಯುಳ್ಳವರಾಗಿದ್ದರು. ಪ್ರಕೃತಿಯ ಅಣು ರೇಣು, ತೃಣಕಾಷ್ಠಗಳಲ್ಲಿ ದೈವ ಅಥವಾ ದೇವರಿದ್ದಾನೆ ಎಂದು ನಂಬಿದ್ದರು"[೫] ನಿತ್ಯದ ಬದುಕಿನಲ್ಲಿ ದುಃಖ, ನೋವು, ಕಷ್ಟ ಹಾಗೂ ಸಂಕಟಗಳು ಎದುರಾದಾಗ ತಾವು ನಂಬಿದ ದೈವದ ಅನುಗ್ರಹ ತಪ್ಪಿದೆ. ದೈವ ಅಥವಾ ದೇವರು ತಮ್ಮ ಮೇಲೆ ಕೋಪಿಸಿಕೊಂಡಿರಬಹುದೆಂದು ಭಾವಿಸಿ ಆ ಅನುಗ್ರಹ ಸಂಪಾದಿಸಲು ಅದಕ್ಕೆ ಹರಕೆ ಸಲ್ಲಿಸುತ್ತಾ ಬಂದನು. ಹೀಗೆ ಶ್ರದ್ಧೆ ಭಕ್ತಿಯಿಂದ ಆ ದೈವವನ್ನು ಆರಾಧಿಸಿದರೆ ಅದು ತನಗೆ ಒಲಿಯುತ್ತದೆ ಅಥವಾ ಅದು ಯಾವುದೇ ರೂಪದಲ್ಲಿ ಬಂದು ದರ್ಶನವನ್ನು ಕೊಟ್ಟು ಸಂಕಷ್ಟಗಳನ್ನು ಪರಿಹರಿಸುತ್ತದೆ ಎಂಬ ಬಲವಾದ ನಂಬಿಕೆ ಹಿಂದಿನಿಂದಲೂ ಅವನಲ್ಲಿ ಉಳಿದುಕೊಂಡು ಬಂದಿದೆ.

"ದೈವವನ್ನು ತಮ್ಮಂತೆ ದೈವ(ದೇವರು)ವನ್ನು ತನ್ನಂತೆ ಬಗೆದು ಮೂರ್ತಿಯನ್ನು ಮಾಡಿ ಗುಡಿ ಕಟ್ಟಿದ. ದೈವದ ರೂಪ, ಗುಣ, ಆಕಾರಗಳನ್ನು ಕಲ್ಪಿಸಿಕೊಂಡು ಅಂತೆಯೇ ವೇಷಧರಿಸಿಕೊಂಡು ಭಾವಾವೇಷದಿಂದ ಹಾಡಿ ಕುಣಿದ. ಅದು ಹಂತ ಹಂತವಾಗಿ ಆರಾಧನೆಯಾಗಿ ರೂಢಿಗೆ ಬಂದಿತು"[೬]. ಭಯ, ಭಕ್ತಿ, ಪೂಜ್ಯತೆಯಿಂದ ಹಾಡುವುದು, ಕುಣಿತದೊಂದಿಗೆ ದೈವವನ್ನು ಒಲಿಸಿಕೊಳ್ಳಲು ಮುಂದಾದ. ಅವಾಗಲೇ ಕಲೆ, ಸಂಗೀತಗಳ ಉಗಮವಾಯಿತೆಂದು ಹೇಳಬಹುದು.

ಜನಪದರ ಮನಸ್ಸು ಯಾವುದೇ ಆಡಂಬರವಿಲ್ಲದೇ ಮುಗ್ಧತೆಯಿಂದ ಕೂಡಿರುತ್ತದೆ. ಯಾವುದೇ ಕೆಲಸ-ಕಾರ್ಯವನ್ನು ಮಾಡಲು ಆರಂಭಿಸುವ ಮೊದಲು ತಮ್ಮ ದೈವಗಳನ್ನು ಮನಸ್ಸಿನಲ್ಲಿ ನೆನೆದು ಮುಂದೆ ಸಾಗುತ್ತಾರೆ. ಯಾವುದೇ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಪಡೆಯದಿದ್ದರೂ ಕೂಡಾ ಅವರು ನಿಸರ್ಗದ ಶಿಕ್ಷಣದ ಜೊತೆಗೆ ನಾಗರಿಕ ಸಂಸ್ಕೃತಿಯನ್ನು ಅತ್ಯಂತ ಕಾಳಜಿಯಿಂದ ಕಟ್ಟಿಕೊಂಡಿದ್ದಾರೆ. ದೈವದ ಬಗೆಗಿನ ತಾತ್ವಿಕತೆಯಾಗಲೀ, ದಾರ್ಶನಿಕತೆಯಾಗಲಿ ಅದರಾಚೆಯ ಪ್ರಪಂಚ ಅವರಿಗೆ ಬೇಕಿಲ್ಲ. ತನ್ನ ಕಣ್ಣು ಮುಂದೆ ಇರುವ ಕಲ್ಲು, ಮರ ಇತ್ಯಾದಿಗಳನ್ನು ದೈವ ಎಂದು ಕಲ್ಪಿಸಿಕೊಳ್ಳುವುದಕ್ಕೆ ಸಮರ್ಥರಾದರು.

ಆದ್ದರಿಂದ ಅವರಲ್ಲಿನ ದೈವಗಳ ಕಲ್ಪನೆ ಜಡವಾದುದಲ್ಲ ಅಮೂರ್ತವಾದುದು ಎಂದೇ ಹೇಳಬಹುದು.

ಪ್ರಸ್ತುತ ಸಂದರ್ಭದಲ್ಲೂ ಜನಪದರು ದೈವವನ್ನು ಬಲವಾಗಿ ನಂಬಿದ್ದಾರೆ. ದಾರಿ ಪಕ್ಕದ ಎಕ್ಕೆಗಿಡಕ್ಕೂ, ಬಿದ್ದಿರುವ ಕಲ್ಲಿಗೂ ದೈವದ ಕಲ್ಪನೆ ಕೊಟ್ಟು ಪೂಜಿಸುವ ಮುಗ್ಧರು. ದೈವ ಅಥವಾ ದೇವರುಗಳಿಗೆ ಮನುಷ್ಯರಂತೆ ಮದುವೆ-ಹೆಂಡತಿ, ಮಕ್ಕಳು, ಅಣ್ಣ, ತಂಗಿ ಸಂಬಂಧಗಳನ್ನು ಕಲ್ಪಿಸುತ್ತಾ ಬಂದರು. “ಮನುಷ್ಯನ ಗುಣಗಳು ದೇವರಲ್ಲಿಯೂ ಇವೆ ಎಂದು ನಂಬಿರುವರು. ಆದ್ದರಿಂದಲೇ ದೇವರು ‘ಉಣ್ಣುತ್ತಾನೆ, ಉಡುತ್ತಾನೆ, ಆಡುತ್ತಾನೆ, ಪ್ರಣಯಲೀಲೆಗಳಲ್ಲಿ ತೊಡಗುತ್ತಾನೆ. ಅದಕ್ಕೆ ಅವರು ದೇವರೊಂದಿಗೆ ಸಲುಗೆಯಿಂದ ಮಾತನಾಡುತ್ತಾರೆ”[೭] ಅವನ ಕಷ್ಟ ಸುಃಖಗಳನ್ನು ವಿಚಾರಿಸುತ್ತಾರೆ. ತಮ್ಮ ಕಷ್ಟ ಸುಖವನ್ನು ಆತನ ಮುಂದೆ ಹೇಳಿಕೊಳ್ಳುತ್ತಾರೆ. ಜನಪದರಿಗೆ ದೇವರು ಎಂದರೆ ತಂದೆ, ತಾಯಿ, ಬಂಧು-ಬಳಗ ಎಲ್ಲವೂ ಆಗಿರುತ್ತಾನೆ. ಆದ್ದರಿಂದ ದೇವರನ್ನು ತಮ್ಮ ನಡುವೆ ವಾಸಿಸುವ ವ್ಯಕ್ತಿ ಎಂದು ಭಾವಿಸುವ ರೀತಿ ಅತ್ಯಂತ ಭಾವುಕವಾದುದೆಂದು ಜನಪದರಿಂದ ತಿಳಿದು ಬರುತ್ತದೆ.

“ಆದಿಮಾನವನು ನೆಲೆ ನಿಂತು ವಾಸಿಸುವುದರೊಂದಿಗೆ ನಾಗರಿಕತೆಯೆಡೆಗೆ ಹೆಜ್ಜೆ ಇಟ್ಟಾಗ. ನೈತಿಕ ಮೌಲ್ಯಗಳನ್ನು ಬೆಳೆಸಿಕೊಂಡು ಕುಟುಂಬ, ಬುಡಕಟ್ಟು ತದ ನಂತರ ಸಮಾಜವನ್ನು ನಿರ್ಮಿಸಿಕೊಂಡನು. ಮೊದಲು ಆ ಜನರ ನಂಬಿಕೆ ‘ದೆವ್ವ-ಪಿಶಾಚಿ’ ರೂಪದ ಚೈತನ್ಯದಲ್ಲಿತ್ತು. ನಂತರ ಮೂರ್ತಿ ಪೂಜೆಗೆ ಬಂದು ಕೊನೆಗೆ ದೈವ ಅಥವಾ ದೇವರ ವಿಶಾಲ ಸ್ವರೂಪವನ್ನು ಕಂಡುಕೊಂಡರು”[೮]. ದೈವದ ಕಲ್ಪನೆಯನ್ನು ಮನುಷ್ಯ ಸೃಷ್ಟಿಸಿರುವುದರ ಕುರಿತು ಡಾ. ಕೋವೂರರು ಹೇಳಿದ ಈ ವಿಚಾರ ಸ್ವೀಕಾರಾರ್ಹವಾಗಿದೆ. ಮಳೆ, ಬೆಳೆಯಿಂದ, ಕಲ್ಲು ಮಣ್ಣುಗಳಿಂದ ಊರನ್ನು ರಕ್ಷಿಸಲು, ಜನರನ್ನು ಸುಖವಾಗಿಡಲು ಗ್ರಾಮ ದೈವಗಳನ್ನು ಸ್ಥಾಪನೆ ಮಾಡಿದರು.

ದೈವವನ್ನು ಪ್ರತಿಷ್ಠಾಪಿಸಿಕೊಂಡ ನಂತರ ಅವನು ತನ್ನ ಜೀವನವನ್ನು ಕ್ರಮಬದ್ಧವಾಗಿ ನೈತಿಕವಾಗಿಡುವಂತಹ ಪ್ರಣಾಳಿಕೆಯನ್ನು ರೂಪಿಸಿಕೊಂಡನು. ತಾನು ಹೊಲ-ಮನೆ ಕೆಲಸಕ್ಕೆ ಹೋದಾಗ ತನ್ನನ್ನು ಕ್ಷೇಮದಿಂದ ಹಿಂದಿರುಗಲು ದೇವರ ಗುಡಿ ಎದುರಿನ ದೂರದಲ್ಲಿ ಮೆಟ್ಟು ಬಿಟ್ಟು ಕಣ್ಮುಚ್ಚಿ, ಇಲ್ಲವೇ ಕೈಮುಗಿಯಲು ಆರಂಭಿಸಿದಾಗ ಪ್ರತಿನಿತ್ಯ ಸಂಜೆ ತನ್ನ ಮನೆಯವರನ್ನು ಕ್ಷೇಮವಾಗಿಸಲು ಹೋಗಿ ದೇವರಿಗೆ ದೀಪ ಹಚ್ಚುವುದನ್ನು ಆರಂಭಿಸಿದಾಗ, ಅವನಲ್ಲಿ ಧರ್ಮದ ಕಲ್ಪನೆ ಆರಂಭವಾಯಿತು. ಪ್ರತಿನಿತ್ಯ ದೈವದ ಪೂಜೆ ಮಾಡುವುದು-ಕೆಲಸದಿಂದ ಬದುಕಬೇಕಾದುದು ತನಗೆ ಅಸಾಧ್ಯವೆಂದು ತಿಳಿದಾಗ

ಸೋಮವಾರ, ಮಂಗಳವಾರ, ಗುರುವಾರ, ಶುಕ್ರವಾರ, ಶನಿವಾರ ಹೀಗೆ ಒಂದೊಂದು ದಿನ ನಿಗದಿ ಮಾಡಿ ಸ್ನಾನಮಾಡಿ ದೇವರ ಗುಡಿಗೆ ಹೋಗಿ ಕೈಮುಗಿಯುವುದರಿಂದ ಅವನಲ್ಲಿ ನೇಮ-ನಿಷ್ಠೆಗಳು ಆರಂಭವಾದವು. ಆಗ ದೇವರು ತನ್ನನ್ನು ಕಾಪಾಡುವನೆಂದು ಬಗೆದು ಅವನಿಗೆ ಏನಾದರೂ ಮಾಡಬೇಕೆಂದು ಒಳಿದಾಗ ಆಗ ವಾರಕ್ಕೆ, ತಿಂಗಳಿಗೆ, ಎರಡು ತಿಂಗಳಿಗೆ, ಆರು ತಿಂಗಳಿಗೆ, ವರ್ಷಕ್ಕೆ, ಎರಡು ವರ್ಷಕ್ಕೆ ಮೂರು ವರ್ಷಕ್ಕೆ, ಹೀಗೆ ಐದು ವರ್ಷಕ್ಕೊಮ್ಮೆ  ಮೀಸಲು ನೈವೇಧ್ಯ ಕೊಡಲು ಮುಂದಾದನು. ಹೊಲ ಬಿತ್ತುವಾಗ, ಬೆಳೆ ಕೊಯ್ಯುವಾಗ, ರಾಶಿ ಮಾಡುವಾಗ ಕುರಿ, ಕೋಣ ಬಲಿ ಕೊಡುವ ಕಾರ್ಯದಿಂದ ಅವನಲ್ಲಿ ಅರ್ಪಣಾಭಾವ ಬೆಳೆಯಿತು. ಸತ್ಯವಾದ ದೈವ ಊರಿನಲ್ಲಿದ್ದಾಗ ಸುಳ್ಳು ಹೇಳುವುದಾಗಲಿ, ಕೆಟ್ಟದಾಗಿ ನಡೆದುಕೊಳ್ಳುವುದಾಗಲಿ, ಕಳವು ಮಾಡುವುದಾಗಲಿ ಅದು ಒಳ್ಳೆಯದಲ್ಲವೆಂಬ ಕಲ್ಪನೆ ಬಂದಾಗ ಇವೆಲ್ಲ ಆಗದಂತೆ ಒಳ್ಳೆಯ ಆಚಾರ-ವಿಚಾರ ಸೂತ್ರಗಳನ್ನು ರೂಪಿಸಿದವು.

ತಮ್ಮ ಮಕ್ಕಳು-ಮರಿಗಳಿಗೆ ದೈವಗಳ ಹೆಸರನ್ನಿಡುವುದರ ಜೊತೆಗೆ ದೈವವನ್ನು ಸಂಪೂರ್ಣವಾಗಿ ತನ್ನ ದಿನದ ಬದುಕಿನಲ್ಲಿ ತೊಡಗಿಸಿಕೊಂಡನು. ಊರಿನಲ್ಲಿ ಹುಟ್ಟುವ ಮಕ್ಕಳಿಗೂ ದೈವಗಳ ಹೆಸರನ್ನು ಇಡತೊಡಗಿದನು. ಜನಾಂಗಕ್ಕೆ ಬೇಕಾಗಿದ್ದ ಧರ್ಮ ಅದು ವಿಶಾಲ ಅರ್ಥ ಪಡೆದುಕೊಂಡಿದೆ. ಇದರಿಂದ ಪ್ರೀತಿ, ಪ್ರೇಮ, ವಿಶ್ವಾಸ, ಸಹಾಯ ಹಾಗೂ ಸಹಕಾರ, ದಯಾ ಗುಣಗಳು ಹುಟ್ಟಿಕೊಂಡವು. ಮಲಗುವಾಗ, ಏಳುವಾಗ, ದೈವವನ್ನು ನೆನೆಯುವುದರಿಂದ ಪ್ರಾರಂಭಿಸಿ ವಾರಕ್ಕೆ, ಹುಣ್ಣಿಮೆ, ಅಮವಾಸೆಗೆ ಪೂಜೆ ಮಾಡುವ ಪದ್ಧತಿ ರೂಢಿಸಿಕೊಂಡ. ಇದರಿಂದ ಕರ್ಮ, ಭಕ್ತಿ, ತ್ಯಾಗ, ವೈರಾಗ್ಯ, ಜ್ಞಾನ, ನಂಬಿಕೆಗಳು ಇವು ಕ್ರಮೇಣ ಸಂಸ್ಕೃತಿಯ ಬೇರಾಗಿ ನಿಂತುಕೊಂಡವು. ಮನುಷ್ಯನ ಬದುಕಿಗೆ ಬೇಗಾದ ಧರ್ಮದ ಆಚಾರ-ವಿಚಾರಗಳು ಅವನಲ್ಲಿ ಹುಟ್ಟಿಕೊಂಡವು. ಊರಿಂದೂರಿಗೆ ಹೋಗುವ, ಬರುವವರಿಗೆಲ್ಲ ದೈಗಳ ಗುಡಿಸಳೇ ಆಶ್ರಯಗಳಾದವು. ಗುಡಿ-ದೇವಾಲಯಗಳು ಜನರ ವಿಚಾರ ವಿನಿಮಯದ ಕೇಂದ್ರಗಳಾಗಿ ಮಾರ್ಪಟ್ಟವು. ಧರ್ಮದ ವೃಕ್ಷ ಬೆಳೆಯಲು ಗ್ರಾಮದ ದೈವಗಳು ತಾಯಿಬೇರುಗಳಾದವು. ಹಡೆದತಾಯಿ, ಭೂಮಿತಾಯಿ, ತಾಯಿ ಇದ್ದಂತೆ. ತಾಯಿ ಎದುರಿಗೆ ಹೀನಕಾರ್ಯ. ಕೆಟ್ಟದಾಗಿ ಮಾತನಾಡುವುದಕ್ಕೆ ಮನಸ್ಸು ಬಾರದ ಹಾಗೆ ಗ್ರಾಮದ ದೈವಗಳ ಮುಂದೆ ಹೀನಕಾರ್ಯ ಮಾಡುವುದಾಗಲಿ ಕೆಟ್ಟದ್ದೆಂಬ ಭಾವನೆ ಅವನಲ್ಲಿ ಮೂಡಿತು. ಆದ್ದರಿಂದ ಗ್ರಾಮ ದೈವ ಎದುರಿಗಿದ್ದಾಗ ಉಂಟಾದ ಭಾವನೆಗಳು ಧರ್ಮದ ರೂಪ ಹೊಂದಲು ಕಾರಣವಾಯಿತು.

"ಪ್ರೇಮ ಸ್ವರೂಪಿಯಾದ ದೈವ ಒಬ್ಬನೆ, ನಾಮ(ಹೆಸರು) ಹಲವು. ದೇವರು ನಿತ್ಯ-ಸತ್ಯವಾಗಿರುವ ನಂಬಿಕೆಯಿಂದಲೇ ಮನುಷ್ಯ ಜೀವನ ನಡೆಯುವುದು ಕಂಡು

ಬರುತ್ತದೆ. ಈ ಕಾರಣದಿಂದಲೇ ಅವನು ದೇವರಲ್ಲಿ ಅಪಾರವಾದ ನಂಬಿಕೆ ಇಟ್ಟಿದ್ದಾನೆ. ದೇವರ ಕಲ್ಪನೆ, ಪರಿಕಲ್ಪನೆ ಹಾಗೂ ಉಪಾಸನೆಗಳು ಜಗತ್ತಿನಾದ್ಯಂತ ಎಲ್ಲಾ ಜನಾಂಗಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪ್ರಚಾರದಲ್ಲಿವೆ. ಮಾನವನ ನಾಗರಿಕತೆಗೆ ಚರಿತ್ರೆ ಇದ್ದಂತೆ ದೈವಗಳಿಗೂ ಒಂದೊಂದು ಇತಿಹಾಸವಿದೆ. ಮನುಷ್ಯನಲ್ಲಿ ಗುಂಪು, ಪಂಗಡ ಇರುವಂತೆ ದೇವರಲ್ಲಿಯೂ ಇದೆ. ಪ್ರಕೃತಿ ಹಾಗೂ ಜೀವನದಲ್ಲಿ ಎದುರಾಗುವ ಪ್ರತಿಯೊಂದು ಕಷ್ಟ ಹಾಗೂ ಸಮಸ್ಯೆ ಮತ್ತು ಅವುಗಳ ನಿವಾರಣೆಗೂ ಒಂದೊಂದು ದೇವರಿವೆ"[೯].

ಒಂದೇ ಗ್ರಾಮ ಅಥವಾ ಹಟ್ಟಿ ದೇವರ ಬದಲಿಗೆ ಉಪ ದೈವಗಳನ್ನು ಸೃಷ್ಟಿಸಿಕೊಂಡು ಪೂಜಿಸಿಕೊಳ್ಳತೊಡಗಿದ. ಗ್ರಾಮ ದೈವಗಳನ್ನು ಈ ರೀತಿ ವರ್ಗೀಕರಿಸಿಕೊಂಡ. ತಮ್ಮ ಕುಟುಂಬದ ಜನ ನಡೆದುಕೊಳ್ಳುವ ದೈವಗಳಿಗೆ ಮನೆದೈವ ಅಥವಾ ದೇವರು ಎಂದು ಕರೆದುಕೊಂಡ. ಇದು ಒಂದೇ ಮನೆತನಕ್ಕೆ ಸೀಮಿತವಾಗಿರುತ್ತದೆ. ಒಂದು ಪಂಗಡ ಅಥವಾ ಬೆಡಗಿನವರು ಪೂಜಿಸುವ ದೈವ, ಕುಲದೈವ. ಮದುವೆ, ಮಂಗಳಕಾರ್ಯ, ಜವಳ ಕಾರ್ಯಗಳಲ್ಲಿ ಪೂಜಿಸಲ್ಪಡುತ್ತದೆ. ಆಮಾಸೆ–ಹುಣ್ಣಿಮೆ ದೈವ, ಮತ್ತು ಬುಡಕಟ್ಟು ದೈವ. ಸಾಮಾನ್ಯವಾಗಿ ಗ್ರಾಮಸ್ಥರು ಎಲ್ಲರೂ ಸೇರಿ ಪೂಜಿಸಲ್ಪಡುವ ದೇವರು ಅವರಿಂದ ಸೃಷ್ಟಿಸಲ್ಪಟ್ಟಿದ್ದು. ಗ್ರಾಮದೈವ, ಒಂದೇ ಧರ್ಮದವರಿಗೆ ಸೇರಿದ ದೇವರು ಧರ್ಮದ ದೈವ, ಮನುಷ್ಯ ತಾನು ಆರಾಧಿಸುವ ದೈವಗಳನ್ನು ತಾಯಿ–ತಂದೆ ಎಂಬ ಅರ್ಥದಲ್ಲಿ ಪೂಜಿಸತೊಡುಗುವುದು ಕಂಡು ಬರುತ್ತದೆ.

ಹೀಗೆ ಪ್ರಕೃತಿ ಆರಂಭದಲ್ಲಿ ಮನುಷ್ಯನಿಗೆ ಭಯ ಹುಟ್ಟಿಸಿತು. ಭಯದ ನಿವಾರಣೆಗಾಗಿ ಧರ್ಮ ಅವಶ್ಯಕತೆ ಎನಿಸಿತು. ಆಗ ಕಲ್ಲು, ಗಿಡ, ಮರ, ಗಾಳಿ, ಬೆಂಕಿ, ಸೂರ್ಯ, ಚಂದ್ರ, ಮಳೆ, ಇತ್ಯಾದಿ ರೂಪಗಳನ್ನು ದೈವ–ದೇವರುಗಳನ್ನಾಗಿ ಅವುಗಳಿಗೆ ಒಂದೊಂದು ಹೆಸರು ಕೊಟ್ಟು ಪೂಜಿಸತೊಡಗಿದ. ಪೂಜೆ, ಆರಾಧನೆ, ಧ್ಯಾನ, ದಾನ, ಧರ್ಮ ಮತ್ತು ಸಂಪ್ರದಾಯ ಆಚರಣೆಗಳು ಬೆಳೆಯತೊಡಗಿದವು. ಒಟ್ಟಿನಲ್ಲಿ ಮಾನವನ ಬದುಕಿನ ಇತಿಹಾಸದಲ್ಲಿ ಆತ ಕಲ್ಪಿಸಿಕೊಂಡ ದೈವದ ಕಲ್ಪನೆ ಆತ್ಯಾಶ್ಚರ್ಯ ಹಾಗೂ ಶೋಧನಾರ್ಹವಾದುದು.

## ೨.೨ ಕ್ಯಾತಪ್ಪ ಪದದ ನಿಷ್ಪತ್ತಿ ಮತ್ತು ಅರ್ಥ ವಿಸ್ತಾರದ ಹರವುಗಳು

"ವ್ಯಕ್ತಿ ಮತ್ತು ಸ್ಥಳನಾಮಗಳಿಲ್ಲದ. ಯಾವುದೇ ಜನಸಮುದಾಯವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಯಾವುದೇ ಸಮುದಾಯವೊಂದರಲ್ಲಿ ಒಪ್ಪಿತ ವ್ಯಕ್ತಿನಾಮಗಳಿದ್ದರೂ ಕೊನೆ ಪಕ್ಷ ಪರ್ಯಾಯನಾಮದೊಂದಿಗಾದಾರೂ ಸಂಭೋದಿಸಿ ಕರೆಯಲಾಗುತ್ತದೆ. ವಾಸ್ತವಾಗಿ ವ್ಯಕ್ತಿಗೂ ಆತನ ಹೆಸರಿಗೂ ನಡುವೆ ಯಾವ ಸಂಬಂಧವಿರುವುದಿಲ್ಲ. ಆದರೂ ಸಹ ಇವೆರಡು ಯಾದೃಚ್ಛಿಕವಾಗಿರುತ್ತವೆ. ವ್ಯಕ್ತಿಗೆ ತಕ್ಕಂತೆ ಹೆಸರು, ಹೆಸರಿಗೆ ತಕ್ಕಂತೆ ವ್ಯಕ್ತಿ

ಇರುವುದಿಲ್ಲ. ಇವೆರಡು ಕೇವಲ ಸಂಭೋದನೆಗಾಗಿಯೇ ಇರುತ್ತವೆ. ವ್ಯಕ್ತಿನಾಮಗಳು ಯಾವಾಗಲೂ ಭಾಷೆಯೊಂದರಲ್ಲಿ ಬೆಳವಣಿಗೆಯ ಹಾದಿಯಲ್ಲಿರುತ್ತವೆ. ಹಾಗಾಗಿ ವ್ಯಕ್ತಿ ನಾಮಗಳು ಹೆಸರಿಸುತ್ತವೆಯೋ ಅಥವಾ ವರ್ಣಿಸುತ್ತವೆಯೋ ಎಂಬುವುದು ಚರ್ಚೆಯ ವಿಚಾರ ಎನ್ನುವುದು ವಿದ್ವಾಂಸರ ಅಭಿಮತ"[೧೦].

ವ್ಯಕ್ತಿ ಮತ್ತು ಸ್ಥಳನಾಮಗಳು ಹೆಚ್ಚಿನ ಪ್ರಮಾಣದಲ್ಲಿ ಹೆಸರಿಸುತ್ತವೆ. ಕೆಲವು ಸಂದರ್ಭದಲ್ಲಿ ಮಾತ್ರ ವರ್ಣಿಸುವುದನ್ನು ಕಾಣಬಹುದು. ಇವು ಸಾಮಾನ್ಯವಾಗಿ ಸಂಪ್ರದಾಯ ಬದ್ದವಾಗಿರುತ್ತವೆ. ಅಲ್ಲದೆ ವಂಶ ಪರಂಪರ್ಯವಾಗಿಯೂ ಬಳಕೆಯಾಗುತ್ತವೆ. ಕೆಲವು ವೇಳೆ ಸಮುದಾಯದ ನಂಬಿಕೆಯ ಭಾಗವಾಗಿಯೂ ಬಳಕೆಯಾಗುತ್ತವೆ. ಪದೆ ಪದೇ ಮಕ್ಕಳು ಕಾಯಿಲೆ ಪೀಡಿತರಾದರೆ ತಮ್ಮ ಮನೆದೇವರ ದೇವಸ್ಥಾನಕ್ಕೆ ಹೋಗಿ ನನಗೆ ಮುಂದೆ ಹುಟ್ಟುವ ಮಕ್ಕಳಿಗೆ ನಿನ್ನ ಹೆಸರನ್ನೇ ಇಡುತ್ತೇವೆ ಎಂದು ಹರಕೆ ಹೊರುತ್ತಾರೆ. ಮಕ್ಕಳಾಗದಿದ್ದರೂ ದೇವರಿಗೆ ಹರಕೆ ಹೊರುತ್ತಾರೆ. ಪದೆ ಪದೇ ಹೆಣ್ಣು ಮಕ್ಕಳೇ ಆಗುತ್ತಿದ್ದರೆ, ಗಂಡು ಮಕ್ಕಳನ್ನು ಬಯಸುವವರು ಗಂಡು ಮಗು ಆದರೆ ನಿನ್ನ ಹೆಸರನ್ನೇ ಇಡುತ್ತೇವೆ ಎಂದು ತಮ್ಮ ಮನೆ ದೇವರಿಗೆ ಹರಕೆ ಹೊರುವ ಪದ್ಧತಿ ಬುಡಕಟ್ಟು ಸಮುದಾಯಗಳಲ್ಲಿ ಹೇರಳವಾಗಿ ಕಂಡು ಬರುತ್ತದೆ.

ಹೀಗೆ ರಾಜ್ಯದ ಚಿತ್ರದುರ್ಗ, ತುಮಕೂರು, ಬಳ್ಳಾರಿ, ಶಿವಮೊಗ್ಗ, ಚಾಮರಾಜ ನಗರ, ಕೋಲಾರ ಮುಂತಾದ ಕೆಲ ಭಾಗದ ಬುಡಕಟ್ಟು ಸಮುದಾಯದವರು ವಂಶಪರಂಪರೆಯಾಗಿ ಬಂದ ದೇವರ ಹೆಸರನ್ನೇ ತಮ್ಮ ಮಕ್ಕಳಿಗೆ ಇಟ್ಟಿರುವುದು ಕಂಡು ಬರುತ್ತದೆ. ಹಾಗಾಗಿ ಕ್ಯಾತ, ಕೇತ–ಕೇತಿ ಇಲ್ಲಿ ಸ್ತ್ರೀ ಮತ್ತು ಪುರುಷ ವ್ಯಕ್ತಿ ನಾಮಪದ ವಿಸ್ತೃತರೂಪ ಇಲ್ಲವೆ ಸಂಕುಚಿತ ರೂಪಗಳು ವಯಸ್ಸು ಮತ್ತು ಲಿಂಗಗಳನ್ನು ಸೂಚಿಸುವುವುದು ಗಮನಿಸಬಹುದು. ಬುಡಕಟ್ಟು ಸಮುದಾಯದ ದೈವದ ಹೆಸರಿನ ಹಿನ್ನೆಲೆಯನ್ನು ಅರಿತು ಆ ಸಮುದಾಯ ಸಾಮಾಜಿಕ ಧಾರ್ಮಿಕ ಮತ್ತು ಸಾಂಸ್ಕೃತಿಕ ಆವರಣದೊಳಗೆ ಪ್ರವೇಶಿಸುವುದು ಹೆಚ್ಚು ಸೂಕ್ತ. ಏಕೆಂದರೆ ಪ್ರತಿಯೊಂದು ಸಮುದಾಯವು ತಮ್ಮ ದೈವಗಳ ಹೆಸರುಗಳಲ್ಲಿಯೇ ಆ ಸಮುದಾಯದ ಜೀವನ ಪರಿಕ್ರಮ ಹುದುಗಿರುತ್ತದೆ. ಭಾರತದ ಪ್ರತಿಯೊಂದು ಬುಡಕಟ್ಟು ಸಮುದಾಯದ ದೈವಗಳು ತನ್ನ ಹೆಸರಿನೊಂದಿಗೆ ತನ್ನದೆ ಅನನ್ಯತೆಯ ಸಂಬಂಧವಿರಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕೇತಪ್ಪ ಶಬ್ದ ನಿಷ್ಪತ್ತಿಯನ್ನು ಕಂಡುಕೊಳ್ಳಬೇಕಾಗಿದೆ.

"ಸಂಸ್ಕೃತದ ಕ್ಷೇತ್ರ ಎಂಬ ತದ್ಬವ ರೂಪವೇ ಕೇತ"[೧೧] ಎಂದು ಆಗಿದೆ. ಇದು ನಾಮಪದವಾಗಿ ಬಳಕೆಯಾಗಿದೆ. ಕೇತ ಎಂದರೆ ತೊಂದರೆ, ಕಿರುಕುಳ, ಕ್ಲೇಷ, ಒಂದು ಬಗೆಯ ಆಟ, ಕಿಳ್ಳೆಕೇತರ ಆಟ ಎಂಥಲೂ ವಸತಿ, ಮನೆ, ವಾಸ, ಅಸ್ತಿತ್ವ, ಧ್ವಜ,

ಮನಸ್ಸು, ಉದ್ದೇಶ ,ಇಚ್ಚೆ ಎಂಬ ಅರ್ಥಗಳೂ ಇವೆ. ಕೇ ಎನ್ನುವುದು ಕರ್ಮಪದವಾಗಿಯೂ ಕಂಡು ಬರುತ್ತದೆ.

'ಕೇ' ಎಂದರೆ 'ಮಲಗು' 'ವಿಶ್ರಾಂತಿ ಹೊಂದು' ಎಂಬ ಅರ್ಥವೂ ಇದೆ. ಕೆಯ್-ಗೆಯ್ ಎಂದರೆ 'ಸಿಂಗರಿಸು', 'ಮಾಡು', 'ಕಾರಣವಾಗು', 'ನೆರವೇರಿಸು', ಇಲ್ಲಿ 'ಕೆಯ್' ಎನ್ನುವುದು 'ಧಾತು', ಕರ್ಮಪದವಾಗಿ, ನಾಮಪದವಾಗಿ ಬಳಕೆಯಲ್ಲಿದೆ. ಕೈ, ಗೆಯ್, ಗೆಯ್ಯು, ಗೇ, ಗೇಯು, ಕೇ, ಕೇಯು, ಗೈ, ಇಲ್ಲಿ ಕ್ರಿಯಾಪದವಾಗಿಯೂ ಬಳಕೆಯಾಗಿರುವುದನ್ನು ಕಾಣಬಹುದು. ಗೆಯ್ ಇಲ್ಲಿ ಕ, ಕಾರ, ಗ, ಕಾರ ವಾಗುತ್ತದೆ. ಗೆಯ್-ಕೆಯ್ ಉಳುಮೆ ಎಂಬ ಅರ್ಥವನ್ನು ಹೊಂದಿದ್ದು ಇದು ಕೃಷಿ ಸಂಸ್ಕೃತಿಯನ್ನು ಸೂಚಿಸುತ್ತದೆ. ಗ(ಗೇತ), ಕ ಕಾರದ ಒಂದು ರೂಪವಾಗಿ ಬಳಕೆಯಾಗಿದೆ. ಕೇತ ಎನ್ನುವುದು ಒಂದರ್ಥದಲ್ಲಿ ಲಿಂಗ ಸಾಧನೆ ಎನ್ನಬಹುದು. ಇಲ್ಲಿ ಸೂಕ್ಷ್ಮವಾಗಿ ಲಿಂಗಸಂಬಂಧಿ ಆರಾಧನೆಯನ್ನು ಸೂಚಿಸುತ್ತದೆ. ಇದು ಶೈವ ಪರಂಪರೆಯಲ್ಲಿ ಕಾಣಿಸಿಕೊಳ್ಳುತ್ತದೆ. ಕೇತಾಚಾರಿ, ಕೇತಗಾವುಂಡ, ಕೇತಗೌಡ, ಕೇತಿ, ಕೇತಯ್ಯ ಎಂಬ ಪದ ಅಲ್ಲಲ್ಲಿ ಹೆಚ್ಚು ಬಳಕೆಯಾಗಿರುವುದು ಕಂಡು ಬರುತ್ತದೆ. ಆದರೆ ಜೈನರಲ್ಲಿ ಇದು ಅತಿ ವಿರಳ.

ಕೇತ ಎನ್ನುವುದು ಒಂದು ಕ್ಷುದ್ರ ದೇವತೆ "ವರವೀಗುಮೆ ಮೈಲಾರಂ, ಕೇತಂ, ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಳೆದೆಯ್ವಂಗಳ್"[೧] ಎಂದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಉಲ್ಲೇಖಗೊಂಡಿದೆ. ಕೇತ, ಅಪ್ಪ, ಕೇತಪ್ಪ, ಕೆಯ್ ಎಂದರೆ ಮಾಡು ನೆರೆದ ಪಂಡಿತಕ್ಕೊಡನೆ ವಾದಂಗೆಯ್ದು ಗೆಲ್ದು, ಹೊಲ-ತನ್ನ ಕೆಯ್ಯನುಳಲೆಂದು ಪೋಗಿ ಎಂದು ವಡ್ಡಾರಾಧನೆಯಲ್ಲಿ ಶಿವಕೋಟ್ಯಾಚಾರ್ಯ ಉಲ್ಲೇಖಿಸಿದರೆ ಬೆಳೆ, ಫೈರು-ಪಂದಿಕೆಯ್ಯಂತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ ಎಂದು ನಯಸೇನ ಧರ್ಮಾಮೃತದಲ್ಲಿ ಉಲ್ಲೇಖಿಸಿದ್ದಾನೆ. "ಕೆಯಂಣೇನು ಮನಳವಿಯೊಳ್ ಕೂಡಿ ನಡೆಯಲ್ವೇಳ್ದು, ಸೊಂಡಿಲು ತಳರ್ದುದು ಕರ್ಣತಾಳ ಪವನ ಆಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಂ ದೆಸೆಯಿನತ್ತ ತೆರಳ್ದುವು ಕಾಯ್ವಿಯಿಪಿನಿಂ ಎಂದು ಪಂಪ ಭಾರತದಲ್ಲಿ ಹೇಳಿದ್ದಾನೆ "ಕೇತಯ್ಯ"[೨] ಎಂದರೆ ಕ್ಷುದ್ರದೇವತೆ, ಕ್ಷುದ್ರ ದೇವತೆಯ ಒಬ್ಬ ವೇಷದಾರಿ ಎಂಬ ಅರ್ಥದಲ್ಲಿಯೂ ಬಸವಣ್ಣನ ವಚನಗಳಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ.

"ಕ್ಯಾತ-ಕ್ಯಾತೆ;" ಗ್ರಾಮೀಣ ಪ್ರದೇಶದಲ್ಲಿ ಬಹು ಪ್ರಚಾರದಲ್ಲಿರುವ ಈ ಶಬ್ದ ನಗರ ಪ್ರದೇಶದಲ್ಲಿರುವ ಕೀಟಲೆಗೆ ಸಮವಾದುದದ್ದು. ಇವೆರಡು ಶಬ್ದಗಳ ಮೂಲವೂ ಅನಿಶ್ಚಯದಿಂದ ಕೂಡಿದೆ. ಯಾವ ಕಾರಣವೂ ಇಲ್ಲದೆ ಕೇವಲ ವಿನೋದಕ್ಕೋ,

ಒಳಗಿದ್ದ ದ್ವೇಷಕ್ಕೋ ಚೇಷ್ಟೆಗೋ ಕೆಣಕುವ ಮಾತುಗಳನ್ನಾಡಿ, ಕೋಪ ತರುವ ಕಾರ್ಯಗಳನ್ನು ಮಾಡಿ ಜಗಳ ಹುಟ್ಟಿಸುವ ಸ್ವಭಾವಕ್ಕೆ ಕ್ಯಾತೆ ಎನ್ನುತ್ತಾರೆ. ಕ್ಯಾತೆಗೆ ಚೇಷ್ಟೆ ಎನ್ನುವುದೇ ಮುಖ್ಯವಾದ ಅರ್ಥ. ಈ ಪ್ರಯೋಗ ಹಳೆ ಮೈಸೂರಿನ ಭಾಗದಲ್ಲಿ ಈಗಲೂ ಪ್ರಯೋಗದಲ್ಲಿದೆ. 'ಕ್ಯಾ'-ಕ+ಆ+ಯ ಇದು ಕೇತ ಪದವಾಗಿ ಸ್ವರೂಪ ಪಡೆದುಕೊಂಡಿದೆ ಎನ್ನಬಹುದು. ದ್ವಿತ್ವಾಕ್ಷರಗಳು ಸಂಸ್ಕೃತದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಆದರೆ ದ್ರಾವಿಡ ಭಾಷೆಯಲ್ಲಿ ಕಂಡು ಬರುವುದಿಲ್ಲ. ಆದ್ದರಿಂದ ಕೇತ ಎನ್ನುವ ಪದವು ಭಾಷಾ ಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಅದು ವ್ಯಕ್ತಿ, ವಸ್ತು ಸೂಚಕ ಹಾಗೂ ನಾಮಪದವಾಗಿ ಬಳಕೆಯಾಗಿದೆ. ಕೇತ ಎನ್ನುವುದು ದ್ರಾವಿಡ ಪದವೇ ಹೊರತು ವೈದಿಕ ಪದವಲ್ಲ ಎನ್ನಬಹುದು.

ರಾಜ್ಯಾದ್ಯಂತ ನೆಲೆಗೊಂಡಿರುವ ಕೆಲವೇ ಕೆಲವು ಪ್ರಮುಖ ಬುಡಕಟ್ಟು ದೈವಗಳಲ್ಲಿ ಕ್ಯಾತಪ್ಪ ದೈವವೂ ಒಂದು. ಪಶುಪಾಲನೆಯನ್ನೇ ತಮ್ಮ ಮೂಲ ವೃತ್ತಿಯಾಗಿಸಿಕೊಂಡು ಕಾಡಡವಿಯಲ್ಲಿ ಬದುಕನ್ನು ಕಟ್ಟಿಕೊಂಡಿದ್ದ ನಾಡಿನ ಹಲವೆಡೆ ನೆಲೆಸಿರುವ ಕಾಡುಗೊಲ್ಲ ಬುಡಕಟ್ಟು ಸಮುದಾಯದವರು ಸಾಂಸ್ಕೃತಿಕ ವೀರ ಕ್ಯಾತಪ್ಪನನ್ನು ಪ್ರಮುಖ ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಆತನನ್ನು ಆರಾಧಿಸತೊಡಗಿದ್ದಾರೆ. ಕ್ಯಾತಪ್ಪನನ್ನು ಕ್ಯಾತೆಲಿಂಗ, ಕ್ಯಾತರುಲಿಂಗ, ಕೆಂಜೆಡಿ, ಮಹಾಲಿಂಗ, ನಿಂಗಣ್ಣ ಎಂಥಲೂ ಕರೆಯುವ ವಾಡಿಕೆಯಿದೆ. ಆಡು ಭಾಷೆಯಲ್ಲಿ ಜನ ಕ್ಯಾತಪ್ಪ ಎಂಬ ಹೆಸರಿನಿಂದ ಕರೆಯುವ ರೂಢಿಯಾಗಿದೆ.

**೨.೩ ಕ್ಯಾತಪ್ಪ ದೈವದ ಜನನ ಮತ್ತು ಸಾಮಾಜಿಕ ಕಥನದ ಸೋಪಜ್ಞತೆ**

"ಕೈಲಾಸದ ಈಶ್ವರ-ಪಾರ್ವತಿಯರ ಮಗನಾಗಿ ಹುಟ್ಟಿದ ಕ್ಯಾತಪ್ಪ ಪರೀಕ್ಷಾರ್ಥವಾಗಿ ಕೈಲಾಸದಿಂದ ತಪ್ಪಿಸಿಕೊಂಡು ಒಮ್ಮೆ ಭೂಲೋಕಕ್ಕೆ ಸುತ್ತಾಡಲು ಬಂದ. ಅಲ್ಲಿಂದ ಬಿಕ್ಷೆ ಬೇಡುತ್ತಲೇ ಬರುತ್ತಿದ್ದ ಕ್ಯಾತಪ್ಪ, ಇದ್ದಕ್ಕಿದ್ದಂತೆ ಆಂಧ್ರ ಪ್ರದೇಶದ ಕಲ್ಯಾಣದುರ್ಗದ ಕಲ್ಯಾಣಪುರದ ಹೇಮರೆಡ್ಡಿಗಳ ಮನೆಯಲ್ಲಿ ದುಂಡನೆ (ಆಕಾರ)ಲಿಂಗದ ರೂಪದಲ್ಲಿ ಕಾಣಿಸಿಕೊಂಡ. ಆ ಮನೆಯಲ್ಲಿಯೇ ದನಕರುಗಳನ್ನು ಮೇಯಿಸಿಕೊಂಡಿದ್ದ ಪರಮಾಪ್ತ ಭಕ್ತ ಬೊಮ್ಮಣ್ಣನಿಗೂ ಕಾಣಿಸಿಕೊಂಡು ಒಲಿದ"[೧೪]

ತನ್ನ ಬಗ್ಗೆ ರೆಡ್ಡಿಗಳು ಉದಾಸೀನ ತೋರಿದ ಕಾರಣ ಕ್ಯಾತಪ್ಪ ಮತ್ತು ದನಗಾಯಿ ಬೊಮ್ಮಣ್ಣ ಇಬ್ಬರು ಕಲ್ಯಾಣಪುರದ ರೆಡ್ಡಿಗರ ಮನೆಯನ್ನು ತೊರೆದು ಅಲ್ಲಿಂದ ದನಕರುಗಳನ್ನು ಹೊಡೆದುಕೊಂಡು ಪುಲುಸಲು (ಮಹದೇವಪುರ) ಮರಡಿಗೆ ಬಂದು ದಿಬ್ಬದ ಬಯಲಲ್ಲಿ ದನಗಳನ್ನು ಮೇಯಿಸುತ್ತಿದ್ದರು. ತದ ನಂತರ ಕ್ಯಾತಾರ ದ್ವಾಪರದಹಟ್ಟಿ(ಯರಬಳ್ಳಿ)ಗೆ ಬಂದು ನೆಲೆಸಿದರು. ತನಗೆ ಒಮ್ಮೆ ಜಾತ್ರೆ ಆಚರಿಸಿಕೊಳ್ಳುವ ಆಸೆ ಉಂಟಾಗಿ ಕೇತಪ್ಪ ಮತ್ತು ಬೊಮ್ಮಣ್ಣ ಇಬ್ಬರು ಮತ್ಸಮುದ್ರದ ಬಳಿ ಇರುವ

ವೇದಾವತಿ ನದಿ ದಂಡೆಗೆ ಬಂದು, ಅಲ್ಲಿ ಹೊಳೆ ಪೂಜೆ ಮುಗಿಸಿಕೊಂಡು. ಚನ್ನಮ್ಮನಾಗತಿಹಳ್ಳಿ ಗೊಲ್ಲರಹಟ್ಟಿಗೆ ಬಂದು ನೆಲೆಯೂರಿದರು. ತದ ನಂತರ ಪುರ್ಲೆಹಳ್ಳಿ ಬಳಿ ವಸತಿ ದಿಬ್ಬದಹಟ್ಟಿಯ ಹೊನ್ನಬಂಡೆ ಕಾವಲಿಗೆ ಹೋಗಿ ಆ ಹುಲ್ಲುಗಾವಲಿನಲ್ಲಿಯೇ ಆವಿನಗೂಡು ಮತ್ತು ಕರುವಿನ ಗೂಡು ಕಟ್ಟಿಕೊಂಡು ಗೂಡಿನ ಹಿಂಡು ದನಗಳನ್ನು ಮೇಯಿಸಿಕೊಂಡಿದ್ದರು. ಅಲ್ಲಿಯೇ ಕರಿಯಣ್ಣ ಮತ್ತು ಸಿರಿಯಣ್ಣ, ಸಿರಿಯಮ್ಮ, ನಾಗಮ್ಮ ಇವರುಗಳು ವಾಸವಿದ್ದರು. ನಂತರ ಕೇತಪ್ಪ ಪೂಜಾರಿ ಕರಿಯಣ್ಣನಿಗೆ ಒಲಿದುಕೊಂಡ. ಕೋಣನಗೌಡ ಕೋಣನ ತಮ್ಮಣ್ಣ ಮತ್ತು ಬೊಮ್ಮನಗೌಡ ಗೌಡರಿಂದ ಕ್ಯಾತಪ್ಪ ಜಾತ್ರೆ ಆಚರಿಸಿಕೊಂಡನು. ಮತ್ತೆ ಬೊಮ್ಮನಗೌಡ ಗೌಡ ಕ್ಯಾತಪ್ಪ ದೈವನನ್ನು ಚನ್ನಮ್ಮನಾಗತಿಹಳ್ಳಿಗೆ ತೆಗೆದು ಕೊಂಡು ಹೋಗಿ ಅಲ್ಲಿ ಪ್ರತಿಷ್ಠಾನೆ ಮಾಡಿದನು. "ಚಿತ್ರದುರ್ಗದ ಪಾಳೆಗಾರರ ದಂಡು ವಸತಿದಿಬ್ಬದಹಟ್ಟಿಯ ಮೇಲೆ ದಾಳಿ ನಡೆಸಿ ಭಕ್ತ ಕರಿಯಣ್ಣನ ವಶದಲ್ಲಿದ್ದ ಕ್ಯಾತಪ್ಪನನ್ನು ಚಿತ್ರದುರ್ಗಕ್ಕೆ ಅಪಹರಿಸಿಕೊಂಡು ಹೋಗಿ ಅಲ್ಲಿಯೇ ಸೆರೆಯಲ್ಲಿಟ್ಟರು. ಇತ್ತ ಕರಿಯಣ್ಣ ದುರ್ಗದ ದಂಡಿನ ಸೈನಿಕರೊಂದಿಗೆ ಹೋರಾಡಿ ಮರಣವನ್ನಪ್ಪಿದ"[೧೫]

ಕ್ಯಾತಪ್ಪದೇವರು ಅಕ್ಕ ಗೌರಸಂದ್ರದ ಮಾರಕ್ಕನ ಮೇಲೆ ಕಣ್ಣು ಬಿಟ್ಟಾಗ, ತನ್ನ ತಮ್ಮ ಕ್ಯಾತಪ್ಪನನ್ನು ಸೆರೆಯಿಂದ ಬಿಡುವಂತೆ ಮಾರಕ್ಕ ಚಿತ್ರದುರ್ಗದ ಪಾಳೆಗಾರ ಭರಮಣ್ಣನಾಯಕನಿಗೆ ತೊಂದರೆ ಉಂಟುಮಾಡಿದಳು. ಸೆರೆಯಲ್ಲಿದ್ದ ಕ್ಯಾತಪ್ಪ ಹೋಗಿ ಮೇಲುದುರ್ಗದಲ್ಲಿ ನೆಲೆಸಿದ. ಆ ಪರಿಸರದ ಜನ ಕ್ಯಾತಪ್ಪನನ್ನು ಹಿರೆಕಂಬಿ ಕ್ಯಾತೇಲಿಂಗ, ಹಿಮವತ್ ಕ್ಯಾತೇಲಿಂಗ, ಹಿರೇಕ್ಯಾತೇಲಿಂಗ, ಕೇದಾರಲಿಂಗ ಎಂದು ವಿವಿಧ ಹೆಸರಿನಲ್ಲಿ ದೇವಸ್ಥಾನ ಕಟ್ಟಿಕೊಂಡು ಪೂಜಿಸುತ್ತಿದ್ದಾರೆ. ಹಾಲು ಗುಡ್ಡದಪ್ಪ ಎಂಬ ಹೆಸರು ಮಳೆದೇವರಿಗೆ ಇರುವ ಹೆಸರು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಮರಿಯಮ್ಮನಹಳ್ಳಿಯಲ್ಲಿ ಬಾರೀಕಾರರ ಸಮುದಾಯದವರು ಕ್ಯಾತಪ್ಪನನ್ನು ಮಳೆದೇವರು ಎಂದು ಶ್ರಾವಣ ಮಾಸದಲ್ಲಿ ಆರಾಧಿಸಿ ಪೂಜಿಸುತ್ತಿರುವುದು ಕಂಡು ಬರುತ್ತದೆ. ಕ್ಯಾತಪ್ಪ ದೇವರು, ತನ್ನ ಮೂಲ ನೆಲೆಯಾದ ಚಳ್ಳಕೆರೆ ತಾಲ್ಲೂಕು ಚನ್ನಮ್ಮನಾಗತಿಹಳ್ಳಿಯ ಪುರ್ಲೆಹಳ್ಳಿ ವಸತಿದಿಬ್ಬದಹಟ್ಟಿಗೆ ಬಂದು ಸೇರಿತು. ನಂತರ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಯರಬಳ್ಳಿಯಲ್ಲಿ ನೆಲೆಸಿ ಹಾಲುಗುಡದಪ್ಪ ಎಂದು ಪೂಜಿಸಲ್ಪಟ್ಟಿತು. ಹಾಲುಗುಡುದಪ್ಪ ದೇವರು ಕೂಡ ಕ್ಯಾತೆಲಿಂಗನ ಇನ್ನೊಂದು ರೂಪ ಎನ್ನುತ್ತಾರೆ. ಆ ಒಕ್ಕಲಿನವರು. ಈ ದೇವರು ಒಮ್ಮೆ ಹಾಲು ಕುಡಿಯುತ್ತಿರುವಾಗ ಕಂಡಿದ್ದರಿಂದ 'ಹಾಲು ಕುಡಿದಪ್ಪ–ಹಾಲ್ಕುಡಿದಪ್ಪ–ಹಾಲುಗುಡದಪ್ಪ ಎಂದು ಹೆಸರಾಯಿತು. ಒಮ್ಮೆ ಈ ದೇವರನ್ನು ಅಣ್ಣ–ತಮ್ಮಗಳ ಮದ್ಯದ ವ್ಯಾಜ್ಯ ಕಾರಣ ಒಂದು ಬಾವಿಯಲ್ಲಿ ಹಾಕಿದ್ದರಂತೆ. ಮತ್ತೆ ಅವರ ಮಧ್ಯೆ ಹೊಂದಾಣಿಕೆ ಏರ್ಪಟ್ಟು ದೇವರನ್ನು ಬಾವಿಯಿಂದ ಹೊರ

ತೆಗೆಯುವ ಅಣ್ಣನಿಗೆ ಲಿಂಗ ದೊರೆತುದರಿಂದ ಅವರು ಪೂರಾ ಬಾಯಿಬತದವರಾದರು. ತಮ್ಮನಿಗೆ ಬಿಲ್ಲೆ(ತಾಳಿಬೊಟ್ಟು) ದೊರೆತುದರಿಂದ ಅವರು ಅರ್ಧ ಬಾಯಿ ಬತದವರಾದರು. ಪೂರಾ ಬತದವರು ಹುರುಳಿ–ನವಣೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಲ್ಲದೆ, ತಮ್ಮ ದೇವರನ್ನು ಪೂಜಿಸುವಾಗಲೂ ಬಾಯಿಗೆ ಬಿಳಿ ಬಟ್ಟೆ ಕಟ್ಟಿಕೊಂಡು ಪೂಜೆ ಮಾಡಲು ತೊಡಗಿದ್ದರಿಂದ ಅದು ಬಾಯಿ ಬತದ ದೇವರಾಯಿತು.

ಈ ರೀತಿಯ ಆಚರಣೆಗಳು ಮ್ಯಾಸಬೇಡ, ಒಕ್ಕಲಿಗ, ಕುರುಬ ಮುಂತಾದ ಸಮುದಾಯಗಗಳಲ್ಲಿ ಕಂಡು ಬರುತ್ತದೆ. ಹುರುಳಿ–ನವಣೆ ವ್ರತವನ್ನು ಕಟ್ಟು ನಿಟ್ಟಾಗಿ ಪಾಲನೆ ಮಾಡುವುದರಿಂದ ಈ ವ್ರತಗಳಿಗೆ ಪ್ರತ್ಯೇಕ ದೇವರನ್ನು ಸೃಷ್ಟಿಸಿಕೊಂದರು. ಆ ವ್ರತದ ದೇವರನ್ನು ಬತದ ದೇವರು, ಬತ್ನೆದೇವರು ಎಂಥಲೂ ಕರೆಯುತ್ತಾರೆ. ಈ ಬತದ ದೇವರೇ ಲಿಂಗಣ್ಣ(ನಿಂಗಣ್ಣ), ಮಹಾಲಿಂಗ, ಕೆಂಜೆಡಿ ಕ್ಯಾತೇಲಿಂಗ ಹೀಗೆ ವಿವಿಧ ರೂಪದಲ್ಲಿ ಆತನನ್ನು ಆರಾಧಿಸ ತೊಡಗಿದ್ದಾರೆ.

### ೨.೪ ಕ್ಯಾತಪ್ಪ ದೈವವಾದ ಮತ್ತು ಪವಾಡಗಳ ಲೋಕಾನುಸಂಧಾನ

ಕ್ಯಾತಪ್ಪ ಕೈಲಾಸದಿಂದ ತಪ್ಪಿಸಿಕೊಂಡು ಭೂಲೋಕಕ್ಕೆ ಬಂದು ಜಂಗಮಧಾರಿಯಾಗಿ ಊರೂರು ಸುತ್ತಿ ಪವಾಡಗಳನ್ನು ಮಾಡುತ್ತಾ ಕಾಡು ಹೊಕ್ಕು, ಕಾಡುಗೊಲ್ಲರೊಬ್ಬನಿಗೆ ಒಲಿಯುತ್ತಾನೆ. ಅಂತರ್ಧಾನನಾಗಿ ಮುಂದೆ ಗೊಲ್ಲರಿಗೆ ದೇವರಾಗುತ್ತಾನೆ.

*"ಮಾಡದಾಗಳ ಮಿಂಚು ನೋಡೋರಿಗೆ ಅಳವಿಲ್ಲ*

*ತಾನೆ ಗಾಡಿಗನೇ ನಿಜಲಿಂಗ ಉಟ್ಟೇದ*

*ಮಾಯಾ ಮಾನ್ಯರಿಗೆ ತಿಳಿಯಾವು(ಅ.ಹಿ.ಕಾ.ಗೋ.ಗೀ"*

ರೆಡ್ಡಿಗರ ದುರಂಕಾರಕ್ಕೆ ಬೇಸತ್ತ ಕ್ಯಾತಪ್ಪ, ಭಕ್ತ ಬೊಮ್ಮಣ್ಣನ ಮನವೊಲಿಸಿ ಅಲ್ಲಿಂದ ಬಿಡುಗಡೆ ಹೊಂದಿ ಗೊಲ್ಲರ ತಾಣದಲ್ಲಿ ನೆಲೆಯಾಗಿ ನಿಲ್ಲುತ್ತಾನೆ.

*"ಸುತ್ತಾಲ ರಾಜ್ಯವ ಸುಟ್ಟು ನಾಬಂದೆ*

*ಬ್ರತಕ್ಕೆ ಸರಿಯಾದ ಕುಲವಿಲ್ಲ ಸಿರಿಯಣ್ಣ*

*ನಿನ್ನಂಗೆ ನಾನು ಒಲಕೋತೀನಿ"*[೭೬] *(ಹನೂರು. ಏ.ಗೀ ೨೪೩)*

ಕೊನೆಗೆ ಕಾಡುಗೊಲ್ಲರ ಪರಮಾಪ್ತ ಭಕ್ತ ಕರಿಯಣ್ಣನ ಮನೆ ಸೇರುತ್ತಾನೆ. ನಂತರ ಗೊಲ್ಲರ ಕುಲ ದೇವರಾಗುತ್ತಾನೆ.

### ೨.೪.೧. ಕ್ಯಾತಪ್ಪ ದೈವದ ವಿಸ್ಮಯತೆ ಮತ್ತು ಅಲೌಕಿಕದ ತಾತ್ವಿಕತೆ

"ಪವಾಡವೆಂದರೆ ಅಸಾಮಾನ್ಯ ಘಟನೆ ಅಥವಾ ನಿಸರ್ಗದ ನಿಯಮ ನಿಬಂಧನೆಗಳಿಂದ ವಿವರಿಸಲಾಗದ, ಕಾರ್ಯ-ಕಾರಣ ಸಂಬಂಧವಿಲ್ಲದ ಅಥವಾ ನಿಸರ್ಗದ ನಿಯಮಗಳಿಗೆ ಮಿಕ್ಕಿದ ಅಲೌಕಿಶಕ್ತಿ, ಎಂದು ಅರ್ಥೈಸಲಾಗಿದೆ. ಪವಾಡಗಳು ಧರ್ಮಕ್ಕಿಂತಲೂ ಪೂರ್ವದ ಕ್ರಿಯೆಯಾಗಿದ್ದು ನಂತರ ಧರ್ಮದ ಪರಿಕಲ್ಪನೆಗೆ ಪೂರಕವಾಗಿ ಬೆಳೆದುಬಂದಿವೆ"[೧೭] 'ಕೆಳವರ್ಗದ ಸಾಂಸ್ಕೃತಿಕ ನಾಯಕರು ಅಂದಿನ ಮತ ಹಾಗೂ ಪ್ರಬಲ ವರ್ಗದವರ ವಿರುದ್ಧ ಪವಾಡಗಳನ್ನು ಎಸಗಿ ತಮ್ಮ ಸಾಂಸ್ಕೃತಿಕ ಅನನ್ಯತೆ ಉಳಿಸಿಕೊಂಡಿರುವುದನ್ನು ಗುರುತಿಸಬಹುದು. ಕ್ಯಾತಪ್ಪ ಕೈಲಾಸದಿಂದ ತಪ್ಪಿಸಿಕೊಂಡು ವೃದ್ಧನ ವೇಷದಲ್ಲಿ ಭೂಲೋಕದಲ್ಲಿ ಬಿಕ್ಷೆಯಾಡುತ್ತಾ ಒಬ್ಬ ಶ್ರೀಮಂತ ಮಣೆಗಾರನ ಮನೆಗೆ ಬಂದು ಬಿಕ್ಷೆ ಕೇಳಿದ. ಆ ಸಂದರ್ಭದಲ್ಲಿ ಮಣೆಗಾರ ಮತ್ತು ತನ್ನ ಹೆಂಡತಿ ಊಟ ಮಾಡುತ್ತಿದ್ದರಿಂದ ಕೂಗಿದ ತಕ್ಷಣ ಬಿಕ್ಷೆ ನೀಡದೇ ತಡಮಾಡಿದರು. ಕೋಪಗೊಂಡ ಕ್ಯಾತೇಲಿಂಗ ಮಣೆಗಾರನೊಡನೆ ಜಗಳ ಮಾಡಿದ. ಮಣೆಗಾರನಿಗೆ ಸಿಟ್ಟು ಬಂದಿತು. ಬಾರುಕೋಲಿನಿಂದ ಕ್ಯಾತೇಲಿಂಗನಿಗೆ ನಾಲ್ಕು ಬಾರಿಸಿದ, ಆಗ ಕ್ಯಾತೇಲಿಂಗ ತನ್ನ ಜೋಳಿಗೆಯಲ್ಲಿದ್ದ ಮಂತ್ರದ(ಮಂಕುಬೂದಿ) ಬೂದಿಯನ್ನು ತೆಗೆದು ಮಣೆಗಾರ ಮತ್ತು ಅವನ ಹೆಂಡತಿ ಮೇಲೆ ಎರಚಿದಾಗ ಅವರಿಬ್ಬರೂ ನಾಯಿಗಳಾಗಿ ಪರಿವರ್ತಿತರಾದರು.

ಕ್ಯಾತ್ಯಾರದ (ದ್ವಾರಪುರದಹಟ್ಟಿ) ಗೊಲ್ಲರಹಟ್ಟಿಯನ್ನು ನುಗ್ಗಲು ಪ್ರಯತ್ನಿಸಿದ ಕ್ಯಾತೇಲಿಂಗನನ್ನು ಉದಿಬಾಗಿಲು ಕಾಯುತ್ತಿದ್ದ ಘಟಸರ್ಪ ತಡೆಯುತ್ತದೆ. ನನಗೆ ಹಟ್ಟಿ ಒಳಗೆ ಹೋಗಲು ಜಾಗ ಬಿಡಬೇಕೆಂದು ಕ್ಯಾತೇಲಿಂಗ ಎಷ್ಟೇ ಕೇಳಿಕೊಂಡರೂ ಘಟಸರ್ಪ ಮಾತು ಕೇಳದಿದ್ದಾಗ ಕೋಪಗೊಂಡ ಕ್ಯಾತೇಲಿಂಗ ಜೋಳಿಗೆಯಲ್ಲಿದ್ದ ಮಂಕು ಬೂದಿಯನ್ನು ಅವರ ಮುಖಕ್ಕೆ ಎರಚಿದ, ಘಟಸರ್ಪದ ಎರಡು ಕಣ್ಣುಗಳು ಕಾಣದಂತಾದವು. ವಸತಿ ದಿಬ್ಬದ ಹಟ್ಟಿ ಬಳಿ ಬಟಾ ಬಯಲಿನ ಅಡವಿಯಲ್ಲಿ ಆವಿನಗೂಡು ಹಾಕಬೇಕೆಂದು ಕ್ಯಾತೇಲಿಂಗ ಹೇಳಿದಾಗ ಅದಕ್ಕೆ ಬೇಕಾದ ತುಗ್ಲೀಮರ, ಜಾಲಿಕಳ್ಳೆ, ಬಾರೇಕಳ್ಳೆ ಹತ್ತಿರದಲ್ಲಿ ಎಲ್ಲಿಯೂ ಇಲ್ಲವೆಂದು ಗಿಡುವಣ್ಣ ಹೇಳುತ್ತಾನೆ. ಕ್ಯಾತೆಲಿಂಗ ಅವನಿಗೆ ಹಿಂತಿರುಗಿ ನೋಡುವಂತೆ ಹೇಳಿದ. ಗಿಡುವಣ್ಣ ಹಿಂತಿರುಗಿ ನೋಡಿದಾಗ ಯಥೇಚ್ಛವಾಗಿ ತುಗ್ಲೀಮರದ ಕಳ್ಳೆಯ, ಬಾರೇಕಳ್ಳೆಯ ಕಾಡು ಬೆಳೆದು ನಿಂತಿತ್ತು. ದನಗಾಹಿಗಳಾಗಿದ್ದ ಅಡವಣ್ಣ ಮತ್ತು ಗಿಡವಣ್ಣ ಅಣ್ಣ ತಮ್ಮಂದಿರಿಗೆ ವಯೋವೃದ್ಧ ತುರುಕನ ವೇಷದಲ್ಲಿ ಕಾಣಿಸಿಕೊಂಡಿದ್ದು, ಅಲ್ಲದೆ ಹಾಲು ಕುಡಿದು ಹಾಲು ಕುಡಿದಪ್ಪ ದೇವರು ಎಂದು ಕರೆಸಿಕೊಂಡ. ಕಲ್ಯಾಣಪುರದ ರೆಡ್ಡಿಗಳ ಮನೆಯಿಂದ ಹೊರಟು ಬೊಮ್ಮಣ್ಣನ ಜೊತೆ ದನಕರುಗಳನ್ನು ಹೊಡೆದುಕೊಂಡು ವೇದಾವತಿ ನದಿ ದಂಡೆಯಲ್ಲಿ

ಮೇಯಿಸುತ್ತಿರುವಾಗ ರೆಡ್ಡಿಗರು ಬಂದು ದನಗಳನ್ನು ಹುಡುಕುವಾಗ ಕರಿಯ ಬಣ್ಣದ ದನಗಳನ್ನು ಬಿಳಿಯ ಬಣ್ಣ ಮಾಡಿದ್ದು, ಅಂಡವನ್ನು ಗುಂಡವನಾಗಿ ದನಗಳನ್ನು ಪರಿವರ್ತಿಸಿದ. ಹೀಗೆ ಕ್ಯಾತಪ್ಪ ಹಲವು ಬಗೆಯ ಪವಾಡಗಳನ್ನು ಮಾಡುವ ಮೂಲಕ ದೈವದ ಸ್ವರೂಪವನ್ನು ಪಡೆದುಕೊಂಡ. ಹೀಗೆ ಆತನ ಪಯಣ ಮತ್ತು ಸಾಧನೆಯನ್ನು ಗುರುತಿಸಬಹುದು.

ಇತರೆ ಜಾತಿ, ಬುಡಕಟ್ಟುಗಳೊಂದಿಗೆ ಹೋರಾಟಕ್ಕಿಳಿದ ಸಾಂಸ್ಕೃತಿಕ ವೀರ ಅಥವಾ ಪುರಾಣ ದೇವರು ಕ್ಯಾತಪ್ಪ. ಈತನನ್ನು ಹೇಮರೆಡ್ಡಿಗಳು ಅವಮಾನಿಸಿದ್ದು, ಇದರಿಂದ ಕುಪಿತನಾದ ಕ್ಯಾತಪ್ಪ ರೆಡ್ಡಿ ಮನೆತನವನ್ನು ಸರ್ವನಾಶ ಮಾಡುವುದು ಇಂತಹ ಹಲವು ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಕರಿಯಣ್ಣ, ಸಿರಿಯಣ್ಣ, ಕೋಣನ ತಮ್ಮಣ್ಣ ಮುಂತಾದ ಈರಗಾರರ ಕಥನಗಳು ತನ್ನ ಒಡಲಲ್ಲಿ ಗರ್ಭಿಕರಿಸಿಕೊಂಡಿರುವುದಲ್ಲದೆ ಪಾಳೆಯ ಪಟ್ಟುಗಳ ಪ್ರಾಬಲ್ಯ ಪೂರ್ವದ ಬುಡಕಟ್ಟುಗಳ ನಡಾವಳಿಕೆಯನ್ನು ಸಾಕ್ಷಿಕರಿಸುವುದನ್ನು ಮೌಖಿಕ ಕಥನಗಳು ಕಟ್ಟಿಕೊಡುತ್ತವೆ.

### ೨.೫ ಕ್ಯಾತಪ್ಪ ದೈವದ ಇತ್ಯಾತ್ಮಕ ಅನನ್ಯತೆಯ ಅನಾವರಣ

ದೈವಗಳು ಈ ಜಗತ್ತಿನ ಸಾಂಸ್ಕೃತಿಕ ಮುಖ ಒಂದಾದರೆ ಸಾಮಾಜಿಕ ಮುಖ ಇನ್ನೊಂದು. ಇವೆರಡನ್ನು ಒಟ್ಟಾಗಿ ಇಟ್ಟೇ ನಾವು ನೋಡಬೇಕಾಗುತ್ತದೆ. ದೈವ ಸೃಷ್ಟಿಯಾದದ್ದು ಹೇಗೆ! ಇದೊಂದು ಜಟಿಲ ಪ್ರಶ್ನೆ. ಲಕ್ಷಾಂತರ ವರ್ಷಗಳ ಮಾನವನ ಇತಿಹಾಸದಲ್ಲಿ ನಿರಂತರವಾಗಿ ವಿಕಾಸ ಹೊಂದುತ್ತಾ ಬಂದ ಅವನ ಪ್ರಜ್ಞೆ ಇವತ್ತಿಗೂ ಅದೇ ವಿಕಾಸದ ಹಾದಿಯಲ್ಲೇ ನಡೆಯುತ್ತಿದೆ. ಮಾನವ ಆರಂಭದ ದಿನಗಳಲ್ಲಿ ಕಾಡುಮಾನವನಾಗಿ ಗೆಡ್ಡೆ ಗೆಣಸು ತಿನ್ನುತ್ತ ಪ್ರಾಣಿಯಂತೆ ಅಲೆಮಾರಿ ಜೀವನ ನಡೆಸುತ್ತಿದುದ್ದು ತಿಳಿದುಬರುತ್ತದೆ. ಕಾಡು, ಗುಡ್ಡ, ಬೆಟ್ಟಗಳಲ್ಲಿ ಏಕಾಂಗಿಯಾಗಿ ಅಲೆದಾಡುತ್ತ ಕೈಗೆ ದೊರಕಿದ ಹಣ್ಣು ಹಂಪಲು ಗೆಡ್ಡೆ, ಗೆಣಸುಗಳನ್ನು ತಿಂದು ಹೊಟ್ಟೆ ತುಂಬಿಸಿಕೊಂಡು ಜೀವಿಸುತ್ತಿದ್ದ ಮಾನವನ ಜೀವನ ಕ್ರಮ ಬೆಳವಣಿಗೆಯಾದಂತೆ ಬೇಟೆಯಾಡುವುದನ್ನು ಒಂದು ಪ್ರಮುಖ ಕಸುಬನ್ನಾಗಿ ಮಾಡಿಕೊಂಡು, ಪ್ರಾಣಿಗಳ ಮಾಂಸವನ್ನು ತಿನ್ನುತ್ತಾ ತನ್ನ ಹಸಿವನ್ನು ನೀಗಿಸಿಕೊಂಡನು. ಕ್ರಮೇಣ ಬೆಂಕಿಯ ಬಳಕೆ ಗೊತ್ತಾದಾಗ ಹಸಿ ಮಾಂಸವನ್ನು ಬೇಯಿಸಿಕೊಂಡು ತಿನ್ನಲು ಪ್ರಾರಂಭಿಸಿದನು. ನಂತರ ಬರುಬರುತ್ತ ಅವನಲ್ಲಿ ಉದ್ಯೋಗದ ಕಲ್ಪನೆ ಮೂಡಿ, ವಿಶಾಲವಾದ ಬಯಲು ಪ್ರದೇಶದಲ್ಲಿ ನೆಲೆನಿಂತು ಕೆಲ ಪ್ರಾಣಿಗಳನ್ನು ಸಾಕಿ, ಅವುಗಳ ಸಹಾಯದಿಂದ ಬೇಸಾಯ ಪ್ರಾರಂಭಿಸಿದನು.

ತಾನು ಸಾಕಿದ ಹಸು, ಎಮ್ಮೆ ಕುರಿ, ಮೇಕೆ ಅವುಗಳಿಂದ ಹಾಲು, ತುಪ್ಪ, ಮೊಸರು ದೊರಕಿಸಿಕೊಂಡನು. ಕುರಿಗಳ ಉಣ್ಣೆಯಿಂದ ಬಟ್ಟೆಯನ್ನು ತಯಾರಿಸಲು ಕಂಡುಕೊಂಡ. ಇದಕ್ಕಿಂತ ಪೂರ್ವದಲ್ಲಿ ಕಾಡಿನಲ್ಲಿ ಅಲೆಯುತ್ತಿದ್ದಾಗ ಮರದ ಪೊಟರೆಗಳು, ಬಳ್ಳಿಗಳು, ಗಿಡದ ಎಲೆಗಳು ಅವನ ಆಶ್ರಯ ತಾಣಗಳಾಗಿದ್ದವು. ಮಾನಸಿಕ ಬೆಳವಣಿಗೆಯಿಂದ ಭಾವನೆಗಳು ಪಕ್ವವಾದಂತೆ ಅವನು ಏಕಾಂಗಿತನವನ್ನು ನಿಲ್ಲಿಸಿ, ಸಾಂಘಿಕ ಜೀವನ ನಡೆಸಲು ಆಸಕ್ತಿಯನ್ನು ಹೊಂದಿದನು. ಗುಂಪು ಕಟ್ಟಿಕೊಂಡು ಕೌಟುಂಬಿಕ ಜೀವನ ಪ್ರಾರಭಿಸಿದನು. ಭಾವುಕ ಜೀವಿಯಾದಂತೆ ಹುಟ್ಟು ಸಾವುಗಳು ಮಾನವನಲ್ಲಿ ಭಯದ ಅಂಶವನ್ನು ಬಿತ್ತಿದವು. ಪ್ರಾಕೃತಿಕ ವಿಕೋಪಗಳಾದ ಮಳೆ, ಗುಡುಗು, ಮಿಂಚು, ಸಿಡಿಲು, ಬಿರುಗಾಳಿ, ಭೂಕಂಪ, ಜ್ವಾಲಾಮುಖಿ, ಅಗ್ನಿ ಮತ್ತು ಪ್ರಾಣಿಗಳಿಂದ ಒದಗುವ ಅಪಾಯವನ್ನು ತಪ್ಪಿಸಿಕೊಳ್ಳಲು ಆತ ಮೊದಲು ಯೋಚಿಸುವ ಅನಿವಾರ್ಯತೆ ಉಂಟಾಯಿತು. ಒಂದು ಕಾಡುಪ್ರಾಣಿ ತಕ್ಷಣ ಎದುರಾಗಿ ಮೇಲೆ ಬೀಳಲು ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ಮೊದಲು ಕಟ್ಟಿಗೆಯನ್ನು ಆಯುಧವನ್ನಾಗಿ ಉಪಯೋಗಿಸಿದ. ಅನಂತರ ಇದು ದೀರ್ಘಕಾಲ ಉಪಯೋಗಕ್ಕೆ ಬರಲಾರದು ಎನಿಸಿದಾಗ ಚೂಪಾದ ಕಲ್ಲನ್ನು ಆಯುಧವನ್ನಾಗಿ ಮಾಡಿಕೊಂಡ. ಪ್ರಾಣಿಗಳಿಂದ ಅಪಾಯ ಒದಗಿದಾಗ ರಕ್ಷಿಸಿದ ಇಲ್ಲವೇ ಹಸಿವಾದಾಗ ಒಂದು ಪ್ರಾಣಿಯನ್ನು ಬೇಟೆಯಾಡಲು ಸಹಾಯ ಮಾಡಿದ. ಈ ಮರದ ಅಥವಾ ಕಲ್ಲಿನ ಆಯುಧಗಳೇ ಇವನಿಗೆ ಆರಂಭದಲ್ಲಿನ ದೈವಗಳು.

ಬುದ್ಧಿಶಕ್ತಿ ವಿಕಾಸವಾಗದ ಬೇಟೆ ಸಂಸ್ಕೃತಿಯ ಕಾಲದಲ್ಲಿ ಆಯುಧಗಳನ್ನು ಆತ ಆರಾಧಿಸುತ್ತಿದ್ದ ಎಂಬುವುದಕ್ಕೆ ಇದು ಆಚರಣೆಯಲ್ಲಿರುವ ಆಯುಧ ಪೂಜೆಯೇ ಸಾಕ್ಷಿಯಾಗಿದೆ. ವೈಯಕ್ತಿಕ ಜೀವನದಲ್ಲಿ ಮೂಡಿಬಂದ ಭಯವನ್ನು ಹೋಗಲಾಡಿಸಿಕೊಳ್ಳಲು ಭಕ್ತಿ ನೆಲೆಯೂರಿತು. ಯಾವುದೋ ಒಂದು ಚೇತನಶಕ್ತಿ ಭೂಮಿಯ ಅಂತರಾಳದಲ್ಲಿ ಹುದುಗಿಕೊಂಡಿರುವುದನ್ನು ಗುರುತಿಸಿದ ಮಾನವ, ಆ ಶಕ್ತಿಯಲ್ಲಿ ದೈವತ್ವನ್ನು ಗುರುತಿಸಿದನು. ಇದರಿಂದ ಮಾನವನಲ್ಲಿ ದೈವತ್ವ ಎನ್ನುವುದು ದೈವದ ಕಲ್ಪನೆಯಾಗಿ ಸ್ಥಿರತರವಾಗಿ ಉಳಿದುಕೊಳ್ಳಲು ಸಾಧ್ಯವಾಯಿತು. ಮಾನವನು ಪ್ರಕೃತಿಯಲ್ಲಿ ತನಗಿಂತ ಮೇಲಾದ ಒಂದು ಶಕ್ತಿ ಇದೆ. ಅದಕ್ಕೂ ತನಗೂ ಒಂದು ರೀತಿಯ ಸಂಬಂಧವಿದೆ ಎಂದು ಯಾವಾಗ ಬಗೆದನೋ, ಅಂದೇ ಧರ್ಮ ಉಗಮವಾಯಿತು. ಆದಿಯಿಂದಲೂ ಮಾನವ ಸಮಾಜದಲ್ಲಿ ಒಂದಲ್ಲ ಒಂದು ಪ್ರಭಾವ ಇದ್ದೇ ಇದೆ. ಮನಃ ಶಾಸ್ತ್ರಜ್ಞ ಸಿ.ಜೆ. ಯೂಂಗ್ ರವರ ಅಭಿಪ್ರಾಯದಲ್ಲಿ "ವ್ಯಕ್ತಿತ್ವದಲ್ಲಿ ಪರಿಪೂರ್ಣತೆ ಪಡೆಯಬೇಕಾದರೆ ವ್ಯಕ್ತಿ ಒಂದಲ್ಲ ಒಂದು ವಿಧದಲ್ಲಿ ಧರ್ಮದಲ್ಲಿ ನಂಬಿಕೆ ಇಡಬೇಕು. ಧರ್ಮಶ್ರದ್ಧೆಯಿಂದ

ಬಾಳಬೇಕು, ಈ ಲೌಕಿಕ ಶಕ್ತಿ ಭೂತ, ಪ್ರೇತ,ಶಕ್ತಿ ಮಾನವ, ದೇವತೆಗಳ ರೂಪಗಳಲ್ಲಿ ಕಾಣಿಸಿಕೊಳ್ಳಬಹುದು"[೧೮] ಎಂಬುದು ಮಾನವ ಶಾಸ್ತ್ರಜ್ಞ ಟೈಲರ್‌ನು ಕೆಲವು ಆದಿವಾಸಿ ಸಮಾಜಗಳ ಧರ್ಮಗಳನ್ನು ಆಳವಾಗಿ ಅಭ್ಯಾಸ ಮಾಡಿ ಧರ್ಮವು ನಾಗರಿಕತೆಗೆ ಮಾತ್ರವೇ ಬಂದ ಬಳುವಳಿಯೇನಲ್ಲ ಎಂದು ಹೇಳಿದ. ಇದರಿಂದಾಗಿ ಆದಿವಾಸಿಗಳಿಗೂ ಧರ್ಮವಿದೆ ಎಂಬುವುದರ ಅರಿವು ಎಲ್ಲರಲ್ಲಿಯೂ ಮೂಡಿತು. ಮಾನವನ ಕಣ್ಣಿಗೆ ಗೋಚರವಾಗದ, ಕೈಗೆ ನಿಲುಕದ ಅಲೌಕಿಕ ಶಕ್ತಿಯಲ್ಲಿ ನಂಬಿಕೆ ಮತ್ತು ನಂಬಿಕೆಗೆ ತಕ್ಕಂತೆ ಆಚರಣೆಗಳು ಉಂಟಾದವು. ಮಾನವ ವಿಜ್ಞಾನಿ ಟೇಲರ್, ಕೆಲವು ಅಭೌತ, ಅಗೋಚರ, ಆಧ್ಯಾತ್ಮಿಕ ಜೀವಿಗಳ ಬಗೆಗೆ ಆದಿವಾಸಿಗಳಲ್ಲಿ ಭಯ, ಭಕ್ತಿ ಮೂಡಿಬಂದು, ಅದೇ ಧರ್ಮವಾಗಿ ಪರಿಣಮಿಸಿತು. ಎಂದು ಅಭಿಪ್ರಾಯಪಡುತ್ತಾನೆ. ಪ್ರತಿಯೊಂದು ಸಜೀವ ನಿರ್ಜೀವ ವಸ್ತುಗಳಲ್ಲೂ ಯಾವುದೋ ಶಕ್ತಿ ಇದೆ ಎಂಬುದು ಆದಿವಾಸಿಗಳ ಧರ್ಮದ ಮೂಲವಾಗಿದೆ.

ರ್‍ಯಾಲ್ಫ್ ಎಲ್. ಬೀಲ್ಸ್ ಮತ್ತು ಹ್ಯಾರಿ ಹೊಯ್ಜರ ಅವರು ಹೇಳುವಂತೆ; ಧರ್ಮವು ಮನುಷ್ಯನ ಭಯ ಮತ್ತು ಕಾತುರತೆಯನ್ನು ಕಡಿಮೆ ಮಾಡಿ, ಜೀವನದಲ್ಲಿ ಒಂದು ಸುಭದ್ರತೆಯನ್ನು ತಂದು ಕೊಡುವುದಲ್ಲದೆ, ಶೀಘ್ರವಾಗಿ ಅವನ ಭವಿಷ್ಯವನ್ನು ಸಹ ರೂಪಿಸುತ್ತದೆ. ಅದಲ್ಲದೆ ಇಡೀ ಪ್ರಪಂಚದಲ್ಲಿ ಧರ್ಮವು ಮನುಷ್ಯನನ್ನು ಭಗವಂತನ ಕಡೆಗೆ ಕರೆದೊಯ್ಯುವುದಲ್ಲದೆ, ಅದು ಪ್ರಕೃತಿಯ ಇನ್ನಿತರ ಮುಖಗಳಾದ ಮನುಷ್ಯ, ಪ್ರಾಣಿಗಳು, ಸಸ್ಯ ಮತ್ತಿತರೊಡನೆ ನಿಕಟ ಸಂಬಂಧವನ್ನು ಹೊಂದಿರುವಂತೆ ಮಾಡುತ್ತದೆ. "ಮೊದಲು ಮನುಷ್ಯ ಕಂಡರಿಯದ ದಿವ್ಯ ಶಕ್ತಿಯನ್ನು ಕಾಣಲು ಅರಸಿ ಅವನ ಜೀವನದಲ್ಲೇ ಇದನ್ನು ತನ್ನ ಸುತ್ತಮುತ್ತಲಿನ ಪ್ರಕೃತಿಯಲ್ಲಿ ಅಡಗಿರುವುದನ್ನು ಕಾಣುತ್ತಾನೆ"[೧೯] ಎಂದು ಝೂನ್ ಧರ್ಮ ಸಾರುತ್ತದೆ. ಸಜೀವ, ನಿರ್ಜೀವ ವಸ್ತುಗಳಲ್ಲಿರುವ ಶಕ್ತಿಗಳಿಂದ ಪ್ರಯೋಜನ ಪಡೆಯಲು ಆದಿವಾಸಿಗಳಲ್ಲಿ ಪೂಜೆ, ಪ್ರಾರ್ಥನೆ, ಬಲಿ ಅರ್ಪಿಸುವ ಭಾವನೆ, ಬೆಳೆಯಿತು. ವ್ಯಕ್ತಿ ಬದುಕಿದ್ದಾಗ ಆತನಲ್ಲಿಟ್ಟಿದ್ದ ಪ್ರೀತಿ ವಿಶ್ವಾಸಗಳನ್ನು ಸತ್ತ ಮೇಲೂ ತೋರಿಸಲು, ಅವರಿಗೆ ಶಾಂತಿ ಕೊಡಬೇಕೆಂಬ ಭಾವನೆಯಿಂದ ಪತೃಗಳ ಆರಾಧನೆ ಕಲಿತರು. ಈ ಪಿತೃಪೂಜೆಯೇ ಮೊದಲ ಧರ್ಮವಾಯಿತು. ಅವರುಗಳ ಸಮಾಧಿಗಳೇ ದೇವಸ್ಥಾನಗಳಾಗಿದ್ದವೆಂದರೆ ತಪ್ಪಾಗಲಾರದು. ಮನುಷ್ಯನು ಮೊದಲು ಅನೇಕ ದೇವರಲ್ಲಿ ನಂಬಿಕೆ ಇಟ್ಟಿದ್ದು ಆ ಮೇಲೆ ಒಂದೇ ದೇವರಲ್ಲಿ ನಂಬಿಕೆ ಇಟ್ಟರು ಎಂದು ಟೇಲರ್ ವಾದಿಸಿದ್ದಾನೆ. "ಪ್ರಕೃತಿಯ ರೂಪವಾದ ಮರ, ಗಿಡ, ಕಲ್ಲು, ಗುಡ್ಡ, ವಾಯು, ಭೂಮಿ, ಆಕಾಶವನ್ನು ಆರಾಧಿಸಲು ಆರಂಭಿಸಿದರು. ಇದಕ್ಕೆ ಆದಿವಾಸಿಗಳ ವಿಕಾಸ ಹೊಂದದ ಮನಸ್ಸೇ ಕಾರಣ"[೨೦] ಎಂದು ಮ್ಯಾಕ್ಸ್‌ಮುಲ್ಲರ್ ಹೇಳುತ್ತಾನೆ.

ಮನುಷ್ಯನ ಆರ್ಥಿಕ ಚಟವಟಿಕೆಗಳಲ್ಲಿ ಆದಿಮಾನವನಿಂದ ಹಿಡಿದು ಇಂದಿನವರೆಗೆ ಪ್ರಮುಖವಾದ ಐದು ಹಂತಗಳನ್ನು ಗುರುತಿಸಬಹುದು. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಮತ್ತು ಕೈಗಾರಿಕೆ ಎಂಬುದನ್ನು ಕಾರ್ಲ್‌ಮಾರ್ಕ್ಸ್‌ನ ದೃಷ್ಟಾಂತ ಸಮೇತ ವಿಶ್ಲೇಷಿಸುತ್ತಾನೆ. ಕೊನೆಯ ಹಂತದಲ್ಲಿರುವ ಮನುಷ್ಯ ಮೊದಲಿನ ನಾಲ್ಕು ಹಂತಗಳನ್ನು ದಾಟಿ ಬಂದಿರಲೇಬೇಕು. ಆದರೂ ಪ್ರಪಂಚದಾದ್ಯಂತ ಇರುವ ವಿವಿಧ ಜನಾಂಗಗಳಲ್ಲಿ ಮೊದಲಿನ ನಾಲ್ಕು ಹಂತಗಳಿರುವ ಅಂದರೆ ವಿಕಾಸದಿಂದಿರುವ ಮನುಷ್ಯನ ವರ್ಗಗಳಗಳನ್ನು ಕಾಣಬಹುದು. ಕೆಲವರು ಬೇಟೆಯಲ್ಲೇ ಇಂದೂ ಜೀವನ ಸಾಗಿಸುತ್ತಿದ್ದರೆ, ಇನ್ನು ಕೆಲವರು ಆಡು, ಕುರಿ ಮತ್ತು ದನಕರುಗಳನ್ನು ನಂಬಿಕೊಂಡು ಕೃಷಿಗೆ ಕಾಲಿಡದೆ ಹಾಗೇ ಉಳಿದಿದ್ದಾರೆ.

ಪ್ರಕೃತಿಯೊಂದಿಗೆ ನಿಕಟ ಒಡನಾಟವಿರಿಸಿಕೊಂಡು ಬಂದ ಮಾನವ ತನ್ನ ಕಲ್ಪನೆಯ ಆಳದಲ್ಲಿ ಅವುಗಳಿಗೆ ದೈವೀಸ್ವರೂಪವನ್ನು ಕೊಟ್ಟು ತನ್ನ ಕಲ್ಪನೆಗೆ ತೋಚಿದ ರೀತಿಯಲ್ಲಿ ದೇವರನ್ನು ಸೃಷ್ಟಿಸಿಕೊಂಡು ಆರಾಧಿಸಲು ಪ್ರಾರಂಭಿಸಿದನು. ದೇವ-ದೇವತೆಗಳು ಅವುಗಳ ಆರಾಧನಾ ಸಂಪ್ರದಾಯಗಳು ಹುಟ್ಟಿದ್ದು ಈ ಆರ್ಥಿಕ ಚಟವಟಿಕೆಗಳ ಹಿನ್ನೆಲೆಯಲ್ಲಿ ಮೊದಲಿನ ನಾಲ್ಕು ಹಂತಗಳಲ್ಲಿ ಸೃಷ್ಟಿಸಿಕೊಂಡ ದೇವ-ದೇವತೆಗಳ ರೂಪವನ್ನು ನಾವು ಅಲ್ಲಲ್ಲಿ ಕಾಣಬಹುದು. ಬಿಲ್ಲು, ಬಾಣ ಹಿಡಿದು ಕಾಡುಪ್ರಾಣಿಗಳ ಮೇಲೆ ಸವಾರಿ ಮಾಡುವ ದೇವರುಗಳು ಹುಟ್ಟಿದ್ದು ಬೇಟೆಯ ಕಾಲದಲ್ಲಿ ಕೊಳಲು ಕೈಯಲ್ಲಿಡಿದು ಎಡಗಾಲಿನ ಮೇಲೆ ನೇರವಾಗಿ ನಿಂತು ಬಲ ಪಾದವನ್ನು ಓರೆಯಾಗಿ ಬಗ್ಗಿದ ಕೃಷ್ಣನ ಬೆನ್ನ ಹಿಂದೆ ಹಸು ನಿಂತು ಅವನು ಬಗ್ಗಿಸಿದ ಪಾದವನ್ನು ಮೂಸುವಂತೆ ಚಿತ್ರಿಸಿರುವ ಚಿತ್ರಗಳು ಪಶುಪಾಲನ ಹಂತವನ್ನು ನೆನಪಿಸುತ್ತಿವೆ. ಕೆಲವು ದೇವತೆಗಳು ಕುರಿ, ದನಕರುಗಳನ್ನು ಕಾಯುವ ವೃತ್ತಿಯನ್ನೇ ಆರಿಸಿಕೊಂಡಿವೆ. ಕೃಷಿಯ ಹಂತ ಬರುವವರೆಗೂ ಬರೀ ಪುರುಷ ದೇವತೆಗಳು ಪ್ರಾಬಲ್ಯ ಪಡೆದಿವೆ. ಸ್ತ್ರೀ ದೇವತೆಗಳು ಗೌಣವಾಗಿವೆ. ಸ್ತ್ರೀ ದೇವತೆಗಳು ಗ್ರಾಮದೇವತೆಗಳು ನಿಜವಾದ ಅರ್ಥದಲ್ಲಿ ಹುಟ್ಟಿ ವಿಕಾಸವಾಗಿದ್ದು ಕೃಷಿಯ ಆರಂಭದಲ್ಲಿ ಮತ್ತು ನಂತರದ ಬೆಳವಣಿಗೆಯಲ್ಲಿ, ಬೇಟೆಯ ಹಂತದಲ್ಲಾಗಲೀ, ಕೃಷಿಯ ಹಂತದಲ್ಲಾಗಲೀ, ದೈವಗಳು ಸೃಷ್ಟಿಯಾದದ್ದು ಭಯ, ಭ್ರಾಂತಿ ಮಿಶ್ರಿತ ಗೌರವದಲ್ಲಿ ತನಗೆ ಭಯ ಹುಟ್ಟಿಸುವ ಪ್ರಾಣಿಯನ್ನೋ ಅಥವಾ ಪ್ರಾಕೃತಿಕ ಸಂಗತಿಗಳನ್ನೋ ಮೂರ್ತ ರೂಪಕ್ಕಿಳಿಸಿ ಅದನ್ನು ಓಲೈಸಲು ಅಥವಾ ಆರಾಧಿಸಲು ತೊಡಗಿದ. ಪ್ರಕೃತಿಯಲ್ಲಿ ಎಲ್ಲಕ್ಕಿಂತ ಮಿಗಿಲಾದ ಅದ್ಭುತ ಶಕ್ತಿ ದೇವರು ಇದೆ ಎಂಬ ನಂಬಿಕೆ ಬೆಳೆಯಿತು. ಅದನ್ನು ಸಂಕೇತ ಅಥವಾ ಪ್ರತಿಮೆಗಳ ಮೂಲಕ ಸಾಕ್ಷಾತ್ಕಾರಿಸಿಕೊಂಡ. ಇವುಗಳ ಆರಾಧನೆಯ ಹಿನ್ನೆಲೆಯಲ್ಲಿ ನಿಸರ್ಗದ ರಹಸ್ಯಗಳನ್ನು ಅರಿಯುವ ಕುತೂಹಲವೂ

ಉಂಟಾಗಿರುವುದರಿಂದ ಆಮೂರ್ತ ದೈವದ ಮೂರ್ತ ಪ್ರತಿಮೆಗಳ ಆವಿಷ್ಕಾರ ಉಂಟಾಗಿದೆ. "ಪಶ್ಚಿಮ ಆಫ್ರಿಕಾದಲ್ಲಿ ಆರಾಧನಾ ವಸ್ತುವನ್ನು ಬಣ್ಣದಿಂದ ಪೂಸುವವರೆಗೂ ಅದನ್ನು ಶಕ್ತಿಯೇ ದೊರೆಯುವುದಿಲ್ಲ ಕುಲದೇವತಾ ಮೊಗವಾಡಗಳಿಗೆ ಕೆತ್ತನೆ ಮಾಡುವುದು. ಹಾಗೂ ಸ್ವಯಂ ಹಚ್ಚೆ ಹಾಕಿಸಿಕೊಳ್ಳುವುದರಿಂದ ವ್ಯಕ್ತಿ ಅಥವಾ ಗುಂಪು ಬೇಕಾದ ಪ್ರಾಣಿಯ ಗುಣವನ್ನು ಪಡೆದುಕೊಳ್ಳಬಹುದು"[೨೧].

ಇಷ್ಟೆ ಅಲ್ಲದೆ ಅವನ ಕಲ್ಪನಾ ಸಾಮರ್ಥ್ಯ ವೃದ್ಧಿಯಾದಂತೆಲ್ಲ ಅವನು ಜಗತ್ತಿನ ವಿಸ್ಮಯಗಳಿಗೆ ಮತ್ತು ತನ್ನ ಅರಿವಿಗೆ ಮೀರಿದ ಶಕ್ತಿಗಳ ಬಗೆಗೆ ವಿವರಣೆಯನ್ನು ಕೊಟ್ಟು ಕೊಳ್ಳುವುದು ಅಥವಾ ಅವುಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳವುದು ಅವನ ಅಗತ್ಯಗಳಲ್ಲಿ ಒಂದಾಯಿತು. ಬೇಟೆಗೆ ಹೊರಟಾಗ ತಾನು ಬೇಟೆಯಾಡಬೇಕೆಂದಿರುವ ಪ್ರಾಣಿಯ ಚಿತ್ರವೊಂದನ್ನು ರೇಖಿಸಿ ಅದಕ್ಕೆ ತನ್ನ ಆಯುಧ ತಗುಲಿದಂತೆ ಅದು ಮರಣವನ್ನೊಂದಿದಂತೆ ತೋರಿಸ ತೊಡಗಿದ. ಆ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನು ಎಳೆದು ಅದು ಪವಿತ್ರವೆಂದು ಭಾವಿಸಿದ. ಇಂತಹ ಚಿತ್ರಗಳಿಗೆ ಬದಲು ಪ್ರತಿಮೆಗಳನ್ನು ಮಾಡಿಕೊಂಡು ಅವುಗಳನ್ನು ಪವಿತ್ರವೆಂದು ಬಗೆಯಾದ ಸ್ಥಳವೊಂದರಲ್ಲಿಟ್ಟು ಪೂಜಿಸುವ ಪದ್ಧತಿ ಆರಂಭವಾಯಿತು. ಇಂತಹ ಸ್ಥಳಗಳಲ್ಲಿ ಇತರರು ಸ್ವೇಚ್ಚೆಯಾಗಿ ತಿರುಗಾಡುವುದನ್ನು ನಿಷೇಧಿಸಿ ಅದಕ್ಕೆ ರಕ್ಷಣೆಯನ್ನು ಒದಗಿಸಿರುವುದರಿಂದ ದೇವಾಲಯಗಳ ರಚನೆಗೆ ನಾಂದಿಯಾಯಿತು.

ಮನುಷ್ಯ ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುತ್ತಿದ್ದರೂ ಆ ಸಾವಿಗಿಂತ ಹೆಚ್ಚಾಗಿ ಬಾಧಿಸಿದ್ದು ತನ್ನಯೇ ಇರುವ ಇನ್ನೊಬ್ಬ ಮನುಷ್ಯನ ಸಾವು. ಇದ್ದಕ್ಕಿದ್ದಂತೆಯೇ ತನ್ನ ಜೊತೆಯಲ್ಲಿದ್ದವನೊಬ್ಬ ಸತ್ತಾಗ ಆತ ಎಲ್ಲಿ ಹೋದ ಎಂಬುವುದನ್ನು ತಿಳಿಯದೆ ಬಹುಶಃ ಆತ ಮರಳಿ ಬರಬಹುದೆನ್ನುವ ನಂಬಿಕೆಯಿಂದ ಆ ದೇಹವನ್ನು ಕಾಪಾಡಬೇಕೆಂಬ ಯೋಚನೆಗಳು ಬರಲಾರಂಭಿಸಿದವು. ಒಂದು ವೇಳೆ ದೇಹವಿಲ್ಲದಿದ್ದರೂ ಆ ದೇಹದೊಳಗಿದ್ದ ಚೇತನ ಮತ್ತೆ ಹಿಂದಿರುಗಬಹುದೆಂಬ ಭಾವನೆ ಆ ದೇಹ ಬಳಸುತ್ತಿದ್ದ ವಸ್ತುಗಳನ್ನು ಹಿಗಿದಿಡುವ ಪದ್ಧತಿ ಆರಂಭವಾಯಿತು. ಗುಳಿ ಅಥವಾ ಸಮಾಧಿ ತೋಡಿ ದೇಹವನ್ನು ರಕ್ಷಿಸುವ ಇಲ್ಲವೆ ದೇಹವನ್ನು ಸುಟ್ಟರೆ ಅದರ ಬೂದಿ ಮೂಳೆಗಳನ್ನು ಶೇಖರಿಸುವ ಜಾಗಗಳು ದೇವಾಲಯಗಳಂತೆ ಪೂಜಾರ್ಹವಾದವು. ಸಮಾಧಿ ಮಾಡಿದಾಗ ಆ ಸಮಾಧಿಯ ಮೇಲಿಡುವ ಮೂರು ಒರಟುಕಲ್ಲುಗಳ ಬೆನವ(ಬೆನಕಪ್ಪಗಳೇ) ಆಯುಧಗಳ ನಂತರದ ದೇವರುಗಳಾಗಿ ಜನಮನದಲ್ಲಿ ನೆಲೆಸಲಾರಂಭಿಸಿದವು. ಇಂತಹ ಸಮಾಧಿ ಮಂದಿರಗಳು ಎಲ್ಲ ಕಡೆ ಇದ್ದರೂ ವಿಶೇಷವಾಗಿ ವಸ್ತುವಿನ ದೃಷ್ಟಿಯಿಂದ ಗಮನ ಸೆಳೆಯುತ್ತಿರುವುದು ಈಜಿಪ್ಪಿನಲ್ಲಿರುವ

ಸಮಾಧಿ ರೂಪದ ಪಿರಮಿಡ್‌ಗಳು. ಇಂತಹ ಸಮಾಧಿಗಳನ್ನು ಅಲ್ಲಿ ಮೊದ ಮೊದಲು ಗುಹೆಗಳಲ್ಲಿಯೇ ತೋಡುತ್ತಿದ್ದರು. "ಕ್ರಿ.ಪೂ. ಎರಡು ಸಾವಿರದ ಐದುನೂರಕ್ಕೆ ಸೇರಿದ ಆತೆಕ್ ಎಂಬ ಅಧಿಕಾರಿಯ ಗಹಾ ಸಮಾಧಿಯೇ ಇದುವರೆಗೆ ತಿಳಿದಂತಿರುವ ಅತಿ ಪ್ರಾಚೀನ ಸಮಾಧಿಯಾಗಿದೆ"[೨].

ಸಮಾಧಿ ಮಂದಿರಗಳಲ್ಲಿ ಸಂಬಂಧಿಕರ ದೇಹ ಆತ್ಮಗಳನ್ನು ದೇವರನ್ನಾಗಿ ಭಾವಿಸಿದಂತೆ ಪ್ರಕೃತಿಯ ವಿಸ್ಮಯ, ಅದ್ಭುತ ಘಟನೆಗಳಿಗೆ ಒಂದೊಂದ ಆಕಾರ ನೀಡಿ ದೈವಗಳನ್ನಾಗಿ ಪೂಜಿಸ ತೊಡಗಿದ. ಇಂತಹ ದೇವರುಗಳು ಮರದಲ್ಲಿರಬಹುದೆಂದು ಸಸ್ಯ ಕಲ್ಪನೆಗಳ ಕಲ್ಪನೆ ಮೂಡಿ ಬಂತು. ಸ್ವಲ್ಪ ವಿಚಿತ್ರ ಆಕಾರ ತಾಳಿದ ಮರವನ್ನು ಕಂಡಾಗ ಅದು ಎಲ್ಲ ಮರಗಳಂತಿಲ್ಲ ಎಂಬ ಕಾರಣಕ್ಕೆ ಅದರಲ್ಲಿ ಏನೋ ವಿಶೇಷ ಶಕ್ತಿ ಇದೆ ಎಂದು ತಿಳಿದು ಆರಾಧನೆ ಆರಂಭವಾಯಿತು. ಹಾಗೆಯೇ ಬಂಡೆಗಳು ಕಲ್ಲುಗಳಲ್ಲಿ ಸ್ವಲ್ಪ ವಿಚಿತ್ರವಾಗಿರುವಂಥವನ್ನು ಕಂಡಾಗಲೂ ಹೀಗೆಯೇ ಗೌರವ ಮಿಶ್ರಿತ ಭಯದ ಆರಾಧನೆ ಆರಂಭವಾಯಿತು. ಆರಂಭಕಾಲದಲ್ಲಿ ಮರದ ಬೊಡ್ಡೆಗಳು, ವಕ್ರವಾಗಿರುವ ಕಲ್ಲುಗಳೇ ದೇವರುಗಳಾಗಿ ಪರಿವರ್ತಿತವಾಗಿವೆ. ಇವುಗಳಿಗೆ ಕುಂಕುಮ, ಅರಿಶಿಣ, ಊದು ಬತ್ತಿ ಹಚ್ಚಿದರೆ ಆ ಜಾಗ ಪವಿತ್ರವಾಗಿ ನಿಧಾನಕ್ಕೆ ದೈವದ ವಸತಿಯಾಗಿ ಪರಿವರ್ತಿತವಾಗುತ್ತದೆ. ಇಂತಹ ಸ್ಥಳಗಳಿಗೆ ಕಾಡಿನಲ್ಲಿ ಸಿಗುವ ನಾಲ್ಕು ಕಲ್ಲುಗಳನ್ನು ನಿಲ್ಲಿಸಿ ಮೇಲೆ ನಾಲ್ಕು ದಬ್ಬೆಗಳನ್ನು ಹಾಕಿ ಸೊಪ್ಪುಸದೆ ಹೊದಿಸಿ ಚಪ್ಪರ ನಿರ್ಮಿಸಿದರೆ ಅದು ಆ ದೈವದ ವಸತಿಯಾಗುತ್ತದೆ. ಅಂತಹ ಮರದ ಬುಡದಲ್ಲಿ ತ್ರಿಕೋನಾಕಾರವಾಗಿ ಮೂರು ಕಲ್ಲುಗಳನ್ನು ಆರಿಸಿ ಚೂಪಾದ ಭಾಗ ಮೇಲೆ ಬರುವಂತೆ ನಿಲ್ಲಿಸಿ ಅವುಗಳನ್ನು ದೇವರೆಂದು ಭಾವಿಸಿ, ಆ ಮರದಲ್ಲಿರುವ ದೈವಶಕ್ತಿ ಈ ಮೂರು ಕಲ್ಲುಗಳೇ ಎಂದು ನಂಬಲಾಗುತ್ತಿತ್ತು.

ಅನಂತರ ಈ ಮೂರು ದೈವದ ಕಲ್ಲುಗಳಂತ ಎತ್ತರ, ಉದ್ದ ಅಗಲದಲ್ಲಿ ದೊಡ್ಡದಾಗಿರುವ ಅಂಗೈಯಂತೆ ಚಪ್ಪಟೆಯಾಗಿರುವ ಕಲ್ಲುಗಳನ್ನು ತೆಗೆದುಕೊಂಡು ದೈವದ ಹಿಂದುಗಡೆ ಮತ್ತು ಎರಡು ಪಕ್ಕೆಗಳಲ್ಲಿ ನಿಲ್ಲಿಸಿ ಈ ಮೂರು ಭಾಗದ ಕಲ್ಲುಗಳ ಮೇಲೆ ಒಂದು ಮುಚ್ಚುಗಲ್ಲನ್ನು ಇಟ್ಟರೆ ಇದು ದೈವದ ವಸತಿಯಾಗಿ ಬಿಡುತ್ತಿತ್ತು. ಇಂತಹ ದೈವದ ಕಲ್ಲುಗಳು ದೈವದ ಗುಡಿ, ಬೆನಕ ಗುಡಿಯಾಯ್ತು. ಮರದ ಬುಡದಲ್ಲಿ, ಗದ್ದೆಯ ಹೊಲದಲ್ಲಿ, ಕೆರೆ ಏರಿಯ ಬುಡದಲ್ಲಿ ದೈವಗಳನ್ನು ಪ್ರತಿಷ್ಠಾಪಿಸಿದರು. ಈಗಲೂ ಹಳ್ಳಿಗಳಲ್ಲಿರುವ ರೈತರು, ಬುಡಕಟ್ಟು ಜನಾಂಗದವರು, ಅಲೆಮಾರಿ ಸಮುದಾಯಗಳು ತಮ್ಮ ತಮ್ಮ ಇರುವಿಕೆಯ ಜಾಗದಲ್ಲಿ ದೈವಗಳನ್ನು ಪ್ರತಿಷ್ಠಾಪಿಸಿಕೊಂಡಿದ್ದಾರೆ. ಯುಗಾದಿ, ದೀಪಾವಳಿ, ದಸರಾ, ಹಿರಿಯರ ಹಬ್ಬ, ಶಿವರಾತ್ರಿ ಸಂದರ್ಭದಲ್ಲಿ ಬಯಲು ದೈವಗಳಿಗೆ ಪೂಜೆ ಸಲ್ಲಿಸಿ ಬರುತ್ತಾರೆ.

ಆರಂಭಕಾಲದಲ್ಲಿ ಪ್ರಾಣಿಗಳೇ ಮಾನವನ ದೈವಗಳಾಗಿದ್ದವು ಎಂಬುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಯಾಕೆಂದರೆ ಮಾನವ, ಬೇಟೆಗಿಂತ ಪೂರ್ವದ ಸ್ಥಿತಿ ಆಹಾರ ಸಂಗ್ರಹಣೆಯ ಕಾಲದಲ್ಲಿ ಪ್ರಾಣಿಗಳಂತೆಯೇ ಜೀವಿಸುತ್ತಿದ್ದು ಪ್ರಾಣಿಗಳನ್ನು ಕೊಂದೇ ಜೀವನ ನಡೆಸುತ್ತಿದ್ದ. ಇನ್ನು ಕೃಷಿಯ ಕಾಲಕ್ಕೆ ಬಂದರೆ ಪ್ರಾಣಿಗಳ ಸಹಕಾರ, ಒಡನಾಟವಿಲ್ಲದೆ ಅವನಿಗೆ ಬದುಕೇ ಇಲ್ಲ. ಈ ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸಿದರೆ ಆರಂಭದ ಕಾಲದಲ್ಲಿ ಅವನಿಗೆ ಹಾಗೂ ದೈವದ ಅಥವಾ ಪ್ರಕೃತಿಯ ಉಪಟಳ ನಿವಾರಿಸಿಕೊಳ್ಳಲು ಅವುಗಳ ಸಂಕೇತಗಳನ್ನು ಆರಾಧಿಸಲು ತೊಡಗಿದ. ಅಲೌಕಿಕವಾದ ಶಕ್ತಿಗಳನ್ನು ಒಲಿಸಿಕೊಳ್ಳುವ ಸಲುವಾಗಿ ನಲವತ್ತು ಸಾವಿರ ವರ್ಷಗಳಷ್ಟು ಹಿಂದಿಯೇ ಆದಿವಾಸಿಗಳು ತಮ್ಮ ಗುಹೆಗಳಲ್ಲಿ ಕಾಡುಪ್ರಾಣಿಗಳ ನೈಜ ಚಿತ್ರ ಬಿಡಿಸಿ ಅವು ಗಾಯಗೊಂಡಂತೆ ಸಿಕ್ಕು ಬಿದ್ದಂತೆ, ಸತ್ತಂತೆ ರೂಪಿಸಿರುವುದನ್ನು ನೋಡಿದರೆ, ಕೇವಲ ಕಲೆಗಾಗಿಯೇ ಇವು ಮೂಡಿ ಬಂದಿರುವುದಿಲ್ಲ ಎನಿಸುತ್ತದೆ. ಈ ಬಗೆಯ ಚಿತ್ರಣವೇ ಒಂದು ಧಾರ್ಮಿಕ ವಿಧಿ ಎಂದು ಪ್ರೊ.ಎಸ್.ಕೆ. ರಾಮಚಂದ್ರರಾವ್ ಅವರು ಅಭಿಪ್ರಾಯಪಡುತ್ತಾರೆ. ಸಾಮಾನ್ಯವಾಗಿ ಮನುಷ್ಯ ತನ್ನ ಬಯಕೆ ಕೈಗೂಡುವಂತೆ ಮಾಡಲು ನಿಸರ್ಗದ ಪ್ರಾಣಿಗಳನ್ನು ತನಗೆ ಅನುಕೂಲವಾಗುವಂತೆ ಚಿತ್ರಿಸಿದರೆ ಸಾಕು ಎನ್ನುವ ತಾಂತ್ರಿಕ ಕಲ್ಪನೆ ಈ ಕಲೆಯ ಹಿನ್ನೆಲೆಯಲ್ಲಿದೆ ಎನ್ನಬಹುದು.

ಪ್ರಾಣಿ ಪೂಜೆಗಳಲ್ಲಿ ಅತ್ಯಂತ ಪುರಾತನವಾದುದೆಂದರೆ ನಾಗಾರಾಧನೆ ಎಂಬುವುದನ್ನು ಮಾನವ ಶಾಸ್ತ್ರಜ್ಞರ ಅಭಿಪ್ರಾಯ. ಹಾವು ಅಥವಾ ಸರ್ಪ ಭೂಮಿಯ ಮೇಲಿನ ಮೊದಲು ವಕ್ಕಲು. ಅವುಗಳು ಭೂಮಿಯ ಮೇಲೆ ಕಾಣಿಸಿಕೊಂಡದ್ದು ಸುಮಾರು ೧೮೦ ಮಿಲಿಯನ್ ವರ್ಷಗಳ ಹಿಂದೆ, ಆದರೆ ಭೂಮಿಯ ಮೇಲೆ ಮನುಷ್ಯನ ಅವತಾರವಾದದ್ದು ಕೇವಲ ಆರು ಲಕ್ಷ ವರ್ಷಗಳ ಹಿಂದೆ. ಪುರಾತನ ನಾಗರಿಕತೆಗಳಾದ ಈಜಿಪ್ಟ್ ಗ್ರೀಸ್ ಮತ್ತು ಸಿಂಧೂ ಸಂಸ್ಕೃತಿಗಳಲ್ಲಿ ನಾಗಾರಾಧನೆಯ ಉಲ್ಲೇಖಗಳು ದೊರೆಯುತ್ತವೆ. ಸಾವಿರಾರು ವರ್ಷಗಳಿಂದ ಮನುಷ್ಯನೊಡನೆ ಇದ್ದದ್ದು, ಈಗಲೂ ಇರುವುದು ಕಲ್ಪನೆ. ದೇವರಿಲ್ಲ ಎನ್ನುವವರು–ಕೂಡಾ 'ಅಯ್ಯೋ ದೇವರೇ!' ದೇವರಾಣೆ, ದೇವರೇ ಬಲ್ಲ, ಮುಂತಾದ ಮಾತುಗಳನ್ನು ಅರ್ಥದ ಅರಿವೇ ಇಲ್ಲದೆ ಯಾಂತ್ರಿಕವಾಗಿ ಬಳಸುವುದುಂಟು. ಇದು ಎಲ್ಲ ದೇಶದ ಎಲ್ಲ ಜನರ ಮನಸ್ಸಿನಲ್ಲಿ ಆಳವಾಗಿ ನೆಲೆಸಿರುವ ಈ ದೇವರಿಗೆ ಅಸ್ತಿತ್ವ ಇದ್ದೇ ಇರಬೇಕು ಎನಿಸುವುದು ಆಶ್ಚರ್ಯವೇನಲ್ಲ. ಹೀಗೆ ದೇವರನ್ನು ಕುರಿತ ಸಾಕಷ್ಟು ನಂಬಿಕೆಗಳು ನಮ್ಮ ಸಮಾಜದಲ್ಲಿ ಹುಟ್ಟಿಕೊಂಡಿವೆ. ಇಂದ್ರ, ಅಗ್ನಿ, ವರುಣ, ವಾಯು, ವಾಸ್ತವವಾಗಿ ನಾಮರೂಪಗಳನ್ನು ಪಡೆದ ಪ್ರಕೃತಿ ಶಕ್ತಿಗಳು. ಇವು ಎಲ್ಲ ಕಡೆಗೂ ಇವೆ.

ಪ್ರಪಂಚದ ಎಲ್ಲ ಮಾತುಗಳು ದೇವರನ್ನು ಮನುಷ್ಯರೂಪದಲ್ಲಿ ಕಲ್ಪಿಸಿಕೊಂಡಿವೆ. ತನ್ನ ರೂಪವನ್ನು ಕೊಟ್ಟ ಮಾನವ ದೇವರಿಗೆ ತನ್ನ ಗುಣಗಳನ್ನು ಆರೋಪಿಸಿದ. ಸಾಮಾನ್ಯವಾಗಿ ದೇವರುಗಳ ಚರಿತ್ರೆ ಆನೇಕ ವೇಳೆ ಮಾನವರ ಚರಿತ್ರೆಯನ್ನೇ ಹೋಲುತ್ತದೆ. ದೇವರನ್ನು ಉನ್ನತ ಮಟ್ಟದಿಂದ ಇಳಿಸಿ ಅವನನ್ನು ಮಾನವನ್ನನ್ನಾಗಿ ಮಾಡಿದ್ದೇವೆ. ನಾವು ದೇವರ ಮಟ್ಟಕ್ಕೆ ಏರುವುದು ಕಷ್ಟ; ಆದ್ದರಿಂದ ಅವನನ್ನು ನಮ್ಮ ಮಟ್ಟಕ್ಕೆ ಇಳಿಸಿ ನಾವು ದೊಡ್ಡವರೆಂದು ಭಾವಿಸಿಕೊಂಡಿದ್ದೇವೆ. ಇಂಥ ಸಂತೋಷ ಕ್ಷುಲ್ಲಕವಾದದ್ದು. ಎಲ್ಲ ಬುಡಕಟ್ಟು ಜನಾಂಗಗಳು ಸಾಮಾನ್ಯವಾಗಿ ತಮ್ಮದೇ ಆದ ಒಂದು ಕುಲದೇವತೆಯನ್ನು ಹೊಂದಿರುತ್ತವೆ. ಪಶುಪಾಲನ ಹಂತ, ಅಥವಾ ಕೃಷಿಯ ಹಂತದ ಬುಡಕಟ್ಟುಗಳಾದರೆ ಅವುಗಳ ದೈವ ಸಾಮಾನ್ಯವಾಗಿ ಕೃಷಿಗೆ ಸಹಾಯಕವಾದ ಪ್ರಾಣಿಗಳೇ ಆಗಿರುತ್ತವೆ. ಬುಡಕಟ್ಟು ಸಮುದಾಯದವರು ಪ್ರಾಣಿಗಳಿಗೂ ದೇವಾಲಯದಷ್ಟೇ ಪೂಜನೀಯ ಸ್ಥಾನ ನೀಡುತ್ತಾರೆ. ಅವು ಸತ್ತಾಗ ಅವನ್ನು ಹೂಳಿ ಆ ಸಮಾಧಿಯ ಮೇಲೆ ಮೂರು ಚೂಪಾದ ಕಲ್ಲುಗಳನ್ನು ಇಟ್ಟು ಅವುಗಳನ್ನು ದೇವರುಗಳೆಂದು ಭಾವಿಸಿ ಪೂಜಿಸುತ್ತಿರುತ್ತಾರೆ. ಪುರಾತನವಾದುದಾದರೂ ಇದರ ಅವಶೇಷಗಳು ಇಂದಿಗೂ ಜನಪದರ ಬದುಕಿನಲ್ಲಿ ಕಾಣಬಹುದು. ದೈವಗಳು ಮತ್ತು ಅವುಗಳ ವಸತಿ ಜಾನಪದದ ಒಂದು ಅಂಗವಾಗಿರುವುದರಿಂದ ಅದನ್ನು ಡಾ.ವಿಲ್ಯಂಮಾಡ್ತ ಅವರು ಅವುಗಳನ್ನು ವರ್ಗೀಕರಿಸಿ ಅದರ ಹಿಂದಿರುವ ತಾತ್ವಿಕ ವಿಚಾರ ಧಾರೆಯನ್ನು ವಿಶ್ಲೇಷಿಸಿದ್ದಾರೆ. ದೇವರ ಬಗ್ಗೆ ಸತ್ಯ, ದೇವರ ಮೂಲ, ದೇವತಾರಾಧನೆಯ ಪ್ರಾರಂಭ, ದೇವರ ಅಸ್ತಿತ್ವ ಇಂತಹ ವಿಷಯಗಳನ್ನು ಅಧ್ಯಯನ ಮಾಡುವುದೆಂದರೆ, ಇವುಗಳ ಬಗ್ಗೆ ಧಾರ್ಮಿಕ ತಜ್ಞರನ್ನು, ಧರ್ಮಗ್ರಂಥಗಳನ್ನು ಪ್ರಶ್ನಿಸುವುದು ಹಾಗೂ ಅನುಮಾನಿಸುವುದು ನಿಜವಾಗಿಯೂ ಒಂದು ಸಾಹಸವೇ ಎನ್ನಬೇಕು. ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಲು ಹೊರಟಾಗ ಡಾನಿಕನ್‌ನಿಗೆ ಸಿಕ್ಕಿದ್ದು ಇನ್ನಷ್ಟು ಪ್ರಶ್ನೆಗಳು.

ಪ್ರತಿಯೊಂದು ಜನಾಂಗ, ಧರ್ಮ, ಸಂಸ್ಕೃತಿ ಹಾಗೂ ಅವರು ಕಟ್ಟಿಕೊಂಡಿರುವ ಸೃಷ್ಠಿ ಪುರಾಣಗಳಲ್ಲಿ ದೇವರು ಆಕಾಶದಿಂದ ಬಂದಿಳಿಯುತ್ತಾನೆಂದು ಏಕೆ ಉಲ್ಲೇಖವಿದೆ.? ದೇವರಿಗೂ, ನಕ್ಷತ್ರಗಳಿಗೂ ಬಾಹ್ಯಕಾಶಕ್ಕೂ ಏಕೆ ಅಷ್ಟು ಸಂಬಂಧವಿದೆ.? ಪ್ರಾಚೀನ ಕಾಲದಲ್ಲಿದ್ದ ಮಾನವನಿಗೆ ಖಗೋಳ ವಿಜ್ಞಾನದಲ್ಲಿ ಅಷ್ಟೊಂದು ಪಾಂಡಿತ್ಯ ಹೇಗೆ ಬಂತು.? ಕೇವಲ ಭೂಮಿಯ ಮೇಲಷ್ಟೇ ಬುದ್ಧಿಯುಳ್ಳ ಜೀವಗಳಿವೆ ಎಂದು ಏಕೆ ನಂಬಬೇಕು. ಮನುಷ್ಯನಿಗೆ ಅಸಾಧ್ಯವಾದ ಕೆಲಸವನ್ನು ಕ್ಷಣ ಮಾತ್ರದಲ್ಲಿ ಸಾಧಿಸುವ ವ್ಯಕ್ತಿಗಳು ಯಾರಿರಬಹುದು. ಇಂದು ಬಾಹ್ಯಕಾಶದಲ್ಲಿ ಸಂಚಾರ ಮಾಡುವ, ಅನ್ಯಗ್ರಹಗಳಿಗೆ ಪ್ರಯಾಣ ಬೆಳೆಸುವ ಕ್ಷಮತೆ ಹಾಗೂ ಸಾಧನೆಗಳನ್ನು ನಾವು ನಮ್ಮದಾಗಿಸಿಕೊಂಡಂತೆ

ಪ್ರಾಚೀನ ಕಾಲದಲ್ಲಿ ಅನ್ಯಗ್ರಹ ಜೀವಿಗಳು ಏಕೆ ಭೂಮಿಯ ಮೇಲೆ ಬಂದಿಳಿದಿರಬಾರದು.? ಈ ಎಲ್ಲಾ ಚಿಂತನೆಗಳು ದೇವರ ಸುತ್ತಲೂ ಒಂದು ರಹಸ್ಯಮಯವಾದ ಕತೆಯನ್ನು ಕಟ್ಟಿ, ದೈವಿಕತೆಯನ್ನು ಅಷ್ಟೊಂದು ವಿಸ್ಮಯಕರ ಮಾಡಿರುವುದರ ಹಿಂದಿನ ಉದ್ದೇಶವೇನು.? ಇಂತಹ ಹಲವಾರು ಪ್ರಶ್ನೆಗಳಿಗೆ ಉತ್ತರ ಹಾಗೂ ಹುಡುಕಾಟಗಳು ಡಾನಿಕನ್‌ನನ್ನು ಪ್ರಪಂಚದ ಉದ್ದಗಲಕ್ಕೆ ಕರೆದೊಯ್ಯಿತು.

ಒಂದು ಸ್ಥಳದಲ್ಲಿರುವ ಕಟ್ಟಡದ ಇತಿಹಾಸ, ಶಾಸನಗಳಲ್ಲೂ ಅಡಗಿರುವ ರಹಸ್ಯವಾಗಲಿ, ಆ ಪ್ರಾಂತ್ಯದ ಧಾರ್ಮಿಕ ಗ್ರಂಥಗಳಲ್ಲಿರುವ ಗುಟ್ಟು, ಪುರಾಣಗಳ ಸಾರವನ್ನು ತಿಳಿಯಲಿಕ್ಕೆ ಪುರಾತನ ಭಾಷೆಗಳನ್ನು ಅಗತ್ಯವಾಗಿ ಅಧ್ಯಯನ ಮಾಡಲೇಬೇಕು. ಶತಮಾನಗಳು ಉರುಳಿದಂತೆ ಅಲ್ಲಿನ ಇತಿಹಾಸ ಪುರಾಣ ಶಾಸನಗಳಲ್ಲಿ ಆದ ಬದಲಾವಣೆ ಗುರುತಿಸಬೇಕು. ಅಷ್ಟೇ ಅಲ್ಲ, ಪ್ರಕೃತಿ ವಿಕೋಪದಿಂದಾಗಲಿ, ಯುದ್ಧದಿಂದಾಗಲಿ, ನಾಶವಾದ ಸುಳುಹುಗಳನ್ನು, ಸಾಕ್ಷ್ಯಧಾರಗಳನ್ನು ಹುಡುಕುವುದು ಅಷ್ಟು ಸುಲಭದ ಕೆಲಸವಲ್ಲ, ಅವುಗಳನ್ನು ಎಲ್ಲಾ ರೀತಿಯಿಂದ ಅರ್ಥೈಸಿಕೊಳ್ಳಲು ವಿಜ್ಞಾನ, ಇತಿಹಾಸ, ಭಾಷೆ, ಪುರಾಣ, ಖಗೋಳವಿಜ್ಞಾನ, ಪುರತತ್ವಶಾಸ್ತ್ರ, ಇವುಗಳ ಬಗ್ಗೆ ಆಸಕ್ತಿ ಹಾಗೂ ಆಳವಾದ ಜ್ಞಾನವೂ ಬೇಕು. ನಮ್ಮ ಅರಿವಿನ ಮತ್ತು ಅಸ್ತಿತ್ವದ ಮೂಲ ಗುಟ್ಟನ್ನು ಎರಿಕ್‌ವೊನ್ ಡಾನಿಕನ್ ರೀತಿಯಲ್ಲಿ ಹುಡುಕಲು ದೈವಗಳ ಬಗೆಗಿನ ತಾತ್ವಿಕ ವಿವೇಚನೆಯನ್ನು ಬೆಳೆಸಿಕೊಳ್ಳಬೇಕಿದೆ.

ಈಜಿಪ್ಟ್, ಮೆಕ್ಸಿಕೋ, ಇರಾಕ್ ಸೇರಿದಂತೆ ಭಾರತ ದೇಶದ ಸಂಸ್ಕೃತಿ, ಪ್ರಾಂತ್ಯ, ಇವೆಲ್ಲಾ ಭಿನ್ನವಾದರೂ ಇವುಗಳಲ್ಲಿ ಕಂಡುಬರುವ ಕೆಲವು ವಿಶೇಷ ಸಮಾನತೆಗಳು ಕುತೂಹಲಕರವಾಗಿವೆ. ಆಯಾ ಕಟ್ಟಡಗಳು ಆಯಾ ದೇಶದ ದೇವತೆಗಳಿಗೆ ಸಂಬಂಧ ಹೊಂದಿವೆ. ಈಜಿಪ್ಟ್ ಹಾಗೂ ಮಾಯ ಸಂಸ್ಕೃತಿಗಳಲ್ಲಿ ಪಿರಮಿಡ್ ಸಮಾಧಿಗಳಾಗಿದ್ದವು. ಈ ಸಮಾಧಿಗಳಲ್ಲಿ ಮೃತ ದೇಹಗಳನ್ನು ಸಂರಕ್ಷಿಸಿ ಇಡುವ ಸ್ಥಳಗಳಾಗಿದ್ದು, ಒಂದು ದಿನ ದೇವತೆಗಳು ಬಂದು ಮೃತದೇಹಗಳಲ್ಲಿ ಮತ್ತೇ ಪ್ರಾಣವನ್ನು ತುಂಬುತ್ತಾರೆಂದು ಆ ಜನ ನಂಬಿದ್ದರು. ಎಲ್ಲಾ ಸಂಸ್ಕೃತಿಗಳಲ್ಲಿ ಭಗವಂತನು ಆಕಾಶದಿಂದಲೇ ಬಂದವನೆಂದು ಹೇಳಲಾಗುತ್ತದೆ. ಈಗಾಗಲೇ ಈ ಬ್ರಹ್ಮಾಂಡದಲ್ಲಿ ನಮ್ಮ ಭೂಮಿಯಂತೆಯೇ ಇನ್ನು ಬಹಳಷ್ಟು ಗ್ರಹಗಳು ಇರುವ ಸಾಧ್ಯತೆಯನ್ನು ಅರಿತಿದ್ದೇವೆ. ಅಷ್ಟೇ ಅಲ್ಲದೆ ಪ್ರತಿಯೊಂದು ಸೌರಮಂಡಲವು ಒಂದೇ ಸಮಯಕ್ಕೆ ಉತ್ಪತ್ತಿಯಾಗಿರುವುದಿಲ್ಲವೆಂದೂ ಅರಿತಿದ್ದೇವೆ. ಕಲ್ಲಿನಿಂದ ಬೆಂಕಿಯನ್ನು ಹತ್ತಿಸುವುದನ್ನು ಕಲಿತ ಗ್ರಹ ದೇವರೆಂದು ತಿಳಿದ. ಒರಟಾದ ಕಲ್ಲಿನಿಂದ ಉಪಕರಣಗಳನ್ನು ಸೃಷ್ಟಿ ಮಾಡುವುದನ್ನು ಅರಿತುಕೊಂಡ ಈ ಎಲ್ಲ ಅಂಶಗಳಿಂದ ದೈವಗಳ ಬಗೆಗಿನ ತಾತ್ವಿಕ ವಿವೇಚನೆಯನ್ನು ಶೋಧಿಸುವ ಅಗತ್ಯವಿದೆ.

### ಅಡಿ ಟಿಪ್ಪಣಿ

೧. ಮೂರ್ತಿರಾವ್.ಎ.ಎನ್.,ದೇವರು,ಪುಟ,೨೨ ಪ್ರಕಾಶಕರು ಡಿ.ವಿ.ಕೆ.ಮೂರ್ತಿ ಮೈಸೂರು ೧೯೯೪.

೨. ಬೋರಲಿಂಗಯ್ಯ ಹಿ.ಚಿ , ಬುಡಕಟ್ಟು ದೈವಾರಾಧನೆ, ೨೦೦೦, ಪುಟ ೧.

೩. ತಿಪ್ಪೇಸ್ವಾಮಿ ಜಿ.ಆರ್.ಕೋಲಾರಮ್ಮ, ಪುಟ,೧

೪. ಗುರುಪ್ರಸಾದ್.ಸಿ.ಟಿ. ಏಳೂರಿನ ಗ್ರಾಮ ದೇವತೆಗಳ ಜಾತ್ರೆಗಳು ಪುಟ.೩೨

೫. ನಿಂಗಣ್ಣ ಟಿ.ಸಿ, ಜಾಗತೀಕರಣ ಮತ್ತು ಜಾತ್ರೆಗಳು ಪುಟ ೯.

೬. ಅದೇ ಪುಟ.

೭. ವಕ್ತೃ ದಿ.ಗೌಡ ಕೆಂಜೆಡಿಯಪ್ಪ ವರ್ಷ ೮೧ (ಜಾತಿ) ಕಾಡುಗೊಲ್ಲ ಬೊಮ್ಮನಗೌಡ ಕ್ಯಾತಗೊಂಡನಹಳ್ಳಿ ಚಳ್ಳಕೆರೆ ತಾಲ್ಲೂಕು.

೮. ಮೀರಾಸಾಬಿಹಳ್ಳಿ ಶಿವಣ್ಣ ಪಿ.ಬಿ. ಕ್ಯಾತೆಲಿಂಗನ ಕಳ್ಳೆ ಮುಳ್ಳಿನ ಪರಿಷೆ ಲೇಖನ.

೯. ನಾರಾಯಣ ಕೆ.ವಿ, (ಸಂ) ಭಾಷೆ, ಪುಟ ೧೨೪.

೧೦. ಪಂಡಿತ ಕವಲಿ, ಕಸ್ತೂರಿ ಪದಕೋಶ ಪುಟ ೨೪೭.

೧೧. ನಾರಾಯಣ ಪಿ.ವಿ–ಚಂಪೂ ನುಡಿಗನ್ನಡಿ ಪುಟ ೩೩೫.

೧೨. ವೆಂಕಟೇಶ ಇಂದ್ವಾಡಿ ಎಂ.ಎನ್.ಧರ್ಮ,ಪುಟ ೨೦೩.

೧೩. ಕೃಷ್ಣಮೂರ್ತಿ ಹನೂರು .ಜನಪದ ವೀರ.ಗೀತೆಗಳು ಪುಟ ೨೪೩.

೧೪. ರಂಗಾರೆಡ್ಡಿ ಕೋಡಿರಾಂಪುರ, ಜನಪದ ಸಂಸ್ಕೃತಿ, ಪುಟ. ೭೩

೧೫. ಶಂಕರ ನಾರಾಯಣ ತೀ.ನಂ, ಕಾಡುಗೊಲ್ಲರ ಸಂಪ್ರದಾಯ ಮತ್ತು ಆಚರಣೆಗಳು ಪುಟ–೧೫೩.

೧೬. ವೆಂಕಟೇಶ ಇಂದ್ವಾಡಿ ಎಂ.ಎನ್ , ಧರ್ಮ ಪುಟ ೨೦೩(ಪವಾಡ).

೧೭. ಸತೀಶ್ ಎಚ್.೨೦೦೧, ನಾಯಕನಹಟ್ಟಿ ತಿಪ್ಪೇಸ್ವಾಮಿ ಸಾಂಸ್ಕೃತಿಕ ಅಧ್ಯಯನ ಪುಟ,೨

೧೮. ಶಿವರಾಮ ಕಾರಂತ.ಕೆ, ಬಾಳ್ವೆಯ ಬೆಳಕು ಪುಟ ೭೩

೧೯. ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಪುಟ. ೯೬

೨೦.ಕೃಷ್ಣ ಜಂಬೂರ್, ಎರಿಕ್ ವೋನ್ ಡಾನಿಕನ್.ಪುಟ ೧೦ರಿಂದ೧೩

೨೧.ಅದೇ ಪುಟ

೨೨.ಅದೇ ಪುಟ

******

# ಅಧ್ಯಾಯ : ಮೂರು

# ಕರ್ನಾಟಕದಲ್ಲಿ ಕ್ಯಾತಪ್ಪ ದೈವದ ಸಂವೇದನಾಶೀಲ ಆರಾಧನಾ ನೆಲೆಗಳು

೩.೧. ಜನಪದರ ಸ್ಥಳೀಯ ಸ್ಥಾಪಿತ ಹಟ್ಟಿಗಳ ಅನುಭವದ ಆರಾಧನೆಯ ಸಾಂಸ್ಕೃತಿಕ ಸ್ಥಳಗಳು

೩.೧.೧. ಕ್ಯಾತೇದೇವರ ಹಟ್ಟಿ

೩.೧.೨. ಎತ್ತಪ್ಪನಹಟ್ಟಿ

೩.೧.೩. ಗುಬ್ಬಿಹಟ್ಟಿ

೩.೧.೪. ಲಕ್ಕೇನಹಳ್ಳಿ ಗೊಲ್ಲರಹಟ್ಟಿ

೩.೧.೫. ದೇವರಹಟ್ಟಿ

೩.೧.೬. ಪುರದಹಟ್ಟಿ

೩.೧.೭. ತುಪ್ಪದ ಕೋಣದ ಗೊಲ್ಲರಹಟ್ಟಿ

೩.೧.೮. ಜಡೆಗೊಂಡ ಯಾನೆ ಕ್ಯಾತಪ್ಪ (ಕುಂಬಾರಹಳ್ಳಿ ಅಜ್ಜಪ್ಪ)

೩.೧.೯. ಸೋಮೇನಹಳ್ಳಿ ಗೊಲ್ಲರಹಟ್ಟಿ

೩.೧.೧೦. ಬೆಸ್ತರಹಳ್ಳಿ

೩.೧.೧೧. ಬೊಮ್ಮಗಟ್ಟ ಗೊಲ್ಲರಹಟ್ಟಿ

## ಅಧ್ಯಾಯ ೩

# ಕರ್ನಾಟಕದಲ್ಲಿ ಕ್ಯಾತಪ್ಪ ದೈವದ ಸಂವೇದನಾಶೀಲ ಆರಾಧನಾ ನೆಲೆಗಳು

ಬುಡಕಟ್ಟು ಸಮುದಾಯದಲ್ಲಿ ದೈವಗಳಿಗೆ ಸಂಬಂಧಿಸಿದ ಆರಾಧನೆಗಳು ಬಹು ವೈಶಿಷ್ಟತೆಯಿಂದ ಕೂಡಿರುತ್ತವೆ. ತಮ್ಮ ದೇವರುಗಳಿಗೆ ಹಾಲುಮೀಸಲು ಕರೆಯುವ ಪದ್ಧತಿ, ಹುರುಳಿ-ನವಣೆ ಬತಗಳು ಇಂದಿಗೂ ಕಟ್ಟು ನಿಟ್ಟಾದ ಆಚರಣೆಗಳಾಗಿವೆ. ದೇವರುಗಳಿಗೆ ಮಾಡಿಸುವ ಹೊಳೆಪೂಜೆ, ಎಲೆಪೂಜೆ, ಆವಿ(ಹಸು)ನ ಗೂಡು,ಕರುವಿನ ಗೂಡಿನಪೂಜೆ, ಹುತ್ತದಪೂಜೆ, ಹಬ್ಬ ಆಚರಣೆಗಳು ಮತ್ತು ಜಾತ್ರೆ ಕೂಡ ವಿಶೇಷತೆಯಿಂದ ಕೂಡಿದ್ದು ಅವುಗಳು ಮುಂದುವರೆದುಕೊಂಡು ಬಂದಿರುವುದು ಅಚ್ಚರಿಯೇ ಸರಿ. "ಬುಡಕಟ್ಟು ಸಂಸ್ಕೃತಿಯ ಸಾಂಸ್ಕೃತಿಕ ವೀರರು ಅಥವಾ ಆರಾಧ್ಯ ದೈವಗಳ ನೆಲೆಗಳು ಸಾಮಾನ್ಯವಾಗಿ ಅವರು ಹುಟ್ಟಿ ಬೆಳೆದ, ಬದುಕಿ ಬಾಳಿದ ಮತ್ತು ಪಶುಪಾಲನೆಗಾಗಿ ಹೋರಾಡಿ ಮಡಿದ ಸ್ಥಳಗಳೋ, ದನಕರುಗಳನ್ನು ಮೇಯಿಸಿದ ಕಾವಲುಗಳೋ ಅಥವಾ ಅವರ ಸಮಾಧಿ ಸ್ಥಳಗಳೋ ಆಗಿದ್ದು ಇತಿಹಾಸದ ಹಿನ್ನೆಲೆಯನ್ನು ಹೊಂದಿರುತ್ತವೆ."[೧] ಈ ಆರಾಧನಾ ನೆಲೆಗಳು ಭೌಗೋಳಿಕವಾಗಿ ನದಿ, ಬೆಟ್ಟ, ಗುಡ್ಡ, ಹುಲ್ಲುಗಾವಲಿನ ಪರಿಸರದಲ್ಲಿ ನಿರ್ಮಾಣವಾಗಿರುತ್ತವೆ. ಒಂದು ಸ್ಥಳವು ಕ್ಷೇತ್ರವೆಂದು ಕರೆಸಿಕೊಳ್ಳುವಲ್ಲಿ ಅಲ್ಲಿ ನಡೆದ ಚಾರಿತ್ರಿಕ, ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಘಟನೆಗಳ ಪ್ರಭಾವವೂ ಪ್ರಮುಖವಾಗಿರುತ್ತದೆ. ಭೌಗೋಳಿಕವಾಗಿ ಈ ಕ್ಷೇತ್ರಗಳು ಪ್ರಶಾಂತವಾಗಿಯೇ ಇರುತ್ತವೆ.

ಆಂಧ್ರದ ಬೆಸ್ತರಹಳ್ಳಿಯ ಬೊಮ್ಮದೇವರ ತೋಪು, ಕರ್ನಾಟಕದ ಪುರ್ಲೆಹಳ್ಳಿ ಬಳಿ ಕ್ಯಾತಪ್ಪನ ವಸತಿ ದಿಬ್ಬದಹಟ್ಟಿ, ಚಾಮರಾಜನಗರದ ಬಿಳಿಗಿರಿ ರಂಗನಾಥನ ಬೆಟ್ಟದ ದಟ್ಟವಾದ ಕಾಡಿನ ಮಧ್ಯೆ ಇರುವ ಕೆ.ಗುಡಿ ಸೋಲಿಗರ ಕ್ಯಾತಪ್ಪನಗುಡಿ. ತುಮಕೂರು ಜಿಲ್ಲೆ ತುಪ್ಪದಕೋಣದ ಗೊಲ್ಲರಹಟ್ಟಿಯ ಹೊರ ಭಾಗದಲ್ಲಿರುವ ಜಡೆಗೊಂಡ ಯಾನೆ ಕ್ಯಾತಪ್ಪನ ಸಮಾಧಿ, ಪರಶುರಾಮಪುರದ ಈರ ಕರಿಯಣ್ಣನ ನೆಲೆ, ಸಿರಿಯಣ್ಣನ ನೆಲೆ, ಕಳುವೂರಹಳ್ಳಿ ಹೊರ ಭಾಗದಲ್ಲಿರುವ ಜುಂಜಪ್ಪನ ಗುಡಿ, ಚೆನ್ನಮ್ಮನ ಗುಡಿ, ಚಿತ್ರದುರ್ಗ ಜಿಲ್ಲೆ ಯರಬಳ್ಳಿ ಗೊಲ್ಲರಹಟ್ಟಿ ಹೊರ ಭಾಗದಲ್ಲಿರುವ ಹಾಲುಗುಡದಪ್ಪನ ಗುಡಿ, ಬಳ್ಳಾರಿ ಜಿಲ್ಲೆಯಲ್ಲಿರುವ ಜರ್ಮಲಿ, ಬೊಮ್ಮಗಟ್ಟ, ಮರಿಯಮ್ಮನಹಳ್ಳಿ, ಆಲೂರು, ಸೂರಗೊಂಡನಹಳ್ಳಿ, ಗೋವಿಂದಗಿರಿ, ಕ್ಯಾಸನಕೆರೆ, ಗುಂಡಮಣಗು, ಶಿವಾಪುರ ಮುಂತಾದ ಸ್ಥಳಗಳು ಪ್ರಶಾಂತವಾಗಿವೆ. ಹೀಗಾಗಿ ಉತ್ತಮವಾದ ಭೌಗೋಳಿಕ ವಾತಾವರಣ ಜನರ ಮನಸ್ಸಿಗೆ ನೆಮ್ಮದಿ ಕೊಡಬಲ್ಲದು. ಆದ್ದರಿಂದ ಇಂಥ ಪರಿಸರಕ್ಕೆ ಸಾಂಸ್ಕೃತಿಕ ನಾಯಕರ ಪ್ರಭಾವೂ ಸೇರಿ ಮಾನಸಿಕ ನೆಮ್ಮದಿಯೂ ದೊರೆಯುತ್ತದೆ. ಈ ಕ್ಷೇತ್ರಗಳ ಕತೆ, ಪುರಾಣ, ಪ್ರತೀತಿ, ಆಧ್ಯಾತ್ಮಿಕ ನಂಬಿಕೆಗಳಿಂದ ಜನಮನ್ನಣೆ ಪಡೆದಿರುವುದುಂಟು .ಇಲ್ಲಿ ನಡೆಯುವ ಸಂಪ್ರದಾಯ ಆಚರಣೆಗಳು ಸಾಂಸ್ಕೃತಿಕ ನಾಯಕರ ಮೆರಗನ್ನು ಮತ್ತಷ್ಟು ಹೆಚ್ಚಿಸುತ್ತವೆ. ಈ ಕ್ಷೇತ್ರಗಳು ದೇವಾಲಯ, ಸಮಾಧಿ, ಗದ್ದುಗೆ ರೂಪದಲ್ಲಿರುತ್ತವೆ.

ಸಾಂಸ್ಕೃತಿಕ ಪರಂಪರೆ ಪಡೆದ ನಾಯಕರು ಅಥವಾ ದೈವಗಳ ಸೃಷ್ಟಿಯೂ ಮತ್ತು ಆಯಾ ಪ್ರಾದೇಶಿಕ ಕ್ಷೇತ್ರಗಳು ಜನಮನ್ನಣೆ ಪಡೆದರೂ ಚಾರಿತ್ರಿಕ ಮಹತ್ವ ಕಳೆದುಕೊಂಡಿವೆ ಎಂಬುವುದಕ್ಕೆ ಕ್ಯಾತಪ್ಪ ದೈವವೇ ಒಂದು ನಿದರ್ಶನ. ಕ್ಯಾತಪ್ಪ ಕೇವಲ ಜನಪದ ಕತೆ ಕಾವ್ಯಗಳಲ್ಲಿ ಹಾಗೂ ತಮ್ಮದೇ ಆದ ರೀತಿಯಲ್ಲಿ ಕಟ್ಟಿಕೊಂಡ ಸೃಷ್ಟಿ ಪುರಾಣಗಳಲ್ಲಿಯೇ ವಿಜೃಂಭಿಸುತ್ತಾನೆಯೇ ಹೊರತು ಯಾವುದೇ ಚಾರಿತ್ರಿಕ ಮಹತ್ವ ಪಡೆದಿಲ್ಲ. ಶಿಷ್ಟ ಇತಿಹಾಸಕ್ಕೆ ಮೌಖಿಕ ಕಾವ್ಯಗಳ ಪ್ರಾಮುಖ್ಯತೆ ಇಲ್ಲದಿರುವುದು ವಿಪರ್ಯಾಸದ ಸಂಗತಿ. ನಮ್ಮ ಪೂರ್ವಿಕರ ಆರಾಧನಾ ಸಂಸ್ಕೃತಿಯ ವಿಶೇಷ ಗುಣವೆಂದರೆ ಸತ್ತ ವ್ಯಕ್ತಿಗಳನ್ನು ಮನುಷ್ಯ ಮಾತ್ರದವರೆಂದು ಭಾವಿಸದೇ ಅವರನ್ನು ದೈವಾಂಶ ಸಂಭೂತರೆಂದೇ ಪರಿಗಣಿಸುವುದಾಗಿದೆ. ಈ ರೀತಿಯ ಆರಾಧನಾ ಸಂಪ್ರದಾಯ ಕರ್ನಾಟಕದ ಎಲ್ಲೆಡೆಯೂ ಕಂಡುಬರುತ್ತದೆ. ಕಾಡುಗೊಲ್ಲ ಬುಡಕಟ್ಟುಗಳಲ್ಲಿ ತಮ್ಮ ಸಮುದಾಯದ ಒಳತಿಗಾಗಿ ಹೋರಾಡಿದ, ಪಶುಗಳ ರಕ್ಷಣೆ, ಸ್ತ್ರೀಯರ ರಕ್ಷಣೆ, ದೈವಗಳು ಹಾಗೂ ಹುಲ್ಲು ಗಾವಲುಗಳ ರಕ್ಷಣೆಗಾಗಿ ಹೋರಾಡಿ ಸಾಹಸ ಮೆರೆದು ತಮ್ಮ ಜೀವನವನ್ನೇ ತ್ಯಾಗಮಾಡಿದ ಯಾವುದೇ ರೀತಿಯ ಹಂಗಿಗೂ ಒಳಗಾಗದೆ ಸಮಾಜದ ಮೌಲ್ಯಗಳನ್ನು ಎತ್ತಿಹಿಡಿದ ಪಶುಪಾಲಕರು ಇದ್ದಾರೆ. ಸ್ವಾರ್ಥ ಹಾಗೂ ಕ್ಷುಲ್ಲಕ ಕಾರಣಕ್ಕಾಗಿ ಹೋರಾಡಿ ಮಡಿದವರೂ ಇದ್ದಾರೆ.

ಉದಾಹರಣೆಗೆ ಜುಂಜಪ್ಪ, ಎತ್ತಪ್ಪ, ಕರಿಯಣ್ಣ, ಕ್ಯಾತಪ್ಪ, ಸಿರಿಯಣ್ಣ, ಯರ್ರಪ್ಪ, ನಿಂಗಣ್ಣ ಮುಂತಾದ ಈರಗಾರರು ತಮ್ಮ ನಡಾವಳಿಗಳ ಮೂಲಕ ದೈವಗಳಾಗಿ ಪೂಜೆಗೊಳ್ಳುತ್ತಿದ್ದಾರೆ. ಈ ಎಲ್ಲಾ ಈರಗಾರರನ್ನು ಆಯಾ ಬೆಡಗುಗಳಿಗೆ ಸಂಬಂಧಿಸಿದ ಕಾಡುಗೊಲ್ಲರು ತಮ್ಮ ಬೆಡಗಿನ ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಅವರ ನಿಲ್ಲಿಸಿದ ಕಲ್ಲುಗಳು, ಪೌಳಿಗಳು, ಗುಬ್ಬಗಳು, ಗುಡಿಗಳು ಹಾಗೂ ದೇವಾಲಯಗಳನ್ನು ಕಟ್ಟಿ ಆರಾಧಿಸುತ್ತಿರುವುದನ್ನು ಚಿತ್ರದುರ್ಗ, ತುಮಕೂರು, ಬಳ್ಳಾರಿ, ದಾವಣಗೆರೆ, ಹಾಸನ, ಹಾಗೂ ಆಂಧ್ರಪ್ರದೇಶದ ಅನಂತಪುರ, ಕಲ್ಯಾಣದುರ್ಗ ಹಾಗೂ ರಾಯದುರ್ಗದ ಕೆಲ ಗಡಿಭಾಗಗಳಲ್ಲಿ ಈಗಲೂ ಕಾಣಬಹುದು.

ಕ್ಯಾತಪ್ಪನ ಆರಾಧನಾ ಸಂಪ್ರದಾಯದ ಪೂರ್ಣ ಚಿತ್ರಣವನ್ನು ಬೆಳಕಿಗೆ ತಂದು ವಿಶಿಷ್ಟ ಅಧ್ಯಯನಕ್ಕೆ ಅಗತ್ಯ ಮಾಹಿತಿ ಸಂಗ್ರಹಿಸುವ ದೃಷ್ಟಿಯಿಂದ ಕರ್ನಾಟಕದ ಕ್ಯಾತಪ್ಪನ ನೆಲೆಗಳ ವಿವರಣೆಯ ಜೊತೆಗೆ ಆಂಧ್ರದ ಗಡಿ ಭಾಗದಲ್ಲಿರುವ ಕೆಲ ನೆಲೆಗಳನ್ನು ಪರಿಚಯಿಸಿದ್ದೇನೆ. "ಜನಪದರು ಕಟ್ಟುವ ಚರಿತ್ರೆ ಮತ್ತು ಭೌಗೋಳಿಕ ನೆಲೆಗಳು ಯೂರೋಪ್ ಮಾದರಿಗಿಂತ ಭಿನ್ನವಾಗಿವೆ. ಬುಡಕಟ್ಟು ಸಮುದಾಯದವರು ತಮ್ಮ ಸಾಂಸ್ಕೃತಿಕವೀರರ ಚರಿತ್ರೆಯನ್ನು ಕ್ರಮಬದ್ಧವಾಗಿ ಕಟ್ಟುವವರಲ್ಲ, ಒಂದು ನಿರ್ಧಿಷ್ಟ ಕಾಲಗತಿಯಲ್ಲಿ ಅವನ ಅಸ್ಥಿತ್ವವನ್ನು ಗುರುತಿಸಿ ಕೈಬಿಡುವವರೂ ಅಲ್ಲ, ಅವರು ಕಾಲಾತೀತ ಪರಿಕಲ್ಪನೆಯ ಹಿನ್ನೆಲೆಯಲ್ಲಿ ತಮ್ಮ ನಾಯಕರನ್ನು ಅಖಂಡವಾಗಿಸಿಕೊಂಡವರು. ಆದ್ದರಿಂದಲೇ ಕ್ಯಾತಪ್ಪ ಕೈಲಾಸ ಹಾಗೂ ಕಲ್ಯಾಣದಲ್ಲಿಯೂ ಕಾಣಿಸಿಕೊಳ್ಳುತ್ತಾನೆ."[೨] ಭೌಗೋಳಿಕ ಪರಿಸರವೂ ಸಹ ಸಾಂಸ್ಕೃತಿಕ ಉದ್ದೇಶಗಳಿಗೆ ಬದ್ದವಾಗಿರುತ್ತದೆ. ಆದ್ದರಿಂದ ನಾಯಕರು ಇಲ್ಲವೆ ತಮ್ಮ ದೈವಗಳು ನಡೆದ ದಾರಿಗಳಲ್ಲಿ ಒಕ್ಕಲಿನವರು ಹಿಂಬಾಲಿಸುತ್ತಾರೆ. ಈ ಸಾಂಸ್ಕೃತಿಕ ದಾರಿಗಳಿಗೆ ದೇಸಿ ಅರಸರಿಂದ ಹೆಚ್ಚಿನ ತೊಂದರೆಗಳು ಉಂಟಾಗಲಿಲ್ಲ. ಅದರ ಬದಲಿಗೆ ರಾಜಕೀಯ ಮತ್ತು ಆರ್ಥಿಕ ಉದ್ದೇಶಕ್ಕಾಗಿ ಹೊರಗಿನಿಂದ ಬಂದವರು ಸಾಂಸ್ಕೃತಿಕ ದಾರಿಗಳನ್ನು ಮುಚ್ಚಿ ಹಾಕಿದರೆನ್ನಬಹುದು. ಕ್ಯಾತಪ್ಪ ಸಾಂಸ್ಕೃತಿಕ ವ್ಯಕ್ತಿಯಾದರೂ ಇದನ್ನು ಖಚಿತಪಡಿಸುವ ಯಾವ ಶಾಸನಗಳು ಇಲ್ಲ. ಕ್ಯಾತಪ್ಪನನ್ನು ಕುರಿತ ಚರಿತ್ರೆ ಹೆಳವ ಸಮುದಾಯದವರಲ್ಲಿ ದೊರೆಯಬಹುದಾದ ಓಲೆಗರಿ, ಕಾಗದ ಪತ್ರಗಳಲ್ಲಿ ಲಭ್ಯವಾದರೂ ಇಂದು ಭಕ್ತರು ಹಾಡುವ 'ಮೌಖಿಕ ಮಹಾಕಾವ್ಯ'ಕ್ಕಿಂತ ಭಿನ್ನವಾದ ವಿವರಗಳೇನು ಸಿಗುವುದಿಲ್ಲ. ಆದ್ದರಿಂದ ಕ್ಯಾತಪ್ಪನ ಆರಾಧನಾ ಕೇಂದ್ರಗಳ ಪ್ರಮುಖ ನೆಲೆಯನ್ನು ಅರಿಯಲು ನಮಗಿರುವ ಆಕರಗಳೆಂದರೆ, ಜನಪದರು ಹಾಡುವ ಮೌಖಿಕ ಮಹಾಕಾವ್ಯವೇ ಆಗಿದೆ. ಗುಡಿಕಟ್ಟು ಹಾಗೂ ಕಟ್ಟೆಮನೆಗಳ ಪೂಜಾರಿಗಳು ಮತ್ತು ಗೌಡರು ಕ್ಯಾತಪ್ಪನ ಕತೆಯನ್ನು ಕಲ್ಯಾಣ ಪಟ್ಟಣ (ಕಲ್ಯಾಣದುರ್ಗ)ದ ಕತೆ ಎಂದು ಕರೆದುಕೊಂಡಿದ್ದಾರೆ.

ಜನಪದರ ಈ ಭೌಗೋಳಿಕ ಪರಿಕಲ್ಪನೆಯ ಹಿನ್ನೆಲೆಯಲ್ಲೇ ಕ್ಯಾತಪ್ಪನ ಆರಾಧನಾ ನೆಲೆಗಳನ್ನು ಕಾಣುವ ಪ್ರಯತ್ನ ಮಾಡಬಹುದಾಗಿದೆ. ಹೀಗೆ ಚಿತ್ರದುರ್ಗ, ತುಮಕೂರು, ದಾವಣಗೆರೆ ಹಾಗೂ ಚಾಮರಾಜ ನಗರ ಜಿಲ್ಲೆಗಳಲ್ಲಿ ಈಗಾಗಲೇ ಕ್ಷೇತ್ರಕಾರ್ಯ ನಡೆಸುವ ಮೂಲಕ ಕ್ಯಾತಪ್ಪನ ಆರಾಧನಾ ಕೇಂದ್ರಗಳನ್ನು ಗುರುತಿಸಿ ಅವುಗಳ ವಿವರಣೆ ಹಾಗೂ ವಿಶ್ಲೇಷಣೆ ನೀಡಲು ಪ್ರಯತ್ನಿಸಲಾಗಿದೆ.

ಚಿತ್ರದುರ್ಗವು ಒಂದು ಸಾಂಸ್ಕೃತಿಕ ಸೀಮೆ. "ಇಂದಿನ ಭೌಗೋಳಿಕ ಗಡಿಗಳ ಎಲ್ಲೆಯನ್ನು ಮೀರಿದ್ದು ಅದರ ಪ್ರಭಾವದ ವ್ಯಾಪ್ತಿ ಆಗಾಧವಾದುದು."[೩] ಅವಿಭಜಿತ ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಭಾಗದ ಕಾಡುಗೊಲ್ಲ ಬುಡಕಟ್ಟಿನ ಮೂಲ ಕಟ್ಟೆಮನೆಗಳಾದ ಕರಿಯೋಬೇನಹಳ್ಳಿ, ತಾಳವಟ್ಟಿಗಳು ಹಿರಿಯೂರು ತಾಲ್ಲೂಕಿನಲ್ಲಿದ್ದರೆ, ಬೇಚರಕ್ ಆಗಿರುವ ರಾಮನಹಳ್ಳಿ ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಈ ಎರಡೂ ಆ ಬುಡಕಟ್ಟಿನ ಮೂಲ ಕಟ್ಟೆಮನೆಗಳು ಹಾಗೂ ಅವುಗಳಿಂದ ಬೇರ್ಪಟ್ಟು ಬೇರೆ ಬೇರೆ ಸ್ಥಳಗಳಲ್ಲಿ ಮಾಡಿಕೊಂಡಿರುವ ಕಟ್ಟೆಮನೆಗಳು ಇಂದು ಸಾಂಸ್ಕೃತಿಕವಾಗಿ ನಿಷ್ಕ್ರಿಯವಾಗಿವೆ. ಅವು ಕೇವಲ ನಾಮಕಾವಸ್ಥೆಗೆ ಉಳಿದುಕೊಂಡಿವೆ. ಕಾಡುಗೊಲ್ಲರ ಲಿಂಗದ ದೇವರುಗಳ ಮೂಲ ನೆಲೆಗಳು ಚಿತ್ರದುರ್ಗ ಜಿಲ್ಲೆಯಲ್ಲೇ ಇವೆ. ಹಿರಿಯೂರು ತಾಲ್ಲೂಕಿನ ಕೂಡಲಹಳ್ಳಿಯಲ್ಲಿ ಪಾತೇಲಿಂಗ, ಇಕ್ಕನೂರಿನಲ್ಲಿ ಕಾಟಮಲಿಂಗ, ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯಲ್ಲಿ ಕ್ಯಾತೇಲಿಂಗ, ಚಿತ್ರದುರ್ಗ ತಾಲ್ಲೂಕಿನ ಬೇಚರಕ್ ಗ್ರಾಮ ರಾಮನಹಳ್ಳಿಯಲ್ಲಿ ರಾಮಲಿಂಗ, ಹೊಳಲ್ಕೆರೆ ತಾಲ್ಲೂಕಿನ ಚಿತ್ರಹಳ್ಳಿಯಲ್ಲಿ ಚಿತ್ರಲಿಂಗ ದೈವಗಳು ಇವೆ. ಇವುಗಳಲ್ಲಿ ಕಾಟಮಲಿಂಗ, ಪಾತೇಲಿಂಗ, ಚಿತ್ರಲಿಂಗ ದೈವಗಳಿಗೆ ಕುರುಬ ಹಾಗೂ ಮ್ಯಾಸಬೇಡರೂ ಕಾಡುಗೊಲ್ಲರ ದೈವಗಳ ಒಕ್ಕಲಾಗಿ ನಡೆದುಕೊಳ್ಳುತ್ತಾರೆ. ಎಲ್ಲಿ ಹುಲ್ಲು ನೀರು ಇದೆಯೋ ಅದೇ ನಮ್ಮ ಮನಿ–ಮಾರು ಎಂಬ ಇಂಥ ಪಶುಪಾಲಕ ಸಂಸ್ಕೃತಿಯ ಈ ಸಮುದಾಯ ಮೂಲತಃ ಶೈವ ಪರಂಪರೆಗೆ ಸೇರಿದ್ದರೂ ಕೃಷ್ಣ, ನರಸಿಂಹ, ತಿಮ್ಮಪ್ಪ ಮುಂತಾದ ವೈಷ್ಣವ ದೈವಗಳ ಆರಾಧನೆಯನ್ನೂ ಮೈಗೂಡಿಸಿಕೊಂಡು ಆಚರಿಸಿಕೊಂಡು ಬರುತ್ತಿರುವುದು ಆ ಸಮುದಾಯದ ಸಾಂಸ್ಕೃತಿಕ ನೆಲೆಗಳಲ್ಲಿ ಕಂಡುಬರುತ್ತದೆ.

ಮೂಲ ವೃತ್ತಿಯಾದ ಪಶುಪಾಲನೆಗೋಸ್ಕರ ತಮ್ಮ ಸರ್ವಸ್ವವನ್ನು ತೆತ್ತುಕೊಂಡು ಹುತಾತ್ಮರಾದವರೇ ಜನಾಂಗದ ಸಾಂಸ್ಕೃತಿಕ ವೀರರಾಗಿ, ಕಣ್ಮಣಿಗಳಾಗಿ, ಈರಗಾರರಾಗಿ, ಜನಪದ ವೀರರಾಗಿ ರೂಪುಗೊಂಡ ಕಥನಗಳೇ ಆಯಾ ಬುಡಕಟ್ಟುಗಳು ನಡೆದುಬಂದ ಹಾದಿಯನ್ನು ತಿಳಿಸುವ ಸಾಂಸ್ಕೃತಿಕ ಕಥನಗಳಾಗಿ, ಚರಿತ್ರೆಯಾಗಿ ಮಾರ್ಪಟ್ಟಿವೆ. ಕೆಲವು ವೀರರು ಅಲೆಮಾರಿ ಬುಡಕಟ್ಟುಗಳಿಗೊಂದು ಸಾಂಸ್ಕೃತಿಕ ಸಂವಿಧಾನವನ್ನು ರೂಪಿಸಿ ಅ ಜನಾಂಗದ ಸಾಂಸ್ಕೃತಿಕ ವೀರರರೂ ಆಗಿದ್ದಾರೆ. ಇವರುಗಳೆಲ್ಲಾ ತಮ್ಮ ಪಶುಗಳೊಂದಿಗೆ

ಹುಲ್ಲು ನೀರು ಹುಡುಕುತ್ತಾ ಬೇರೆ ಬೇರೆ ಪಾಳೆಪಟ್ಟಿನ ಪ್ರದೇಶಗಳಿಗೆ ಸಾಗಿದಂತೆಲ್ಲ ಆಯಾ ಪ್ರದೇಶಗಳಲ್ಲಿ ತಮ್ಮದೇ ಆದ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿ ಹೋಗಿದ್ದಾರೆ. ಅವರುಗಳು ಒಂದೊಂದು ಹುಲ್ಲುಗಾವಲುಗಳನ್ನು ಹುಡುಕುತ್ತಾ ಹೋದಂತೆ ಅಲ್ಲಿ ಅನೇಕ ಬಗೆಯ ಸಂಘರ್ಷ, ಕದನಗಳನ್ನು ಎದುರಿಸಿದ್ದಾರೆ. ಬೇಡ ಹೆಣ್ಣುಗಳ ಮೋಹಪಾಶವನ್ನು ಧಿಕ್ಕರಿಸಿ ತಲೆಯೊಡಿಸಿಕೊಂಡು ಸತ್ತವರದ್ದು ಒಂದು ಬಗೆಯಾದರೆ, ಹುಲಿ, ಹಂದಿ, ತೋಳಗಳಂತಹ ಪ್ರಾಣಿಗಳೊಂದಿಗೆ ಹೋರಾಡಿ ಸತ್ತವರ ಕತೆಗಳೇ ಅವರ ಬದುಕಿನ ಸಾಂಸ್ಕೃತಿಕ ಕಥನಗಳಾಗಿ ರೂಪುಗೊಂಡಿವೆ. ಯಜಮಾನ ಸಂಸ್ಕೃತಿಯೊಂದಿಗೆ ಜನಪದ ಸಂಸ್ಕೃತಿ ನಡೆಸಿದ ಮುಖಾ ಮುಖಿಯ ಪ್ರತೀಕದಂತೆ ಕಾಣುವ ಈ ಕಥನಗಳು ಮತ್ತು ದೈವಗಳ ಆರಾಧನಾ ನೆಲೆಗಳು ಅಲ್ಲಿನ ಆಚಾರ-ವಿಚಾರ, ಹಬ್ಬ ಹರಿದಿನಗಳು, ಜಾತ್ರೆ, ಉತ್ಸವಗಳು ಆ ಬುಡಕಟ್ಟುಗಳ ಸಾಂಸ್ಕೃತಿಕ ಕೋಶಗಳೂ ಆಗಿವೆ. ಪಶುಪಾಲನೆಗೆ ಮುಖ್ಯ ನೆಲೆಗಳಾದ ಕೆಲವು ಪ್ರದೇಶಗಳಲ್ಲಿಯೇ ತಮ್ಮ ದೈವಗಳಿಗೆ ಗುಡಿಯನ್ನು ಕಟ್ಟಿ ಅಲ್ಲಿಯೇ ಅವುಗಳ ಆರಾಧನೆ ಮಾಡಿಕೊಂಡು ಪೂಜಿಸುತ್ತಾ ಬಂದಿದ್ದಾರೆ.



**೩.೧ ಜನಪದರ ಅನುಭವದ ಸ್ಥಳೀಯ ಸ್ಥಾಪಿತ ಹಟ್ಟಿಗಳ ಆರಾಧನೆಯ ಸಾಂಸ್ಕೃತಿಕ ಅನನ್ಯತೆ**

"ಇದು ಅಪೂರ್ವ ಜಾನಪದ ಸಂಸ್ಕೃತಿ ಹೊಂದಿರುವ, ಅನನ್ಯ ಕವಿ ಪರಂಪರೆಯ ಕೇಂದ್ರ. ಮೈ ನವಿರೇಳಿಸುವ ಗುಡಿ ಗೋಪುರಗಳು, ಹಚ್ಚ ಹಸುರಿನ ಹೊದಿಕೆಯೊಂದಿಗೆ ಸದಾ ತಂಪು ನೀಡುವ ಬೆಟ್ಟ, ಗುಡ್ಡ, ಬನಗಳಿಂದ ಕೂಡಿದೆ"[೪]. ಹುತ್ತರಿದುರ್ಗ, ಹುಲಿಯೂರುದುರ್ಗ, ಮಧುಗಿರಿ, ನಿಡಗಲ್ಲು, ಸಿದ್ಧಗಂಗಾ, ರಾಮದೇವರಬೆಟ್ಟ ಇವು ಜಿಲ್ಲೆಯ ಭೌಗೋಳಿಕ ವಿನ್ಯಾಸವನ್ನು ಸಾರ್ಥಕವಾಗಿ ಪ್ರತಿನಿಧಿಸುತ್ತವೆ. ಜಾನಪದ ಸಾಹಿತ್ಯ, ಹಾಡು, ಕುಣಿತ, ಉಡುಗೆ-ತೊಡುಗೆಗಳಿಂದ ಬುಡಕಟ್ಟು ಸಂಸ್ಕೃತಿಯ ಆಗರವೂ ಆಗಿದೆ. ಐತಿಹಾಸಿಕವಾಗಿ ಭವ್ಯ ಪರಂಪರೆ ಹೊಂದಿರುವ ತುಮಕೂರು ಸೀಮೆ ಹಲವಾರು ಪುರಾಣ ಪ್ರಸಂಗಗಳು, ಸ್ಥಳಗಳ ಉಲ್ಲೇಖಗಳನ್ನು ಹೊಂದಿದೆ. ಇವೆಲ್ಲವೂ ಜನಪದ ಕತೆಗಳಾಗಿ ಐತಿಹ್ಯಗಳಾಗಿ, ಸ್ಥಳ ಪುರಾಣಗಳಾಗಿ ಪ್ರಸಿದ್ಧವಾಗಿರುವುದಲ್ಲದೆ, ಶೌರ್ಯ, ಪರಾಕ್ರಮ, ತ್ಯಾಗ ಬಲಿದಾನಗಳ ರೋಚಕತೆಯು ಇತಿಹಾಸದಲ್ಲಿ ಹಾಸುಹೊಕ್ಕಾಗಿದೆ.

ಜುಂಜಪ್ಪ, ಕಾಟಮಲಿಂಗ ಪಾತೇಲಿಂಗ, ಚಿತ್ರಲಿಂಗನ ಕಾವ್ಯದೊಳಗೆ ಸಂಕರಗೊಂಡ (ಕೇತಪ್ಪ) ಕ್ಯಾತೇಲಿಂಗನನ್ನು ಕುರಿತ ಪ್ರಸಂಗಗಳು ಬರುತ್ತವೆ. ಸಿರಾ, ಹಿರಿಯೂರು, ಚಳ್ಳಕೆರೆ, ಹೊಸದುರ್ಗ, ಮೊಳಕಾಲ್ಮೂರು, ಗುಬ್ಬಿ, ಬುಕ್ಕಪಟ್ಟಣ, ಭರಮಸಾಗರ, ಹೊಳಲ್ಕೆರೆ, ದಿಂಡದಹಳ್ಳಿ, ಗಾಣದಾಳು ಮುಂತಾದ ಭಾಗಗಳಲ್ಲಿ ಕಾಡುಗೊಲ್ಲ ಸಮುದಾಯದ

ಅಜ್ಜೇರ ಗೊಲ್ಲರು, ಸನ್ನರ ಗೊಲ್ಲರು, ಸೋಮನವರ ಗೊಲ್ಲರು, ಬೊಮ್ಮನವರ ಗೊಲ್ಲರು, ಕೋಣನವರ ಗೊಲ್ಲರು, ಅಬ್ಗಳನವರ ಗೊಲ್ಲರು, ಮರವಾಯಿ ಗೊಲ್ಲ ಬೆಡಗಿನವರುಗಳು ತಮ್ಮ ದೈವವಾದ ಕ್ಯಾತಪ್ಪನ ನೆಲೆಗಳನ್ನು ಗುರುತಿಸಿಕೊಂಡು ಅವುಗಳನ್ನು ಪವಿತ್ರ ಸ್ಥಳಗಳನ್ನಾಗಿ ಮಾಡಿಕೊಂಡಿದ್ದಾರೆ. ಹಬ್ಬ, ಹರಿದಿನ ಹಾಗೂ ಉತ್ಸವಗಳಲ್ಲಿ ಮತ್ತು ಪ್ರತಿವರ್ಷ ದಸರಾ, ದೀಪಾವಳಿ, ಶಿವರಾತ್ರಿ ಮತ್ತು ಯುಗಾದಿ ಸಂದರ್ಭದಲ್ಲಿ ಆ ನೆಲೆಗಳಲ್ಲಿ ವಿಶಿಷ್ಟ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾರೆ.

ಈ ಜಿಲ್ಲೆಯ ಜಾನಪದ ಸಂಸ್ಕೃತಿ ಹಾಗೂ ಕಾಡುಗೊಲ್ಲರ ಸಂಸ್ಕೃತಿಯ ಅಧ್ಯಯನವನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಪರಿಚಯಿಸಿದ ಹಿರಿಮೆ ತೀ.ನಂ ಶಂಕರಣನಾರಾಯಣ, ಕಾಳೆಗೌಡ ನಾಗವರ, ಮೀರಾಸಾಬಿಹಳ್ಳಿ ಶಿವಣ್ಣ ಇವರದು. ಅಲ್ಲದೆ ಜಾನಪದ ಕಲೆ, ಸಾಹಿತ್ಯ ಸಂಗ್ರಹಕ್ಕೆ ಹೊಸದಾರಿ ತೋರಿಸಿದವರು. ಜಿಲ್ಲೆಯ ಬುಡಕಟ್ಟು ಜನರ ಸಂಪ್ರದಾಯ, ಬೇಟೆ, ವಿವಾಹ, ಹುಟ್ಟು-ಸಾವು, ಸಂಸ್ಕಾರಗಳಲ್ಲಿ ತಮ್ಮ ವೈಶಿಷ್ಟತೆಯನ್ನು ಸದಾ ಕಾಪಿಟ್ಟುಕೊಂಡು ಬಂದ ಹಿರಿಮೆ ಇಲ್ಲಿನ ಬುಡಕಟ್ಟು ಸಮುದಾಯಗಳಿಗಿದೆ. ಕಲೆಗೆ ಕೊನೆ ಮೊದಲಿಲ್ಲದ ದುಡಿಯುವ ವರ್ಗದ ಅಪೂರ್ವ ಕಲಾವಿದರು ಇರುವುದು ಈ ನೆಲದ ಪುಣ್ಯ. ಇಲ್ಲಿನ ಜನಪದ ಸಂಸ್ಕೃತಿ ಕಣಜದಂತಿದ್ದು ಬೆಡಗು, ಗುಡಿಕಟ್ಟು, ಕಟ್ಟೆ ಮನೆಗಳ ಬಗೆಗಿನ ಆಚರಣೆಗಳ ಪರಿಕಲ್ಪನೆ, ದೇವರ ಬಗೆಗಿನ ಕಾವ್ಯಗಳು ಆ ಜನಾಂಗದ ಸಾಂಸ್ಕೃತಿಕ ದಾಖಲೆಗಳಾಗಿವೆ. ಆದರೆ ಮೌಖಿಕ ಪರಂಪರೆಯ ಈ ಸಾಹಿತ್ಯವು ಇಂದು ಯುವ ಜನಾಂಗದ ತಾತ್ಸಾರ ಮನೋಭಾವನೆ ಹಾಗೂ ಅವರ ಅನಾಸಕ್ತಿಗಳಿಂದ ಮರೆಯಾಗುತ್ತಿದೆ.

### ೩.೧.೧ ಕ್ಯಾತೇದೇವರ ಹಟ್ಟಿ

ಶಿರಾ ತಾಲ್ಲೂಕಿನಿಂದ ಸುಮಾರು ೩೦.ಕಿಮೀ ದೂರದಲ್ಲಿ ಬುಕ್ಕಪಟ್ಟಣದ ಹತ್ತಿರವಿದೆ. ನಂದಿಹಳ್ಳಿ ಗುಡಿಕಟ್ಟಿಗೆ ಸೇರಿದ ಬೊಮ್ಮನೋರು, ಕೋಣನೋರು, ಸನ್ನೋರು ಮತ್ತು ಅಬ್ಗಳೋರು, ಅಜ್ಜೇರ ಬೆಡಗು ಸೇರಿದಂತೆ ಸುಮಾರು ೫೦ ಕುಟುಂಬಗಳು ಇಲ್ಲಿ ವಾಸವಾಗಿವೆ. ಕಲ್ಲು ಮಣ್ಣಿನಿಂದ ಗುಡಿ ನಿರ್ಮಾಣ ಮಾಡಿಕೊಂಡಿದ್ದಾರೆ. ಆ ಗುಡಿಗಳಲ್ಲಿ ಕೇತೇಲಿಂಗ ಮತ್ತು ಕಾಟಮಲಿಂಗ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪಿಸಿ ಆರಾಧಿಸುತ್ತಿದ್ದಾರೆ. ಇಲ್ಲಿ ವಿಶೇಷವಾಗಿ ಕ್ಯಾತಪ್ಪನಿಗೆ ಹಾಲ್ಕಂಬಿ ಮತ್ತು ಅಲಗುಗಳನ್ನು ಕಟ್ಟಿಸಿ ಆರಾಧಿಸುತ್ತಿದ್ದಾರೆ. “ಹುರುಳಿ ಮತ್ತು ನವಣೆ ವ್ರತದ ಆಚರಣೆಯ ಪದ್ಧತಿ ಇದೆ. ಕ್ಯಾತಪ್ಪದೇವರಿಗೆ ನಡೆದುಕೊಳ್ಳುವ ಅಜ್ಜೇರ ಬೆಡಗಿನ ಭಕ್ತರು ಯಾವತ್ತೂ ಹುರುಳಿ-ನವಣೆಯನ್ನು ಬಳಕೆ ಮಾಡದ ಕಟ್ಟುನಿಟ್ಟಿನ ವ್ರತ ಪರಿಪಾಲನೆ ಮಾಡಿಕೊಂಡು ಬಂದಿದ್ದಾರೆ. ಪೂಜಾರಿಗೆ ವಾಹನ ಪ್ರಯಾಣ ನಿಷಿದ್ಧ. ಹುಟ್ಟುವ ಮಗು ಗಂಡಾದರೆ ಕ್ಯಾತಪ್ಪ, ಹೆಣ್ಣಾದರೆ

ಕ್ಯಾತಮ್ಮ ಹೀಗೆ ಪ್ರತಿ ಮಗುವಿಗೂ ಮೊದಲಿಗೆ ದೇವರ ಹೆಸರನ್ನು ಇಟ್ಟು ನಂತರ ಬೇರೆ ಬೇರೆ ಹೆಸರು ನಾಮಕರಣ ಮಾಡುತ್ತಾರೆ."[೫]



**ಕೇತೆದೇವರ ಹಟ್ಟಿಯ ಕೇತಪ್ಪನ ಪರಿಕರಗಳು**

ಶಿವರಾತ್ರಿ ವೇಳೆಯಲ್ಲಿ ಜರುಗುವ ಕೇತಪ್ಪನ ಜಾತ್ರೆಗೆ ಭೀಮನಬಂಡೆ, ಚನ್ನಗಿರಿ, ಅಬ್ಬೆಗೆರೆ, ತುಮಕೂರು, ತಾವರೆಕೆರೆ ಗೊಲ್ಲಹಳ್ಳಿ, ಹಾಲದ ಭೂತಪ್ಪನಹಳ್ಳಿ, ಆಲೂರು, ವೈನಹಟ್ಟಿ, ರಜ್ಜಂದ್ರ, ಕಳ್ಳರಸಿಕೆರೆ, ತೋವಿನಕೆರೆ, ರಾಮನಹಳ್ಳಿ, ಆನೆಸಿದ್ರಗೊಂದಿ, ಮುಂತಾದ ಭಾಗಗಳಿಂದ ಭಕ್ತರು ಸೇರುತ್ತಾರೆ.

### ೩.೧.೨ ಎತ್ತಪ್ಪನಹಟ್ಟಿ

ಸಿರಾದ ರಾಷ್ಟ್ರೀಯ ಹೆದ್ದಾರಿಯಿಂದ ೧೫.ಕಿಮೀ ದೂರದ ದೊಡ್ಡ ಆಲದ ಮರದ ಹತ್ತಿರ ಈ ಎತ್ತಪ್ಪನಹಟ್ಟಿ ಇದೆ. ಇಲ್ಲಿನ ಪ್ರಮುಖ ಆರಾಧ್ಯ ದೈವ ಎತ್ತಪ್ಪ. ಆದ್ದರಿಂದ ಈ ಊರಿಗೆ ಎತ್ತಪ್ಪನಹಟ್ಟಿ ಎಂಬ ಹೆಸರು ಬಂದಿದೆ. ಹಟ್ಟಿಯ ಹಿನ್ನೆಲೆ- ದನಗಾಯಿಗಳು ಹಿರಿಯೂರು ತಾಲ್ಲೂಕು ವೇಣುಕಲ್ಲು ಗುಡ್ಡದಿಂದ ಎತ್ತಪ್ಪ ದೇವರ ಘಂಟೆ ಮತ್ತು ಧೂಪದಾರತಿಯಂತಹ ಪೂಜಾ ಪರಿಕರಗಳನ್ನು ಹೊತ್ತುಕೊಂಡು ಹೋಗಿ ಅಲ್ಲಿ ದೇವರು ಮಾಡಿಕೊಂಡು ಅಲ್ಲಿಯೇ ವಾಸವಾದರು. ಆ ದೇವರು ಇರುವ ಹಟ್ಟಿಗೆ ಎತ್ತಪ್ಪನಹಟ್ಟಿ ಎಂಬ ಹೆಸರು ಬರಲು ಕಾರಣವಾಗಿದೆ. ಇಲ್ಲಿ ಅಜ್ಜೇರು, ಕರಡೇರು, ಮಾರನೋರು, ಸೋಮನೋರು ಹಾಗೂ ಸನ್ನೋರು ಬೆಡಗು ಸೇರಿದಂತೆ ಸುಮಾರು ೨೫೦ ಕುಟುಂಬಗಳು ನೆಲೆಸಿವೆ. ಎತ್ತಪ್ಪ, ಜುಂಜಪ್ಪ, ಮೂಡಲಗಿರಿ ತಿಮ್ಮಪ್ಪ, ಕೇತಪ್ಪ ಹಾಗೂ ಕಾಟಮಲಿಂಗೇಶ್ವರ, ದಳವಾಯಿ ಮುದ್ದಣ್ಣ ಈ ಸಾಂಸ್ಕೃತಿಕವೀರರ ಹೆಸರಿನಲ್ಲಿ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪನೆ ಮಾಡಿಕೊಂಡು ಲಕ್ಷಕ್ಕೂ ಅಧಿಕ

ವೆಚ್ಚದಲ್ಲಿ ಸುಸಜ್ಜಿತವಾದ ಗುಡಿ-ಗೋಪುರಗಳನ್ನು ನಿರ್ಮಿಸಿಕೊಂಡು ದೇವರುಗಳನ್ನು ಆರಾಧಿಸುತ್ತಿದ್ದಾರೆ.

"ದೀಪಾವಳಿ ಹಾಗೂ ಶಿವರಾತ್ರಿ ವೇಳೆ ಏಳೆಂಟು ದಿನಗಳ ಕಾಲ ಈ ದೈವಗಳ ಆರಾಧನೆ ಮತ್ತು ಜಾತ್ರೆ ಉತ್ಸವಗಳು ಜರುಗುತ್ತವೆ. ಕ್ಯಾತೇಲಿಂಗನಿಗೆ ಯರಬಳ್ಳಿ ಮಾರಕ್ಕ ಅಕ್ಕನಾಗಿದ್ದಾಳೆ ಎಂದು ಜನರು ಆಕೆಯ ಮೆರೆ ಮೂರ್ತಿಯನ್ನು ಪ್ರತಿಷ್ಠಾಪಿಸಿಕೊಂಡು ಪೂಜಿಸುತ್ತಾರೆ. ಹಬ್ಬಕ್ಕೆ ಒಂದು ದಿನ ಮುಂಚೆ ಹಸುವಿನಿಂದ ಹಾಲು ಕರೆದು ಆ ದಿನ ಬೆಳಗ್ಗೆ ಮೊಸರು ಕಡೆದು ಅದರಿಂದ ಬೆಣ್ಣೆ ತೆಗೆದು ತುಪ್ಪ ಮಾಡಿ ದೇವರ ದೀಪ ಹಚ್ಚುವ ಪದ್ದತಿ ಇದೆ. ಹೊಳೆ ಪೂಜೆಗೆ ಮರಿಬಲಿ, ಮೀಸಲು ಹಾಲನ್ನು ಆಲದ ಭೂತನಹಳ್ಳಿಯ ಭಕ್ತರು ತಂದು ಅರ್ಪಿಸುತ್ತಾರೆ. ಅನ್ನ, ಅವರೆ ಕಾಳು ಹಾಗೂ ಮಜ್ಜಿಗೆಯಿಂದ ವಿಶೇಷ ನೈವೇಧ್ಯ ಮಾಡಿ ದೇವರಿಗೆ ಅರ್ಪಿಸಿ ಪೂಜಿಸುತ್ತಾರೆ."[೬] ಕ್ಯಾತಪ್ಪನ ವಕ್ಕಲಿನವರು ಹುರುಳಿ-ನವಣೆ ವ್ರತಾಚರಣೆ ಆಚರಿಸುತ್ತಾರೆ. ಹುರುಳಿ-ನವಣೆಯನ್ನು ತಮ್ಮ ಮನೆಯಲ್ಲಿ ಇಟ್ಟುಕೊಳ್ಳುವಂತಿಲ್ಲ ಈ ಧಾನ್ಯ ಇರುವವರ ಮನೆಗೆ ಹೋದರೆ ಶುದ್ಧಿ ಮಾಡಿಕೊಂಡು ತಮ್ಮ ಮನೆಯೊಳಗೆ ಹೋಗಬೇಕು. ಇಲ್ಲದಿದ್ದರೆ ಮೈಲಿಗೆ ಆಗುತ್ತದೆ ಎಂಬ ಭಯ ಜನರಲ್ಲಿದೆ.

### ೩.೧.೩ ಗುಬ್ಬಿಹಟ್ಟಿ

ಗುಬ್ಬಿ ತಾಲ್ಲೂಕಿನಿಂದ ಸುಮಾರು ೧೦.ಕಿಮೀ ದೂರದಲ್ಲಿದೆ. ಸರ್ಕಾರಿ ದಾಖಲೆಗಳಲ್ಲಿ ಚಿಕ್ಕನೆಟ್ಟಗುಂಟೆ ಎಂಬ ಉಲ್ಲೇಖವಿದೆ. ಇಲ್ಲಿ ಮಾರನೋರು ಮತ್ತು ಅಜ್ಜೇರ ಬೆಡಗಿನ ೭೦ ಕುಟುಂಬಗಳು ವಾಸವಾಗಿವೆ. ಈ ಹಟ್ಟಿಯಲ್ಲಿ ಕ್ಯಾತಪ್ಪ ಮತ್ತು ಚಿತ್ರದೇವರನ್ನು ಪ್ರತಿಷ್ಠಾಪಿಸಿಕೊಂಡು ಆರಾಧಿಸುತ್ತಿದ್ದಾರೆ. ಸೀಮೆಂಟ್ ಶೀಟಿನ ಮನೆಯೊಂದರಲ್ಲಿ ಈ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪಿಸಿಕೊಂಡು ಪೂಜಿಸುತ್ತಾರೆ. ದೇವರ ಹಿನ್ನೆಲೆ- "ಚಿತ್ರದುರ್ಗದಿಂದ ಬಂದಿದ್ದೇನೆ ನನ್ನನ್ನು ತೆಗೆದುಕೊಂಡು ಹೋಗಿ ಪ್ರತಿಷ್ಠಾಪನೆ ಮಾಡಿಕೊಂಡು ಪೂಜಿಸಿ ಎಂದು ದೇವರು ಕನಸಿನಲ್ಲಿ ಹೋಗಿ ಆ ಹಟ್ಟಿಯ ಗೌಡ ಮತ್ತು ಪೂಜಾರಿಗೆ ಹೇಳಿದ್ದಲ್ಲದೆ, ಹುಟ್ಟುವ ಮೊದಲ ಮಕ್ಕಳಿಗೆ ಕ್ಯಾತಪ್ಪ, ಕ್ಯಾತಮ್ಮ ಎಂಬ ಹೆಸರನ್ನು ಇಟ್ಟು ಕರೆಯಿರಿ, ನಾನು ನಿಮಗೆ ಒಳ್ಳೆಯ ಮಾಡುತ್ತೇನೆ ಎಂದು ಹೇಳಿತ್ತಂತೆ. ದೇವರ ಮಾತಿನಂತೆ ಗೌಡ ಹಾಗೂ ಪೂಜಾರಿ ಇಬ್ಬರೂ ನಡೆದು ಕೊಂಡರಂತೆ ಎಂಬ ಪ್ರತೀತಿ ಇದೆ."[೭] ಈ ಹಟ್ಟಿಯಲ್ಲಿ ಪ್ರತಿ ಸೋಮವಾರ ಕ್ಯಾತೇದೇವರಿಗೆ ವಿಶೇಷ ಪೂಜೆ ನೆರವೇರಿಸುತ್ತಾರೆ. ಅಕ್ಕಿ ಅನ್ನವನ್ನು ಹಾಲಿನೊಂದಿಗೆ ಮಿಶ್ರಣ ಮಾಡಿ ಅದರಿಂದ ಉಂಡೆಯ ರೀತಿಯ ನೈವೇದ್ಯ ತಯಾರಿಸಿ ಅದನ್ನು ದೇವರ ಪೆಟ್ಟಿಗೆ ಮುಂದೆ ಇಡುತ್ತಾರೆ. ಆ ಅನ್ನದುಂಡೆಯನ್ನು ದೇವರು ತಿಂದರೆ ಮಾತ್ರ ಆ ದಿನ

ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಇಲ್ಲವಾದಲ್ಲಿ ದೇವರಿಗೆ ಏನೋ ಅಂಟು-ಮುಂಟು ಆಗಿದೆ ಎಂದು ತಿಳಿದು ಆ ದಿನ ಪೂಜೆ ಸಲ್ಲಿಸುವುದಿಲ್ಲ. ಹುರುಳಿ-ನವಣೆಯ ಕಟ್ಟುನಿಟ್ಟಿನ ಆಚರಣೆ ಇದೆ. ಇಲ್ಲಿಯ ಕ್ಯಾತಪ್ಪನ ಒಕ್ಕಲಿನವರು ಹುರುಳಿ-ನವಣೆಯನ್ನು ಸಂಪೂರ್ಣವಾಗಿ ನಿಷೇಧಿಸಿದ್ದಾರೆ. ಹುರುಳಿ ಕಾಳನ್ನು ಬೆಳೆಯುವುದಿಲ್ಲ, ಮುಟ್ಟುವುದೂ ಇಲ್ಲ. ಒಂದು ವೇಳೆ ಮುಟ್ಟಿದರೆ ಗೋ-ಗಂಜಲಿಂದ ಶುದ್ಧಿ ಮಾಡಿಕೊಂಡು ಮನೆಯೊಳಗೆ ಪ್ರವೇಶಿಸಬೇಕು. ಈ ಧಾನ್ಯಗಳನ್ನು ಜೀವನ ಪೂರ್ತಿ ಸ್ವೀಕರಿಸದೆ ಇರುವ ವ್ರತವನ್ನು ಕೈಗೊಂಡಿದ್ದಾರೆ. ಇವರನ್ನು ಪೂರಾ ಬತದವರು ಎಂದು ಕರೆಯುತ್ತಾರೆ. ಈ ದೇವರು ಗುಬ್ಬಿ ಕ್ಯಾತೇದೇವರೆಂದೇ ತುಂಬಾ ಪ್ರಸಿದ್ಧಿ ಪಡೆದುಕೊಂಡಿದೆ.

### ೩.೧.೪ ಲಕ್ಕೇನಹಳ್ಳಿ ಗೊಲ್ಲರಹಟ್ಟಿ

ಗುಬ್ಬಿಯಿಂದ ಸುಮಾರು ೧೫.ಕಿಮೀ ದೂರದಲ್ಲಿದೆ. ಸನ್ನರು ಬೆಡಗಿನ ಗೊಲ್ಲರ ೨೦ ಕುಟುಂಬಗಳು ಇಲ್ಲಿ ವಾಸವಿವೆ. ಶಿವರಾತ್ರಿ ಮತ್ತು ದೀಪಾವಳಿ ಸಂದರ್ಭದಲ್ಲಿ ವಿಶೇಷ ಜಾತ್ರೆ ಜರುಗುತ್ತದೆ. ಈ "ಹಿಂದೆ ದೇವರು ಕೂಸ್ಘಟ್ಟದಲ್ಲಿ ನೆಲೆಸಿತ್ತು, ಅಲ್ಲಿ ರೆಡ್ಡಿಗೊಲ್ಲರು ಪೂಜಿಸುತ್ತಿದ್ದರು. ನಂತರ ದಮ್ಮನಕುಪ್ಪೆಗೆ ಬಂದು ನೆಲೆಸಿತ್ತು. ತದನಂತರ ದೇವರಹಟ್ಟಿಗೆ ಬಂದು ನೆಲೆಯೂರಿದ್ದರಿಂದ ಅಲ್ಲಿ ದೇವಸ್ಥಾನ ನಿರ್ಮಿಸಲಾಯಿತು. ನಂತರ ಇಲ್ಲಿಂದ ಲಕ್ಕೇನಹಳ್ಳಿಗೆ ಹೋಯಿತು. ದೇವರ ಆರಾಧಕರು ವಲಸೆ ಹೋದಂತೆ ದೇವರನ್ನು ತಮ್ಮ ಜೊತೆಯಲ್ಲಿಯೇ ತೆಗೆದುಕೊಂಡು ಹೋದರು. ಆನಂತರ ಈ ದೇವರನ್ನು ಪುರದಹಟ್ಟಿಗೆ ಕೊಂಡೊಯ್ದು ಅಲ್ಲಿ ದೇವಸ್ಥಾನ ನಿರ್ಮಾಣ ಮಾಡಿಕೊಂಡು ದೇವರನ್ನು ಪ್ರತಿಷ್ಠಾಪಿಸಿಕೊಂಡು ಆರಾಧಿಸತೊಡಗಿದರು."[೮] ಸೋಮವಾರ ಮಾತ್ರ ಹಿಪ್ಪೆ ಎಣ್ಣೆ ಇಲ್ಲವೆ ಅರಳೆಣ್ಣೆ ದೀಪ ಹಚ್ಚಿ ಒಂದೊತ್ತೀಲಿ ಈ ದೇವರಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಶಿವರಾತ್ರಿಯ ಸಂದರ್ಭದಲ್ಲಿ ಎರಡು ದಿನ ಹಬ್ಬದ ಆಚರಣೆ ಮಾಡುತ್ತಾರೆ.

### ೩.೧.೫.ದೇವರಹಟ್ಟಿ

ಗುಬ್ಬಿ ತಾಲ್ಲೂಕಿನಿಂದ ೧೫.ಕಿಮೀ ದೂರವಿದೆ. ಮಾರನೋರು, ಕಂಬೇರು ಹಾಗೂ ಅಜ್ಜೇರ ಗೊಲ್ಲರ ಬೆಡಗಿನವರು ಸೇರಿದಂತೆ ಇಲ್ಲಿ ೫೦ ಕುಟುಂಬಗಳು ವಾಸವಾಗಿವೆ. ಮಧುಗಿರಿ ಮತ್ತು ಶಿರಾ ಈ ತಾಲ್ಲೂಕುಗಳ ಮಧ್ಯೆ ಇರುವ ಸಿದ್ದರಬೆಟ್ಟ-ಶಿವಗಂಗೆ ಬಳಿ ಕೂಸ್ಘಟ್ಟದ ಹತ್ತಿರದ ಸಿದ್ದಾಪುರದಲ್ಲಿ ವಕ್ಕಲಿಗರ ಮನೆಯಲ್ಲಿ ಕ್ಯಾತೇದೇವರು ನೆಲೆಸಿತ್ತು. ಅವರು ದಿನಾಲು ಪೂಜೆ ಪುರಸ್ಕಾರ ಮಾಡುತ್ತಿದ್ದು, ನಂತರದ ದಿನಗಳಲ್ಲಿ ತಿರಸ್ಕಾರ ಮಾಡಿದರು. ಅನಂತರ ಮ್ಯಾಸಬೇಡರು ದೇವರನ್ನು ಆರಾಧಿಸತೊಡಗಿದರು. ಕೆಲ ದಿನಗಳ ನಂತರ ಅವರು ಸಹ ಪೂಜೆಕಾರ್ಯ ನಿರ್ಲಕ್ಷ್ಯ ಮಾಡಿದ್ದರಿಂದ

ಹಾಡುತ್ತಾ, ಕುಣಿಯುತ್ತಾ ಜಾಡಿ ಮೇಲೆ ಹಾಕಿದ ಹಣ್ಣುಗಳನ್ನು ತಿನ್ನುವ ಪದ್ಧತಿ ಇದೆ. ಕಾಟಮಲಿಂಗ ಮತ್ತು ಕ್ಯಾತೇಲಿಂಗ ಎರಡೂ ದೈವಗಳಿಗೂ ಅಲಗು ಕಟ್ಟಿಸಿಕೊಂಡು ಆರಾಧಿಸ ತೊಡಗಿದ್ದಾರೆ. ಮಣ್ಣಮ್ಮ ದೇವಿಯನ್ನು ಕ್ಯಾತೇಲಿಂಗನ ತಂಗಿ ಎಂದು ತಿಳಿದು ಆಕೆಯನ್ನು ವಿಶೇಷವಾಗಿ ಆರಾಧಿಸಿ ಪೂಜಿಸುತ್ತಿದ್ದಾರೆ. ಕ್ಯಾತಪ್ಪನೇ ಬೇರೆ, ಜಡೆಗೊಂಡನೇ ಬೇರೆ ಎನ್ನುತ್ತಾರೆ ಇಲ್ಲಿನ ಜನ. ಈ ಹಿಂದೆ ಇಲ್ಲಿ ಕಾರೆ, ಬಾರೆಕಳ್ಳೆ ತುಳಿಯುವ ಸಂಪ್ರದಾಯವಿತ್ತು. ಕಲ್ಲುಕಟ್ಟಡದ ದೇವಸ್ಥಾನ ನಿರ್ಮಾಣ ಮಾಡಿದ ಮೇಲೆ ಕಳ್ಳೆ ತುಳಿಯುವ ಪದ್ಧತಿಯನ್ನು ಕೈ ಬಿಟ್ಟಿದ್ದಾರೆ.

### ೩.೧.೮.ಜಡೆಗೊಂಡ ಯಾನೆ ಕ್ಯಾತಪ್ಪ (ಕುಂಬಾರಹಳ್ಳಿ ಅಜ್ಜಪ್ಪ)

"ಅಣ್ಣೆ ಬೆಟ್ಟದಲ್ಲಿದ್ದ ಕ್ಯಾತೇಲಿಂಗ ದೇವರನ್ನು ತರಲು ಹೊರಟಾಗ ಅವನ ಇಬ್ಬರು ಹೆಂಡತಿಯರು ಅಡ್ಡಗಾಲು ಹಾಕಿದ್ದರಿಂದ ಜಡೆಗೊಂಡನಿಗೆ ಸಿಟ್ಟು ಬಂದು 'ಬಿದಿರೆಲೆ ಏಣಿಗೆ ಹೋಗೋ ಹೊತ್ತಿಗೆ ಚಿಕ್ಕ ಮಾಳಿಯ ಸಾವು ಸುದ್ದಿ ಬರಲಿ' ಎಂದು ಶಪಿಸುತ್ತಾನೆ. ಅವನ ಅಪೇಕ್ಷೆಯಂತೆ ಹೆಂಡತಿ ಸತ್ತ ಸುದ್ದಿ ತಿಳಿದು ಮೇಕೆ ಹಾಲನ್ನು ಮನವಾರೆ ಕುಡಿಯುತ್ತಾನೆ. ಕೇವಲ ದೇವರ ಮೇಲಿನ ಭಕ್ತಿ ಮತ್ತು ವ್ಯಾಮೋಹದಿಂದಾಗಿ ತಮ್ಮ ಕರುಳ ಕುಡಿಯನ್ನು ಹೊಸಕಿ ಹಾಕುವ ಸಹ ಧರ್ಮಿಣಿಯ ಸಾವನ್ನು ಪರೀಕ್ಷಿಸುವ ಈ ಜೀವ ವಿರೋಧಿ ನಿಲುವುಗಳು ಗೊಲ್ಲರ ಕಾವ್ಯಗಳಲ್ಲಿ ಸಿಗುತ್ತವೆ."[೧೦]



**ತುಮಕೂರಿನ ಜಡೆಗೊಂಡಯಾನೆ ಕ್ಯಾತಪ್ಪ ಕಲ್ಲಿನ ಸಮಾಧಿ**

ಜಡೆಗೊಂಡನಿಗೆ ವಿಶೇಷ ಪೂಜೆ ಸಲ್ಲಿಸುವ ಕಾರಣ ದೂರದ ಊರುಗಳಿಂದ ನೂರಾರು ಜನ ಭಕ್ತರು ಹರಕೆ ತೀರಿಸಲು ಸೇರುತ್ತಾರೆ. ಶಿವರಾತ್ರಿ ವೇಳೆ ಮೂರು ದಿನ ವಿಜೃಂಭಣೆಯಿಂದ ದೇವರ ಜಾತ್ರೆ ನೆರವೇರುತ್ತದೆ. ಹಿನ್ನೆಲೆ-ಮಲೆನಾಡಿನ ಕಲ್ಲತ್ತಿಗಿರಿ

ಮ್ಯಾಸಬೇಡರ ಮನೆಯಲ್ಲಿ ದನಗಳನ್ನು ಕಾಯುತ್ತಿದ್ದ ಗೊಲ್ಲರವನು ಕ್ಯಾತಪ್ಪನನ್ನು ತೆಗೆದುಕೊಂಡು ಹೋಗಿ ಅದರಂಗಿ ಗ್ರಾಮದಲ್ಲಿ ಪ್ರತಿಷ್ಠಾಪಿಸಿ ಪೂಜಿಸಲು ತೊಡಗಿದನು. ತದನಂತರ ಅದರಂಗಿಯಿಂದ ಪೂಜಾರಿ ಬೈಲಪ್ಪ ಎಂಬುವವರು ೬೦ ವರ್ಷಗಳ ಹಿಂದೆ ಈ ದೇವರನ್ನು ದೇವರಹಟ್ಟಿಗೆ ತಂದು ಪ್ರತಿಷ್ಠಾಪಿಸಿಕೊಂಡು ಪೂಜಿಸ ತೊಡಗಿದರು. "ಒಮ್ಮೆ ಅಣ್ಣ–ತಮ್ಮಂದಿರು ಒಬ್ಬರಿಗೊಬ್ಬರು ಜಗಳವಾಡಿಕೊಂಡು ದೇವರನ್ನು ಭಾಗ ಮಾಡಿಕೊಂಡರಂತೆ. ಒಬ್ಬ ಆ ಗುಡಿಯಲ್ಲಿದ್ದ ಒಂದೊಂದು ವಸ್ತುಗಳನ್ನು ತೆಗೆದುಕೊಂಡು ಹೋಗಿ ಗುಬ್ಬಿಹಟ್ಟಿ, ಲಕ್ಕೇನಹಳ್ಳಿ ಹಾಗೂ ನಿಟ್ಟೂರಿನ ಪುರದಹಟ್ಟಿಗಳಲ್ಲಿ ಅಲ್ಲಲ್ಲಿ ದೇವಸ್ಥಾನ ನಿರ್ಮಾಣ ಮಾಡಿಕೊಂಡು ಪೂಜಿಸುತ್ತಿದ್ದಾರೆ ಎಂದು ಪೂಜಾರಿ ಬೈಲಪ್ಪ ಹೇಳುತ್ತಾರೆ."[೯] ಇಲ್ಲಿ ಯುಗಾದಿ ಹಬ್ಬದ ಸಂದರ್ಭದಲ್ಲಿ ಈ ದೇವರಿಗೆ ವಿಶೇಷ ಆಚರಣೆಗಳನ್ನು ಆಚರಿಸುತ್ತಾರೆ. ಇಲ್ಲಿಯೂ ಹುರುಳಿ–ನವಣೆ ಆಚರಣೆ ಕೇವಲ ಸಾಂಕೇತಿಕವಾಗಿ ನಡೆಯುತ್ತದೆ.

### ೩.೧.೬ ಪುರದಹಟ್ಟಿ

ಇದು ನಿಟ್ಟೂರಿನ ಬಳಿ ಇದೆ. ಇಲ್ಲಿನ ಜನ ತುಮಕೂರನ್ನು ಪುರ ಎಂದು ಕರೆಯುತ್ತಾರೆ. ಪುರದ ಪಕ್ಕದಲ್ಲೇ ಈ ಗೊಲ್ಲರ ಹಟ್ಟಿ ಇರುವುದರಿಂದ ಇದನ್ನು ಪುರದಹಟ್ಟಿ ಎಂದು ಕರೆದುಕೊಂಡಿದ್ದಾರೆ. ಕಲ್ಲು ಮತ್ತು ಮಣ್ಣಿನಿಂದ ಗುಡಿ ನಿರ್ಮಾಣ ಮಾಡಿಕೊಂಡು ದೇವರನ್ನು ಪ್ರತಿಷ್ಠಾಪಿಸಿಕೊಂಡು ವಿಶೇಷ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಅಜ್ಜೇರು ಬೆಡಗಿನ ಗೊಲ್ಲರು ಮಾತ್ರ ಕ್ಯಾತಪ್ಪ ದೈವವನ್ನು ಆರಾಧಿಸುವುದು ಕಂಡುಬರುತ್ತದೆ. ಈ ದೇವರಿಗೆ ಹುರುಳಿ–ನವಣೆ ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಇಲ್ಲಿಯೂ ಸಹ ಶಿವರಾತ್ರಿ ವೇಳೆಯಲ್ಲಿ ದೇವರ ಜಾತ್ರೆ ಉತ್ಸವಗಳು ಜರಗುತ್ತವೆ.

### ೩.೧.೭ ತುಪ್ಪದಕೋಣದ ಗೊಲ್ಲರಹಟ್ಟಿ

ಬುಕ್ಕಪಟ್ಟಣದಿಂದ ಸುಮಾರು ೨೫.ಕಿಮೀ ದೂರದಲ್ಲಿದೆ. ಸುಮಾರು ೧೫೦ ಮನೆಗಳನ್ನು ಹೊಂದಿದ ಈ ಹಟ್ಟಿಯಲ್ಲಿ ಅಜ್ಜೇರ ಬೆಡಗಿನ ಗೊಲ್ಲರು ಕ್ಯಾತೇಲಿಂಗ ಯಾನೆ ಜಡೇಲಿಂಗೇಶ್ವರನನ್ನು ಆರಾಧಿಸುತ್ತಿದ್ದಾರೆ. ಇವರು ಕಾಟಮಲಿಂಗವನ್ನು ಮನೆದೇವರನ್ನಾಗಿಯೂ ಜಡೇಲಿಂಗ ದೈವವನ್ನು ವಾರದ ದೇವರನ್ನಾಗಿ ಮಾಡಿಕೊಂಡು ಆರಾಧಿಸುತ್ತಿದ್ದಾರೆ. ಪ್ರತಿ ವರ್ಷ ದೀಪಾವಳಿ ಮತ್ತು ಶಿವರಾತ್ರಿ ಸಂದರ್ಭದಲ್ಲಿ ಜಡೆಗೊಂಡೇಶ್ವರನ ಜಾತ್ರೆ ಉತ್ಸವ ನಡೆಯುತ್ತದೆ. ಕರಿಕಂಬಳಿ ಜಾಡಿಗೆ ಹಾಸಿ ಅದರ ಮೇಲೆ ನೂರಾವೊಂದು ಬಾಳೆ ಹಣ್ಣುಗಳನ್ನು ಸುಲಿದು ರಾಶಿ ಹಾಕುತ್ತಾರೆ. ದೇವರ ವಕ್ಕಲಿನ ಈರಗಾರರ ವಂಶಸ್ಥರು ಚಾಟಿ ಹೊಡೆದುಕೊಳ್ಳುವ ಸೇವೆಯನ್ನು ಮಾಡುತ್ತಾ,

ಬಳಿ ಇರುವ ಅಣ್ಣೆಬೆಟ್ಟದಲ್ಲಿದ್ದ ಕೇತೇದೇವರು ತರಲು ಹೋದ ವ್ಯಕ್ತಿಯೇ ಜಡೇಗೊಂಡ. ಆತ ದೇವರನ್ನು ತರುವಾಗ ದಾರಿ ಮಧ್ಯೆ ಮರಣ ಹೊಂದಿದ. ಆತನ ಹೆಸರಿನಲ್ಲಿ ಈ ದೇವಸ್ಥಾನ ನಿರ್ಮಾಣ ಮಾಡಿರುವುದಾಗಿ ಪೂಜಾರಿ ಹೇಳುತ್ತಾನೆ. ಈ ದೇವರನ್ನೇ ಜಡೇಗೊಂಡ, ಜಡೇಲಿಂಗೇಶ್ವರ, ಜಡಿಯಪ್ಪ, ಕೆಂಜೆಡಿಯಪ್ಪ ಹಾಗೂ ಅಜ್ಜಪ್ಪ ಹೀಗೆ ಹಲವು ಹೆಸರುಗಳಿಂದ ಕರೆದುಕೊಂಡಿದ್ದಾರೆ.

**ರಾಮಲಿಂಗಪುರ**

ಇಲ್ಲಿಂದ ಸುಮಾರು ೧.ಕಿಮೀ ದೂರದ ರಸ್ತೆಯ ಮಾದೇನೂರಿನ ಕ್ರಾಸ್ ಬಳಿ ಎರಡು ಹಿಪ್ಪೆ ಮರಗಳ ನಡುವೆ ಅವಧೂತನೊಬ್ಬನ ಕಲ್ಲುಚಪ್ಪಡಿಯ ಸಮಾಧಿ ಇದೆ. ಸಮಾಧಿ ಸುತ್ತಲು ಸುಟ್ಟ ಬಂಡೆಗಳನ್ನು ನಿಲ್ಲಿಸಿ ನಾಲ್ಕೈದು ಕರಿ ಕಲ್ಲು ಹಾಗೂ ಬಂಡೆಗಳನ್ನು ನೆಲಕ್ಕೆ ಹಾಸಿ ಅದರ ಮೇಲೆ ಎರಡು ಚಿಕ್ಕ, ಚಿಕ್ಕ ಗೂಡುಗಳನ್ನು ಕಟ್ಟಿದ್ದಾರೆ. ಸಮಾಧಿ ಇರುವ ಸ್ಥಳದ ಒಳಗಡೆ ಹೋಗದ ರೀತಿಯಲ್ಲಿ ಬಾಗಿಲಿಗೆ ಅಡ್ಡವಾಗಿ ಬಂಡೆ ನಿಲ್ಲಿಸಿದ್ದಾರೆ. ಪೂಜಾರಿಯೊಬ್ಬನಿಗೆ ಹೇಳಿಕೆ ಆಗುವುದರಿಂದ ಪ್ರತಿ ಸೋಮವಾರ ನೂರಾರು ಜನ ಭಕ್ತರು ಸೇರುತ್ತಾರೆ. ಮಲೆನಾಡಿನ ಕಲ್ಲತ್ತಿಗಿರಿಯ ಅಣ್ಣೆಬೆಟ್ಟದಲ್ಲಿದ್ದ ದೇವರನ್ನು ತರಲು ಹೋದ ವ್ಯಕ್ತಿಯೇ ಜಡೆಗೊಂಡ. ಆತ ಅಲ್ಲಿಂದ ಇಲ್ಲಿಗೆ ದೇವರನ್ನು ಹೊತ್ತು ತಂದು ಪ್ರತಿಷ್ಠಾಪನೆ ಮಾಡಿ ಅದಕ್ಕೆ ಕ್ಯಾತೇದೇವರು ಎಂದು ಹೆಸರಿಟ್ಟು ಆತ ರಾಮಲಿಂಗಾಪುರದ ಬಳಿ ಜೀವಸಮಾಧಿ ಆದ ಎಂಬ ಪ್ರತೀತಿ ಇದೆ. ಇವನನ್ನೇ ಜನಪದರು ಅಜ್ಜಪ್ಪ ಎಂಬ ಹೆಸರಿನಿಂದ ಕರೆಯುತ್ತಾರೆ.

**೩.೧.೯ ಸೋಮೇನಹಳ್ಳಿ ಗೊಲ್ಲರಹಟ್ಟಿ**

ಇದು ಗಾಣದಾಳುವಿನಿಂದ ೨.ಕಿಮೀ ದೂರದಲ್ಲಿದೆ. ಇಲ್ಲಿ ಸನ್ನರು ವಂಶದ ಅಜ್ಜೇರ ಬೆಡಗಿನ ಗೊಲ್ಲರು ನೆಲೆಸಿದ್ದು ತಮ್ಮ ಆರಾಧ್ಯ ದೈವ ಕ್ಯಾತೆಲಿಂಗನನ್ನು ಪೂಜಿಸ ತೊಡಗಿದ್ದಾರೆ. "ಮದುಗಿರಿ, ರತ್ನಗಿರಿ ಎಂಬ ಕಾವಲಲ್ಲಿ ಅಜ್ಜಿ ಸಿರಿಯಣ್ಣ, ದಪ್ಪುಂಟೆ ಕಾಮಟಮಲಿಂಗ ಇಬ್ಬರು ಕುರಿ ಕಾಯುತ್ತಿರುವಾಗ ಕುಕನಗುಂಡಿ ಹತ್ತಿರ ಒಂದು ಲಿಂಗದ ಕಲ್ಲು ಸಿಕ್ಕಿತು. ಅಲ್ಲದೆ ಕಾಟಮ್ಮಳು ಕಡೆಗೋಲಿನಿಂದ ಮೊಸರು ಕಡೆಯುವಾಗ ಮೊಸರಿನ ಮಡಿಕೆಯಲ್ಲಿ ಲಿಂಗ ಉದ್ಭವಾಯಿತು. ಇದು ದೇವರ ಮಹಿಮೆ ಎಂದು ತಿಳಿದು ಆ ಎರಡು ಲಿಂಗಗಳನ್ನು ತಂದು ಪ್ರತಿಷ್ಠಾಪಿಸಿಕೊಂಡು ವ್ರತ ನೇಮದಿಂದ ದೇವರನ್ನಾಗಿ ಮಾಡಿಕೊಂಡು ಅಲ್ಲಿಂದ ಇಲ್ಲಿಯವರೆಗೆ ಆರಾಧನೆ ಮಾಡಿಕೊಂಡು ಬರುತ್ತಿದ್ದಾರೆ. ಆ ಲಿಂಗದ ದೇವರನ್ನೇ ಕ್ಯಾತೇದೇವರು ಎಂದು ಕರೆಯುತ್ತಾರೆ. ಇದು ಸಾವಿರ ಒಕ್ಕಲು ಮಕ್ಕಳನ್ನು ಹೊಂದಿದ್ದು, ಅಣ್ಣೆಬೆಟ್ಟ, ಕಲ್ಲತ್ತಗಿರಿ,

ಸಿದ್ದಾಪುರ, ಗ್ಯಾಮಡ್ಲಿ, ಹಾಲದಹಳ್ಳಿ, ಲಿಂಗದಟ್ಟಿ ಮುಂತಾದ ಕಡೆಗಳಿಂದ ಈ ದೇವರಿಗೆ ನಡೆದುಕೊಳ್ಳುತ್ತಾರೆ."[೧೧] ಈ ಹಟ್ಟಿಯಲ್ಲಿ ಹುರುಳಿ ವ್ರತದ ಜೊತೆಗೆ ಕುಂಬಳಕಾಯಿಯ ವ್ರತವನ್ನು ಕಟ್ಟುನಿಟ್ಟಿನಿಂದ ಆಚರಿಸುತ್ತಾರೆ. ಇಲ್ಲಿಯ ಜನ ಎಂದಿಗೂ ಕುಂಬಳಿಕಾಯಿಯನ್ನು ಮುಟ್ಟುವುದಿಲ್ಲ, ತಿನ್ನುವುದೂ ಇಲ್ಲ. ಸಂಪೂರ್ಣ ನಿಷಿದ್ಧ. ಪ್ರತಿ ವರ್ಷ ದಪ್ಪಗುಂಟೆ ಹತ್ತಿರದ ದೇವಸ್ಥಾನದಲ್ಲಿ ಎಂಟುನೂರು ಹಾಗೂ ಸಾವಿರ ನಿಂಬೆಹಣ್ಣುಗಳನ್ನಿಟ್ಟು ಮಂತ್ರ ಪಠಿಸಿ ವಿಶೇಷ ಆಚರಣೆ ಮಾಡುತ್ತಾರೆ. ಈ ದೇವರನ್ನು ಹಿರಿಯೂರು ತಾಲ್ಲೂಕಿನ ಕುನ್ನಿಕೆರೆಯಿಂದ ತಂದು ಕಲ್ಲಿನ ಗುಡಿಯಲ್ಲಿ ಅದನ್ನು ಪ್ರತಿಷ್ಠಾಪಿಸಿಕೊಂಡು ಪೂಜೆ ಮಾಡುತ್ತಿದ್ದಾರೆ.

ದಪ್ಪಗುಂಟೆ ಕಾಟಮದೇವರು, ಅಜ್ಜ ಸಿರಿಯಣ್ಣ, ಬಡಿಕೋಲು ರಾಮದೇವರು, ಕೆಂಪರಾಯ, ಕೋಲು ದೇವರು, ಧಾರೆ ಚಿತ್ತಮ್ಮ ದೇವರು ಹೀಗೆ ಈ ದೇವರುಗಳು ಏಳು ಗುಡಿಕಟ್ಟುಗಳನ್ನು ಒಳಗೊಂಡಿದ್ದು, "ಒಂದೇ ವಂಶದ ಏಳು ಜನರಿಗೆ ಒಂದೊಂದು ದೇವರು ಮಾಡಿಕೊಟ್ಟು ಕೆಲವರಿಗೆ ನೂರು ಮನೆ ವಕ್ಕಲು, ಇನ್ನು ಕೆಲವರಿಗೆ ಸಾವಿರ ಮನೆ ವಕ್ಕಲು ಕೊಟ್ನಂತೆ, ಹೊನ್ನಜ್ಜ ಸಿರಿಯಣ್ಣ ಎಂಬ ಈರಗಾರ. ಗಾಣದಾಳಿನಲ್ಲಿ ಹಿರೇ ಕ್ಯಾತೇದೇವರು ನೆಲೆಗೊಂಡಿರುವುದರಿಂದ ಇವರಿಗೆ ಸಾವಿರ ಮನೆಗಳ ವಕ್ಕಲು ನೀಡಿದ್ದಾರೆ."[೧೨] ಈ ದೇವರ ಭಕ್ತರು ಕುಂಬಳಕಾಯಿ ಮುಟ್ಟುವುದಿಲ್ಲ. ಮುಟ್ಟಿದರೆ ಕೇಡುಂಟಾಗುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಪ್ರತಿ ಶಿವರಾತ್ರಿಗೂ ಮೂರು ನಾಲ್ಕು ದಿನಗಳವರೆಗೆ ದೇವರ ವಿಶೇಷ ಜಾತ್ರೆ ಜರುಗುತ್ತದೆ.

**ಚಾಮರಾಜ ನಗರ**

ಸೋಲಿಗರು ಪಕ್ಕದ ತಮಿಳುನಾಡು ಮತ್ತು ಆಂಧ್ರಪ್ರದೇಶದಲ್ಲಿ ಅತಿಕಡಿಮೆ ಸಂಖ್ಯೆಯಲ್ಲಿ ಕಂಡು ಬಂದರೆ, ಕರ್ನಾಟಕದ ಚಾಮರಾಜನಗರ, ಮೈಸೂರು ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಬಿಳಿಗಿರಿರಂಗನ ಬೆಟ್ಟದ ತಪ್ಪಲಿನ ಅರಣ್ಯಪ್ರದೇಶದಲ್ಲಿ ಅಲ್ಲಲ್ಲಿ ಕಾಡಿನ ಮಧ್ಯಭಾಗದಲ್ಲಿ ಪೋಡುಗಳನ್ನು ನಿರ್ಮಿಸಿಕೊಂಡು ನೆಲೆಸಿದ್ದಾರೆ. ಸೋಲಿಗರು ವಾಸವಿರುವ ನೆಲೆಗಳನ್ನು ಪೋಡು(ಹಾಡಿ) ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಈ ಪೋಡುಗಳ ಹೆಸರುಗಳು "ಗಿಡ–ಮರ, ಕೆರೆ–ಕಟ್ಟೆ ಮತ್ತು ಗುಂಡಿ–ಮಾಳ ಇತ್ಯಾದಿಗಳೇ ಆಗಿರುತ್ತವೆ. ಸೀಗೆಪೋಡು, ಸಂಪಿಗೆಪೋಡು, ಮುತ್ತುಗದಗದ್ದೆ ಪೋಡು, ದೊಡ್ಡ ಸಂಪಿಗೆಪೋಡು, ಕತ್ತೆಕಲ್ ಪೋಡು, ಕನ್ನೇರು ಕಾಲೋನಿ ಪೋಡು, ಹೊಸ ಪೋಡು, ಎರಕಿನಗದ್ದೆ ಪೋಡು, ಸೀಗೆ ಬೆಟ್ಟದ ಪೋಡು, ಮಂಜಿಗುಂಡಿ ಪೋಡು, ಕಲ್ಲುಗಿಣಿ ಪೋಡು"[೧೩] ಇತ್ಯಾದಿಗಳನ್ನು ಅಧ್ಯಯನಕಾರರು ಗುರುತಿಸಿದ್ದಾರೆ.

ಸೋಲಿಗರಲ್ಲಿ ಪ್ರಮುಖವಾಗಿ ಎರಡು ಪಂಗಡಗಳಿವೆ. ಒಂದು ಮಲೆಸೋಲಿಗ ಇನ್ನೊಂದು ನಾಡ ಸೋಲಿಗ. ಅಂದರೆ ಗುಡ್ಡ ಬೆಟ್ಟ-ಕಾಡು ಮಲೆಗಳಲ್ಲಿ ವಾಸಿಸುವ ಸೋಲಿಗರನ್ನು ಮಲೆ ಸೋಲಿಗ ಎಂದು ಕರೆದರೆ, ನಾಗರಿಕ ಪ್ರದೇಶದಲ್ಲಿರುವವರನ್ನು ನಾಡ ಸೋಲಿಗರು ಎಂದು ಕರೆಯುತ್ತಾರೆ. ಸೋಲಿಗರಲ್ಲಿ ಆಲುರು ಕುಲ, ತೆನೇರು ಕುಲ, ಸೂರ್ಯ ಕುಲ, ಹೊಂಗೆಲರ ಕುಲ, ಬೆಲ್ಲರ ಕುಲ,(ಬೆಳ್ಳಿ) ಹೀಗೆ ಐದು ಪ್ರಮುಖ ಕುಲಗಳು ಕಂಡುಬರುತ್ತವೆ. ಆಲುರು ಕುಲದ ಆರಾಧ್ಯ ದೈವ ಕೇತೇಶ್ವರ (ಕ್ಯಾತೇದೇವರು) ನನ್ನು ಪೂಜಿಸುತ್ತಾರೆ. ಕನ್ನೇರು ಕಾಲೋನಿ ಕೆ.ಗುಡಿ, ದೊಡ್ಡ ಸಂಪಿಗೆ ಪೋಡು, ಮುತ್ತುಗದ ಗದ್ದೆಪೋಡುಗಳಲ್ಲಿ ಕಲ್ಲು ಮಣ್ಣಿನಿಂದ ಕಟ್ಟಡ ನಿರ್ಮಿಸಿ ಕೆಂಪು ಹೆಂಚು ಹೊದಿಕೆಯಿಂದ ಗುಡಿ ನಿರ್ಮಿಸಿ ದೇವರನ್ನು ಪ್ರತಿಷ್ಠಾಪಿಸಿಕೊಂಡು ಪೂಜಿಸುತ್ತಿದ್ದಾರೆ.

**ಕೆ.ಗುಡಿ**



ಕ್ಯಾತಪ್ಪನ ವೀರಗಲ್ಲು

ಇದು ಚಾಮರಾಜನಗರ ಜಿಲ್ಲೆ ಯಳಂದೂರು ತಾಲ್ಲೂಕು ಬಿಳಿಗಿರಿ ರಂಗನಾಥಸ್ವಾಮಿ ಬೆಟ್ಟದಿಂದ ಸುಮಾರು ೧೫-೨೦ ಕಿಮೀ ದೂರದ ಬೆಟ್ಟದ ಮತ್ತು ಕಾಡಿನ ಮಧ್ಯೆ ಇದೆ. 'ಹಾಡಿಗಳಲ್ಲಿ' ವಾಸವಿರುವವರೆಲ್ಲರೂ ಸೋಲಿಗರು. ಈ ಸಮುದಾಯದಲ್ಲಿ ಪ್ರಮುಖವಾಗಿ ಐದು ಕುಲದವರೂ, ಏಳು ಕುಲದವರೂ, ಅಲ್ಲದೆ ಹದಿನಾಲ್ಕು ಕುಲದ ಸೋಲಿಗರು ಇದ್ದಾರೆ. ಹೊಂಗೆಲರ "ಕುಲ, ಆಲುರು ಕುಲ, ಬೆಲ್ಲರ ಕುಲ, ಸೂರ್ಯ ಕುಲ, ತೇನೆರ ಕುಲ, ಜೇನು ಕುಲ, ಕುಂಬಳು ಕುಲಗಳು."[೧೪] ಹೀಗೆ ಹಲವು

ಬಗೆಯ ಕುಲಗಳಿವೆ. ಆ ಕಲುಗಳಿಗೆ ಪ್ರಾಧಾನ್ಯತೆ ನೀಡುತ್ತಾ ಬಂದಿರುವ ಸೋಲಿಗ್ಗರ ಗುಂಪು ಮತ್ತು ಒಳಗುಂಪಿನಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಕಾಣಬಹುದು. ತಮ್ಮ ಕುಲವನ್ನು ಪ್ರತಿನಿಧಿಸುವ ಯಾವುದೇ ಧಾರ್ಮಿಕ ವಿಧಿ ವಿಧಾನ, ಬೇಟೆಯ ಸಂದರ್ಭದ ಆಚರಣೆಗಳು ಹಿರಿಯರ ಸಮ್ಮುಖದಲ್ಲಿ ನಡೆಯುತ್ತವೆ.

ಹೊಂಗೆಲರ ಕುಲ ಅವರ ಕುಲ ದೇವತೆ ಸಿದ್ದೇಶ್ವರ. ಒಂದು ಗುಂಪಿನ ಸೋಲಿಗರು ಹೊಂಗೆಯ ಮರವನ್ನು ಒಂದು ಬಂಡೆ ಹತ್ತಿರ ಕಡಿಯುತ್ತಿದ್ದಾಗ ಆ ಮರದಲ್ಲಿ ದೇವತೆ ಇರುವುದರ ಅರಿವು ಆಯಿತಂತೆ ಅಂದಿನಿಂದ ಹೊಂಗೆಯ ಮರವನ್ನು ಕಡಿಯುವುದನ್ನು ಬಿಟ್ಟು ಅಂದಿನಿಂದ ಅವರು ಹೊಂಗೆಯ ಕಟ್ಟಿಗೆಯನ್ನು ಉರುವಲಾಗಿಯೂ ಬಳಸುವುದಿಲ್ಲ. ಆಲುರು ಕುಲ, ಇವರ ಕುಲ ದೇವತೆ ಮಹದೇಶ್ವರ. ಹಾಗೆಯೇ ಬಿಳಿಗಿರಿ ರಂಗನಬೆಟ್ಟದ ಹತ್ತಿರ ಇರುವ ಕೆ.ಗುಡಿ ಮತ್ತು ಕನ್ನೇರ ಕಾಲೋನಿ ಹತ್ತಿರದಲ್ಲಿರುವ ಕ್ಯಾತೇದೇವರು ಇವರ ಕುಲ ದೈವವಾಗಿದ್ದು ಆರಾಧನೆ ಜೊತೆಗೆ ವಿಶಿಷ್ಟ ಆಚರಣೆಗಳು ಜರಗುತ್ತಿರುತ್ತವೆ.

### ೩.೧.೧೦ ಬೆಸ್ತರಹಳ್ಳಿ



ಬೆಸ್ತರಹಳ್ಳಿ ಕಟ್ಟೆಮನೆ

ಇದು ಕರ್ನಾಟಕ ಮತ್ತು ಆಂಧ್ರದ ಗಡಿಭಾಗದಲ್ಲಿದೆ. ಕಾಡುಗೊಲ್ಲರ ಮೂಲ ಕಟ್ಟೆಮನೆಗಳಲ್ಲಿ ಇದು ಒಂದು. ಸುಮಾರು ೨೫ ಎಕರೆ ಪ್ರದೇಶದಲ್ಲಿ ಗಿಡ-ಮರಗಳಿಂದ ಆವರಿಸಲ್ಪಟ್ಟಿರುವ ಈ ಪ್ರದೇಶವನ್ನು ಬೊಮ್ಮದೇವರ ತೋಪು ಎಂದು ಕರೆಯುತ್ತಾರೆ. ಇಲ್ಲಿ ಬೊಮ್ಮದೇವರು, ಕಾಟಮಲಿಂಗ, ಓಬಳಪತಿ ದೇವರುಗಳಿಗೆ ಗುಡಿ ಗೋಪುರಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಇಲ್ಲಿ ಬೊಮ್ಮದೇವರನ್ನು ಕೇಲು(ಕುಂಭ)ಗಳ ರೂಪದಲ್ಲಿ ಆರಾಧಿಸಲಾಗುತ್ತಿದೆ. ಇಲ್ಲಿ ನಾಲ್ಕೈದು ಸಮಾಧಿಗಳಿದ್ದು ಅವುಗಳ ಪಕ್ಕದಲ್ಲಿಯೇ ಕ್ಯಾತಪ್ಪ ಹೆಸರಿನಲ್ಲಿ ಕಟ್ಟೆಯೊಂದನ್ನು ನಿರ್ಮಾಣ ಮಾಡಿಕೊಂಡು ಆ ದೈವನ್ನು ಆರಾಧಿಸ ತೊಡಗಿದ್ದಾರೆ.

**ಮರಿಯಮ್ಮನಹಳ್ಳಿ** – ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿಯಲ್ಲಿ ನಾಗರ ಪಂಚಮಿಯಾದ ಮರುದಿನವೇ ಕ್ಯಾತಪ್ಪನ ಆಚರಣೆ ನಡೆಯುತ್ತದೆ. ಇದನ್ನು ಚಂಗಳೀರಕಮ್ಮಾರ ಆಚರಣೆ ಎಂತಲೂ ಕರೆಯುತ್ತಾರೆ. “ಬಾರೀಕಾರ ಸಮುದಾಯದ ಬೇರೆ ಬೇರೆ ಮನೆಗಳಲ್ಲಿ ಕ್ಯಾತಪ್ಪ ಹಾಗೂ ಚಂಗಳೀಕಮ್ಮಾರ ಇವರಿಬ್ಬರ ಜನನವಾಗುತ್ತದೆ.”[೧೫] ಈ ಎರಡೂ ಮನೆಗಳಿಂದ ಮಣ್ಣಿನ ಮೂರ್ತಿಗಳನ್ನು ಒಂದೆಡೆ ತಂದು ಪ್ರತಿಷ್ಠಾಪಿಸುತ್ತಾರೆ. ದಂಪತಿಗಳನ್ನು ವಿವಿಧ ಹೂಗಳಿಂದ ಮೂರ್ತಿಗಳನ್ನು ಅಲಂಕರಿಸುವುದರ ಮೂಲಕ ದೈವಗಳನ್ನು ಪೂಜಿಸಿ ಅವುಗಳಿಗೆ ನೈವೇದ್ಯ ಅರ್ಪಿಸುತ್ತಾರೆ. ಸಾಯಂಕಾಲ ವಿವಿಧ ವಾದ್ಯಗಳೊಂದಿಗೆ ಮೆರವಣಿಗೆ ಮೂಲಕ ಮಣ್ಣಿನ ಉತ್ಸವ ಮಣ್ಣಿನ ಮೂರ್ತಿಗಳನ್ನು ನದಿ ನೀರಿನಲ್ಲಿ ವಿಸರ್ಜಿಸುತ್ತಾರೆ. ಜೋಕುಮಾರನಂತೆ ಕ್ಯಾತಪ್ಪನು ಇಲ್ಲಿ ಮಳೆ ದೈವವಾಗಿ ಪೂಜೆಗೊಳ್ಳುತ್ತಿದ್ದಾನೆ. ಈತನ ಜೀವಿತಾವಧಿ ಒಂದು ದಿನ ಮಾತ್ರ. ಈ ಭಾಗದಲ್ಲಿ ಜೋಕುಮಾರ ದುರಂತ ನಾಯಕನಾದರೆ, ಕ್ಯಾತಪ್ಪ ಮಾತ್ರ ಶಾಂತ ಸ್ವರೂಪದ ದೈವವಾಗಿ ಕಾಣಿಸಿಕೊಳ್ಳುತ್ತಾನೆ. ಸದ್ದು ಗದ್ದಲದ ನಡುವೆಯೂ ನಿಶಬ್ದವಾಗಿ ಕ್ಯಾತಪ್ಪ ಕೃಷಿಯ ಆಚರಣೆಯಲ್ಲಿಯೂ ತಮ್ಮ ವೈಶಿಷ್ಟ್ಯತೆಯನ್ನು ಪಡೆದಿದ್ದಾನೆ. ಕ್ಯಾತಪ್ಪ ದನಗಾಹಿಯಾಗಿ, ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ವೀರನಾಗಿ, ಕಾಡುಗೊಲ್ಲ ಸಮುದಾಯದಲ್ಲಿ ಆರಾಧ್ಯ ದೈವನಾಗಿ ಪೂಜೆಗೊಳ್ಳುತ್ತಿದ್ದಾನೆ. ಆದರೆ ಬಾರೀಕಾರರ ಸಮುದಾಯದಲ್ಲಿ ಜೋಕುಮಾರ ಸಮಕಾಲೀನನಾಗಿ ಕೃಷಿಕ ಸಮುದಾಯದಲ್ಲಿ ಮಳೆ ದೈವನಾಗಿ ಕಾಣಿಸಿಕೊಳ್ಳುತ್ತಾನೆ.

**ಕ್ಯಾಸನಗೆರೆ** – ಈ ಗ್ರಾಮದಲ್ಲಿ ಸುಮಾರು ೪೦ ಕಾಡುಗೊಲ್ಲ ಕುಟುಂಬಗಳು ನೆಲೆಸಿವೆ. ಇಲ್ಲಿ ವಿವಿಧ ಬೆಡಗುಗಳಿದ್ದು ಕ್ಯಾತಪ್ಪನ ಆರಾಧಕರು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಕ್ಯಾತಪ್ಪನಿಗಾಗಿ ಯಾವುದೇ ಪ್ರತ್ಯೇಕ ದೇವಸ್ಥಾನ ನಿರ್ಮಾಣ ಮಾಡಿಸಿಲ್ಲ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿ ಕ್ಯಾತೇ ದೇವರಿಗೆ ನಡೆದುಕೊಳ್ಳುತ್ತಾರೆ.

ನಡುವಲಹಟ್ಟಿ,ಸೂರಮ್ಮನಹಳ್ಳಿ ಕರಡಿಹಳ್ಳಿ-ಇಲ್ಲಿ ಬಹುತೇಕವಾಗಿ ಮ್ಯಾಸಬೇಡ ಬುಡಕಟ್ಟಿನವರೇ ವಾಸವಾಗಿದ್ದಾರೆ. ಈ ಕುಟುಂಬಗಳು ಕ್ಯಾತಪ್ಪನ ಆರಾದಕರೆ, ಆದರೆ ಆ ದೈವನಿಗಾಗಿ ದೇವಸ್ಥಾನ ನಿರ್ಮಾಣ ಮಾಡಿಲ್ಲ. ಕ್ಯಾತಪ್ಪನ ಒಕ್ಕಲಿಗೆ ಸೇರಿದ ಕುಟುಂಬಗಳು ತಮ್ಮ ಮನೆಯಲ್ಲಿನ ಹುಟ್ಟುವ ಮಕ್ಕಳಿಗೆ ಕ್ಯಾತಪ್ಪ ಹಾಗೂ ಕ್ಯಾತಮ್ಮ ಎಂದು ಹೆಸರಿಡುವ ಪದ್ದತಿ ರೂಢಿಸಿಕೊಂಡಿದ್ದಾರೆ. ಕೊಡಗು ದೇಶದಿಂದ ಬಂದ ತಮ್ಮ ಹಿರಿಕರಿಗೆ ವಂಶದಲ್ಲಿ ಮಕ್ಕಳಿರಲಿಲ್ಲ. ಎಲ್ಲಾ ದೇವರ ಹತ್ತಿರ ಹೋಗಿ ಬೇಡಿಕೊಂಡರೂ ಮಕ್ಕಳ ಫಲ ದೊರೆಯಲಿಲ್ಲ ಕೊನೆಗೆ ಕಾಡುಗೊಲ್ಲರ ಕ್ಯಾತಪ್ಪ ದೇವರಿಗೆ ಹರಕೆ ಹೊತ್ತು ನಡೆದುಕೊಂಡರಂತೆ ಆಗ ಮಕ್ಕಳ ಫಲ ಕರುಣಿಯಿಸಿದನಂತೆ ಎಂದು ಬೇಡ ಸಮುದಾಯದ ಹಿರಿಯ ಮುಖಂಡ ದಡ್ಡಿ ಸೂರಯ್ಯ ಹೇಳುತ್ತಾರೆ.

### ೩.೧.೧೧ ಬೊಮ್ಮಗಟ್ಟ ಗೊಲ್ಲರಹಟ್ಟಿ

ಇದು ಬಳ್ಳಾರಿ ಜಿಲ್ಲೆ ಚೋರನೂರು ಗ್ರಾಮದಿಂದ ಸುಮಾರು ಎರಡು ಕಿ.ಮೀ ದೂರದಲ್ಲಿದೆ. ಈ ಗ್ರಾಮದಲ್ಲಿ ಕಾಡುಗೊಲ್ಲರ ವಿವಿಧ ಬೆಡಗಿನ ಕುಟುಂಬಗಳು ವಾಸವಾಗಿವೆ. ಇಲ್ಲಿ ಕಾಟಮಲಿಂಗೇಶ್ವರ, ಕ್ಯಾತಪ್ಪ, ಬೋಸಣ್ಣ ಹಾಗೂ ಮಾರಕ್ಕ ದೇವಸ್ಥಾನ ನಿರ್ಮಿಸಿದ್ದಾರೆ. ಶಿವರಾತ್ರಿ ಸಂದರ್ಭದಲ್ಲಿ ಮೂರು ದಿನ ಉತ್ಸವ ನಡೆಸುತ್ತಾರೆ. ಇಲ್ಲಿನ ಬೆಡಗುಗಳು ಎಂದಿಗೂ ಹುರುಳಿ-ನವಣೆ ಸ್ವೀಕರಿಸುವುದಿಲ್ಲ. ನಾವು ಪೂರ ಬತದವರು ಎಂದು ಹೇಳಿಕೊಳ್ಳುತ್ತಾರೆ. ದೇವರಿಗೆ ಆಗದ ಧಾನ್ಯಗಳನ್ನು ನಾವು ಮುಟ್ಟುವುದಿಲ್ಲ ಹಾಗೂ ತಿನ್ನುವುದೂ ಇಲ್ಲ. ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು ಚನ್ನಮ್ಮನಾಗತಿಹಳ್ಳಿಯಲ್ಲಿ ನಡೆಯುವ ಕ್ಯಾತೇದೇವರ ಜಾತ್ರೆಗೆ ನಮ್ಮಲ್ಲಿ ಯಾರಾದರೂ ಒಬ್ಬರು ಫೋಗಿ ಹಣ್ಣು-ಕಾಯಿ ಮಾಡಿಸಿಕೊಂಡು ತೀರ್ಥ-ಪ್ರಸಾದ ತೆಗೆದುಕೊಂಡು ಬರ್ತೀವಿ ಎಂದು ಗ್ರಾಮದ ಮುಖಂಡ ದೊಡ್ಡಕೇತಪ್ಪ ಹೇಳುತ್ತಾರೆ. ಹೆಣ್ಣು ಮಕ್ಕಳು ಮುಟ್ಟಾದರೆ ಹಾಗೂ ಮಹಿಳೆಯರು ಹೆರಿಗೆಯಾದರೆ ಕನಿಷ್ಠ ಎರಡು--ಮೂರು ತಿಂಗಳು ಹಟ್ಟಿ ಹೊರಗೆ ಗುಡಿಸಲು ಹಾಕಿಕೊಂಡು ಇರಲೇಬೇಕು ಎಂಬ ಸಾಮಾಜಿಕ ಕಟ್ಟಳೆ ಮಾಡಿಕೊಂಡಿದ್ದಾರೆ. ಒಂದು ವೇಳೆ ನಮ್ಮಲ್ಲಿ ಹಾಗೆ ನಡೆದುಕೊಳ್ಳದಿದ್ದರೆ ದೇವರು ಉಗ್ರವಾದ ಕಣ್ಣು ಬಿಟ್ಟು ನಮ್ಮನ್ನು ಹಾಗೂ ಹಟ್ಟಿಯನ್ನು ಸುಟ್ಟು ಸರ್ವ ನಾಶಮಾಡುತ್ತಾನೆ ಎಂಬ ನಂಬಿಕೆ ಅವರಲ್ಲಿ ಇನ್ನೂ ಬಲವಾಗಿ ಬೇರೂರಿದೆ.

**ಜರ್ಮಲಿ** – ಇದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಿಂದ ಸುಮಾರು ಹದಿಮೂರು ಕಿ.ಮೀ ದೂರದಲ್ಲಿದೆ. ಗುಡ್ಡ,ಬೆಟ್ಟ ಕುರುಚಲು ಗಿಡಗಳ ಕಾಡುಗಳ ಮಧ್ಯೆ ಕಂಡುಬರುತ್ತದೆ. ಕುರಿ- ದನಗಳ ರಕ್ಷಣೆಗೆ ಹಾಗೂ ಅವುಗಳನ್ನು ಮೇಯಿಸಲಿಕ್ಕೆ ಆಯಾಕಟ್ಟಿನ ಪ್ರದೇಶವಾಗಿದೆ. 'ಜರ್ಮಲಿ' ಎಂಬ ನೆಲೆ ಬುಡಕಟ್ಟು ಸಮುದಾಯಗಳ

ಸಾಂಸ್ಕೃತಿಕ ಕೇಂದ್ರ ಅಷ್ಟೇ ಅಲ್ಲದೆ ಹುಲ್ಲುಗಾವಲುಗಳ ಕೇಂದ್ರವೂ ಆಗಿತ್ತು ಎಂಬುವುದನ್ನು ಕಾಡುಗೊಲ್ಲರ ಸಾಂಸ್ಕೃತಿಕ ವೀರ ಜುಂಜಪ್ಪನ ಕಥನ ಕಾವ್ಯದಲ್ಲಿ ಜರ್ಮಲಿ ಪ್ರದೇಶದ ಮಹತ್ವವನ್ನು ತಿಳಿದು ಬರುತ್ತದೆ. ಚಿಕ್ಕಜ್ಯೋಗಿಹಳ್ಳಿ, ಗೋವಿಂದಗಿರಿ, ಶಿವಾಪುರ ಗ್ರಾಮಗಳಲ್ಲಿ ಕ್ಯಾತಪ್ಪ ದೈವದ ಆರಾಧಕರು ಈ ಭಾಗದಲ್ಲಿ ಕಂಡು ಬರುವುದು ಅತಿ ವಿರಳ.

ಬುಡಕಟ್ಟು ಸಮುದಾಯದ ವಿಧಿ ಬದ್ಧವಾದ ಆಚರಣೆಗಳನ್ನು ಅಧ್ಯಯನದ ಕೆಲಸಗಳು ಇನ್ನು ಸಾಕಷ್ಟು ಆಗಬೇಕಿದೆ. ಇಲ್ಲದಿದ್ದರೆ ಆಧುನಿಕತೆಯ ಭರಾಟೆ ಸಿಕ್ಕು ಮತ್ತು ನಾಜೂಕುತನದ ಜೀವನದಲ್ಲಿ ಮುಳುಗಿ ಹೋಗಿರುವ ನಾವುಗಳು ಮುಂದೊಂದು ದಿನ ಈ ವಿಧಿ-ವಿಧಾನದ ಆಚರಣೆಗಳನ್ನು ಸ್ಮೃತಿಯಲ್ಲಿ ಉಳಿಸಿಕೊಳ್ಳವ ಅನಿವಾರ್ಯತೆಗೆ ಸಿಲುಕಬೇಕಾಗುತ್ತದೆ. ಅವುಗಳಲ್ಲೀ ಕೆಲವು ಅಂಶಗಳನ್ನು ಕೈಬಿಡುತ್ತಾ ಇಲ್ಲವೆ ಮಾರ್ಪಾಡು ಮಾಡಿಕೊಳ್ಳುತ್ತಾ ಸಾಗಬೇಕಾಗಿದೆ. ಆದ್ದರಿಂದ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ವೀರರು- ಈರಗಾರ ದೈವಗಳ ಆರಾಧನಾ ನೆಲೆಗಳು ಮತ್ತು ದೈವದ ಸಾಂಸ್ಕೃತಿಕ ಆಚರಣೆಗಳಲ್ಲಿನ ಅಂಶಗಳನ್ನು ಅಧ್ಯಯನದ ಮೂಲಕ ಅವುಗಳನ್ನು ದಾಖಲಿಸುವ ತುರ್ತು ಇಂದು ಅಗತ್ಯವಿದೆ. ಇಲ್ಲದಿದ್ದಲ್ಲಿ ಮುಂದಿನ ಪೀಳಿಗೆಗೆ ಸಾಂಸ್ಕೃತಿಕ ಅಂಶಗಳ ಆಚರಣೆಗಳ ದಾಖಲೆಗಳೇ ಇಲ್ಲವಾಗುತ್ತವೆ. ಇಂಥ ಆಚರಣೆಗಳ ವಿಧಿ-ವಿಧಾನದ ಗಂಭೀರ ಅಧ್ಯಯನ ವರ್ತಮಾನವನ್ನು ಭೂತದೊಂದಿಗೆ ಗುರುತಿಸಿಕೊಳ್ಳುವಲ್ಲಿ ಹಾಗೂ ಭವಿಷ್ಯವನ್ನು ರೂಪಿಸುವಲ್ಲಿ ದೈವಗಳ ಆರಾಧನಾ ನೆಲೆಗಳ ಕುರಿತ ಸಾಂಸ್ಕೃತಿಕ ಆಚರಣೆಗಳ ಅಧ್ಯಯನಗಳು ಮುಂದಿನ ಸಂಶೋಧಕರಿಗೆ ಆಕರವಾಗಬಲ್ಲವು.

**ಅಡಿ ಟಿಪ್ಪಣಿ**

೧. ಪ್ರೇಮ.ಜಿ.ಕೆ, ಕಾಡುಗೊಲ್ಲ ಬುಡಕಟ್ಟು ಸಾಹಿತ್ಯ-ಮಹಿಳೆ ಪುಟ,೪೯

೨. ಅದೇ ಪು,೫೨.

೩. ಮೀರಾಸಾಬಿಹಳ್ಳಿ ಶಿವಣ್ಣ, ದುರುಗ ಜಾನಪದ ಪುಟ,೩೭ ಸಿ.ವಿ.ಜಿ.ಪ್ರಕಾಶನ ಬೆಂಗಳೂರು

೪. ಚಿಕ್ಕಣ್ಣ ಯಣ್ಣೆಕಟ್ಟೆ, ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,ಪುಟ,೧ ಮತ್ತು ೨.

೫. (ವಕ್ತೃ)ಪೂಜಾರಿ ತಿಮ್ಮಣ್ಣ, ೪೫ವರ್ಷ, ಕ್ಯಾತೇದೇವರಹಟ್ಟಿ ಶಿರಾ ತಾಲ್ಲೂಕು,ತುಮಕೂರು ಜಿಲ್ಲೆ.

೬. ಓದೋವೀರಣ್ಣ, ೪೮ವರ್ಷ, ಎತ್ತಪ್ಪನಹಟ್ಟಿ,ತುಮಕೂರು ಜಿಲ್ಲೆ.

೭. ಕರೆಕ್ಯಾತಪ್ಪ ,(ಗೌಡ) ೬೦ವರ್ಷ ತುಮಕೂರು ಜಿಲ್ಲೆ.

೮. ದಾಸಪ್ಪ, ೫೨ವರ್ಷ, ಲಕ್ಕೇನಹಳ್ಳಿ,ತುಮಕೂರು ಜಿಲ್ಲೆ.

೯. ವಕ್ತೃ:-ಪೂಜಾರಿ ಚಿಕ್ಕಣ್ಣ, ೬೦ವರ್ಷ, ಸೋಮನೋರ ಗೊಲ್ಲರು,ಶಿರಾ ತಾಲ್ಲೂಕು,ಗಾಣದಾಳು ಸೋಮೇನಹಳ್ಳಿ.

೧೦. ಮೀರಾಸಾಬಿಹಳ್ಳಿ ಶಿವಣ್ಣ, ಬುಡಕಟ್ಟು ಈರಗಾರರ ಕತೆಗಳು ಪುಟ,೧೭.

೧೧. ಚಿಕ್ಕಣ್ಣ ಶಿಕ್ಷಕರು ೬೦ವರ್ಷ ಗಾಣದಾಳು ಶಿರಾ ತಾಲ್ಲೂಕು.

೧೨. ನಾಗಪ್ಪ ೫೦ವರ್ಷ ಗಾಣದಾಳು ಗೊಲ್ಲರಹಟ್ಟಿ ಶಿರಾ ತಾಲ್ಲೂಕು.

೧೩. ಚಂದ್ರು ಕಾಳೇನಹಳ್ಳಿ, ಸೋಲಿಗ ಸಂಸ್ಕೃತಿ, ಪುಟ ೧೧೮ ಮತ್ತು ೧೧೯.

೧೪. ಕೇಶವನ್ ಪ್ರಸಾದ್, ಸೋಲಿಗರು ಒಂದು ಅಧ್ಯಯನ ಪುಟ-೧೧.

೧೫. ರಾಮಲಿಂಗಪ್ಪ ಪೂಜಾರಿ, ೫೮ ವರ್ಷ, ಕ್ಯಾಸನಗೆರೆ ಕೂಡ್ಲಿಗಿ ತಾಲ್ಲೂಕು ಬಳ್ಳಾರಿ ಜಿಲ್ಲೆ.

******

## ಅಧ್ಯಾಯ : ನಾಲ್ಕು

# ಕ್ಯಾತಪ್ಪ ದೈವ ಮತ್ತು ಮೌಖಿಕ ಸಾಹಿತ್ಯದ ಸತ್ಯಾವಲೋಕನ

೪.೧. ಕ್ಯಾತಪ್ಪನ ಸಾಹಿತ್ಯದ ಚಾರಿತ್ರಿಕ ಚಹರೆಗಳು

೪.೨. ಪುರಾಣಗಳು ಮತ್ತು ಐತಿಹ್ಯಗಳ ಯಾದೃಚ್ಛಿಕತೆ

೪.೩. ಮೌಖಿಕ ಸಾಹಿತ್ಯದಲ್ಲಿ ಕ್ಯಾತಪ್ಪದೈವದ ಬಾಹುಳ್ಯತೆ

೪.೪. ಜನಪದ ಗೀತೆಯಲ್ಲಿ ಕ್ಯಾತಪ್ಪದೈವದ ವ್ಯಾಪಕತೆಯ ಸಾರ

೪.೫. ಜನಪದರಲ್ಲಿ ಕ್ಯಾತಪ್ಪದೈವದ ಸಂವೇದನಶೀಲ ಕಥನಗಳು

ಅಧ್ಯಾಯ ೪

# ಕ್ಯಾತಪ್ಪದೈವ ಮತ್ತು ಮೌಖಿಕ ಸಾಹಿತ್ಯದ ಸತ್ಯಾವಲೋಕನ

## ೪.೧ ಕ್ಯಾತಪ್ಪನ ಸಾಹಿತ್ಯದ ಚಾರಿತ್ರಿಕ ಚಹರೆಗಳು

ಕಾಡುಗೊಲ್ಲರ ಕ್ಯಾತೇಲಿಂಗನ ಗೀತೆಯಲ್ಲಿ ದೊರೆಯುವ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದಾಗಿದೆ. ಗೀತೆಯ ಉದ್ದಗಲಕ್ಕೂ "ಭರಮಣ್ಣನಾಯಕನನ್ನು 'ಬರುಮಪ್ಪ ಎಂದು ಸಂಬೋಧಿಸಲಾಗಿದೆ. 'ಸಿಂತಕಲ್ಲು ದೊರೆ' ಅಂತಲೂ ಹೇಳಿದೆ. ಚಿತ್ರದುರ್ಗವನ್ನು 'ಸಿಂತರಕಲ್ಲು' ಅಂತಲೂ, ಕೋಟೆ ಪ್ರದೇಶವನ್ನು 'ಮೇಲುದುರ್ಗ' ಅಂತಲೂ ಕರೆದಿದ್ದು, 'ಅಂತರಕಲ್ಲು ಮ್ಯಾಲೆ ಸಿಂತರಕಲ್ಲು' ಎಂದಿರುವುದು ವಿಶೇಷ. ಇಲ್ಲಿಯ ಸಿಂತರಕಲ್ಲು ಎಂಬುವುದು ಬೆಟ್ಟ(ಕೋಟೆ) ಮತ್ತು ಪೇಟೆಗಳನ್ನು ಒಳಗೊಂಡಿತ್ತು. ನಗರದ ಪುರ ವಿಭಾಗಗಳಲ್ಲಿ ರಾಗಿಪೇಟೆ, ಅಕ್ಕಿಪೇಟೆ, ಸೊಪ್ಪಿನಪೇಟೆಗಳು ಅನಂತರ ಕೆಳಗೇರಿ, ಮೇಗೇರಿ, ಅರೇರಕೇರಿ, ಒಕ್ಕಲಿಗರಕೇರಿಗಳು; ಹಾಗೂ ಬಾಗಿಲುಗಳಲ್ಲಿ ಸಂತೆಬಾಗಿಲು, ಗಾರೆಬಾಗಿಲು, ಗಾರೆಗಚ್ಚಿನ ಬಾಗಿಲುಗಳ ಉಲ್ಲೇಖಗಳು, ಗಾರೆ ಚಾವಡಿಯ ಪ್ರಸ್ತಾಪವೂ ಬರುತ್ತದೆ. 'ರಾಯಸಿಂತರಕಲ್ಲು ಏರಿಸಿದ ಕಲ್ಲುಗಸೆ; ಏರ್ಲಾರದವರು ಕೆಳಗವ್ರೆ' ಎಂಬಲ್ಲಿ ದುರ್ಗದ ಕೋಟೆ ಅಬೇಧ್ಯವಾದುದೆಂಬ ಧ್ವನಿ ಕಟ್ಟಿಕೊಡುತ್ತದೆ."[೧]

ಕ್ಯಾತೇಲಿಂಗ ಮತ್ತು ಗೌರಸಂದ್ರದ ಮಾರಕ್ಕ ಇವರು ಅಣ್ಣ–ತಂಗಿಯರು. ತನ್ನ ಅಣ್ಣ ಕ್ಯಾತೇಲಿಂಗ(ನಿಂಗಣ)ನನ್ನು ಹೊತ್ತೊಯ್ದು ಭರಮಣ್ಣನಾಯಕನನ್ನು ಶಿಕ್ಷಿಸಲು ಆಕೆ ಸಿದ್ದಗೊಳ್ಳುತ್ತಾಳೆ. ಮಾರಕ್ಕ ದುರ್ಗದ ಪಟ್ಟಣಕ್ಕೆ ಬೇನೆ ಹರಡಲು ಮುಂದಾಗುತ್ತಾಳೆ.

ದುರ್ಗದ ಮೊದಲ ಸುತ್ತು ಕೋಟೆಯ ಹೆಬ್ಬಾಗಿಲುಗಳಲ್ಲಿ ಮುಖ್ಯವಾದ ಸಂತೆಬಾಗಿಲನ್ನು ದಾಟದ ಮಾರಕ್ಕ ಮೇಲುದುರ್ಗವನ್ನೇರುತ್ತಾಳೆ. ಕೋಟೆ-ಕೊತ್ತಲುಗಳಿಗೆ ಕಾಲೂರಿ ಪೇಟೆಯತ್ತ ಕಣ್ಣು ಬಿಡುತ್ತಾಳೆ; ಕೇಕೆ ಹೊಡೆಯುತ್ತಾಳೆ. ಇದರಿಂದ ಊರಿನ ಶರಣರು ನಡುಗಿ ಹೋಗುತ್ತಾರೆ. ಆಕೆಯ ಆರ್ಭಟಕ್ಕೆ ಬೆದರಿ ಊರುಬಿಟ್ಟು ಕಣಿವೆಯವರೆಗೆ ಓಡಿಹೋಗುತ್ತಾರೆ. ರಾಗಿಪೇಟೆ, ಅಕ್ಕಿಪೇಟೆ, ಅರೇರ ಕೇರಿ, ಒಕ್ಕಲಿಗರ ಕೇರಿ, ಮೊದಲಾದೆಡೆಗಳಲ್ಲೂ ಸಂಚರಿಸಿ; ಜನರಿಗೆ ಸಾವನ್ನುಂಟು ಮಾಡುತ್ತಾಳೆ. ಕೆಳಗೇರಿ ಹೊಕ್ಕಾರೆ ಮೇಗೇರಿ ಹಾಳಾದವು, ತಾನೊಂದು ಕೇರಿ ಹೋಗುತ್ತಾಳೆ, ಸುಡುಗಾಡಿಗೆ ನೂಕಿಸುತ್ತಾಳೆ; ಅರೇರಕೇರಿಯಿಂದ ಆರುಬಂಡಿ ಹೆಣಗಳು ಹಾಗೂ ಒಕ್ಕಲಿಗರ ಕೇರಿಯಿಂದ ಎಂಟುಬಂಡಿ ಹೆಣಗಳು ಸುಡುಗಾಡಿಗೆ ಸಾಗುವಂತೆ ಮಾಡುತ್ತಾಳೆ. ರಾಗಿಪೇಟೆಗೆ ಹದಿನಾರು ಸಾವಿರ ಬಂಡಿಗಳು ಬಂದು ಸುಡುಗಾಡಿಗೆ ಹೆಣಗಳನ್ನು ಸಾಗಿಸಿದರೆ, ಅಕ್ಕಿಪೇಟೆಗೆ ಹನ್ನೆರಡು ಸಾವಿರ ಬಂಡಿ ಹೆಣಗಳು ಸಾಗುತ್ತವೆ.

ಕಾಡುಗೊಲ್ಲರ ಮುತ್ತಿನಂಥಾ ದೇವರನ್ನು ಮುಟ್ಟಿದ್ದಕ್ಕೆ ಹಾಗೂ ಕೆಂಡದಂಥಾ ದೇವರನ್ನು ತಂದುದ್ದಕ್ಕೆ ಭರಮಣ್ಣನಾಯಕನಿಗೆ ಒದಗಿಬಂದ ಕಷ್ಟಗಳು ಹಲವಾರು. ಆತನಿಗೆ ತನ್ನ ಪಟ್ಟದ ರಾಣಿ ನಾಗತಿ ಹಾಗೂ ಮಕ್ಕಳನ್ನು ಕಳೆದುಕೊಳ್ಳುವಂಥಾ ಸಮಸ್ಯೆ ಎದುರಾಗುತ್ತದೆ. ಕಡೆಯಲ್ಲಿ ದೇವರಿಗೆ ಸೋತು ಶರಣಾದ ಭರಮಣ್ಣ ತನ್ನಮಡದಿ ಮಕ್ಕಳ ಪ್ರಾಣಗಳು ಉಳಿದುವಾದರೆ ಛತ್ರಿ, ಒಡವೆಗಳನ್ನು ಸಮರ್ಪಿಸುವುದಾಗಿ ಬೇಡಿಕೊಳ್ಳುತ್ತಾನೆ. ಆದರೆ ಕ್ಯಾತೇಲಿಂಗ ಅಷ್ಟು ಸುಲಭದಲ್ಲಿ ಸಮ್ಮತಿಸುವುದಿಲ್ಲ. ಮಾತ್ರವಲ್ಲ, ದುರ್ಗದಿಂದಿಳಿಯಲು ಸಹ ನಿರಾಕರಿಸುತ್ತಾನೆ. ಪಟ್ಟದಾನೆ, ಪಟ್ಟದ ಕುದುರೆ(ಲಾಯದ ಕುದುರೆ) ಅಂದಣ, ರಾಮಸಾಲೆ ಹೊನ್ನು, ರಸಸಾಲೆ ಹೊನ್ನು, ಪಟ್ಟಸಾಲು ಅನ್ನ ಇವೆಲ್ಲವುಗಳನ್ನು ಅಪೇಕ್ಷಿಸುತ್ತಾನೆ. ಭರಮಣ್ಣ ಇದೆಲ್ಲದಕ್ಕೂ ಸಮ್ಮತಿಸುತ್ತಾನೆ. ದೊರೆ ಭರಮಣ್ಣನಾಯಕ ಗಾರೆಗಚ್ಚಿನ ಬಾಗಿಲಲ್ಲಿ ಹಚ್ಚಡ(ಶಾಲು)ವನ್ನು ಹಾಸಿ ದೇವರಿಗೆ ಶರಣೆನ್ನುತ್ತಾನೆ. ದುರ್ಗದಿಂದಿಳಿಯುವಂತೆ ಕೋರುತ್ತಾನೆ. ಕಟ್ಟಕಡೆಗೆ 'ದುರುಗ ಇಳಿದಾನೆ ಗಡಬಿಡಿ ಹೊಯ್ದಾನೆ; ಕಡುಗಾದ ಕಾಲಾ ತಿರುವೂತ ನಿಂಗಣ್ಣ ನೆಡುದಾನೆ ರಾಯರಿಗೆ ಎದುರಾಗಿ'ಎಂಬುದಾಗಿ ಗೀತೆಗಳಲ್ಲಿ ಚಿತ್ರಿತವಾಗಿದೆ.

ಗೌರಸಂದ್ರದ ಮಾರಕ್ಕಳ ಪ್ರಸಂಗವು ಭರಮಣ್ಣನಾಯಕನ ಆಳ್ವಿಕೆಯಲ್ಲಿ ದುರ್ಗದ ಮೇಲೆ ಎರಗಿದ ಯಾವುದೋ ರೋಗದಿಂದ ಸಹಸ್ರಾರು ಮಂದಿ ಮಡಿದು ಹೋದ ಸಂದರ್ಭದ ಸೂಚನೆ ಇದ್ದಿರಬಹುದೇ? ಇದು ನಿಜವಾದರೆ ದುರ್ಗದ ಚರಿತ್ರೆಯಲ್ಲಿ ಇದೊಂದು ಅಪಮಾನದ ಪ್ರಸಂಗ ಎನಿಸಿಕೊಳ್ಳುತ್ತದೆ. ರೋಗದ ಉಪದ್ರವದಿಂದ ಬೇಸತ್ತ ಜನರು ಕಣಿವೆಗೆ ಸ್ಥಳಾಂತರಗೊಂಡರಂತೆ. ಇಲ್ಲಿಯ ಕಣಿವೆ ಕುಂಚಿಗಹಾಳ್

ಕಣಿವೆ ಆಗಿರಬಹುದು. ಆಗ ಚಲಾವಣೆಯಲ್ಲಿದ್ದ ನಾಣ್ಯ ಅಥವಾ ವರಹಗಳ ಪೈಕಿ ರಾಮಸಾಲೆಹೊನ್ನು (ರಾಮ ಟಂಕಿಸಿದ ವರಹ) ರಸಸಾಲೆ ಹೊನ್ನುಗಳ ಪ್ರಸ್ತಾಪವಿದೆ ಇಲ್ಲಿ. ಒಟ್ಟಿನಲ್ಲಿ ಈ ಗೀತೆಗಳಲ್ಲೂ ಜನಪದರು ಗ್ರಹಿಸಿಕೊಡಿರುವ ವಿವರಗಳು ದುರ್ಗದ ಚರಿತ್ರೆ ನಿರ್ಮಾಣಕ್ಕೆ ಹೊಸ ಆಯಾಮವನ್ನು ಒದಗಿಸುತ್ತವೆ.

ಅಂಬಳಿಕೆ ಹಿರಿಯಣ್ಣ ಅವರು ಪ್ರಕಟಿಸಿರುವ 'ಕಾಡುಗೊಲ್ಲರ ಜನಪದ ಗೀತೆಗಳು'ಸಂಪಾದನ ಕೃತಿಯಲ್ಲಿ ಕಾಡುಗೊಲ್ಲರಿಗೆ ಸಂಬಂಧಿಸಿದ ಮೌಖಿಕ ಸಾಹಿತ್ಯದಲ್ಲಿ ಮುಖ್ಯವಾಗಿ ಸಾಮಾಜಿಕ ಹಾಗೂ ಧಾರ್ಮಿಕ ಗೀತೆಗಳಲ್ಲಿ ಕ್ಯಾತೆಲಿಂಗನ ಜೊತೆಗೆ ಬಿಚ್ಚುಗತ್ತಿ ಭರಮಣ್ಣನಾಯಕನ ವಿಷಯ ವಿಸ್ತಾರವಾಗಿ ಬರುತ್ತದೆ. ಚಿತ್ರದುರ್ಗದ ಸಾಂಸ್ಕೃತಿಕ ಇತಿಹಾಸದಲ್ಲಿ ಇದೊಂದು ಅಪರೂಪದ ಉದಾಹರಣೆ ಎನ್ನಬಹುದು. ಕ್ಯಾತೇಲಿಂಗ (ನಿಂಗಣ್ಣ)ನ ಅನನ್ಯ ಭಕ್ತನಾಗಿ ಸೇವೆಸಲ್ಲಿಸಿದ ಚಿಕ್ಕಮಾಯಸಂದ್ರದ ಕರಿಯಣ್ಣನ ಪ್ರಸಂಗವು ಈ ಗೀತೆಗಳಲ್ಲಿ ಮನೋಜ್ಞವಾಗಿ ಮೂಡಿಬಂದಿರುವುದು ವಿಶೇಷ. ತನಗೆ ಒಲಿದು ಬಂದ ಕ್ಯಾತೆಲಿಂಗನನ್ನು ರಕ್ಷಿಸುವ ಕಾರ್ಯದಲ್ಲಿ ಚಿತ್ರದುರ್ಗದ ದಂಡಿನೊಡನೆ ಹೋರಾಡಿ ಪ್ರಾಣ ತ್ಯಾಗ ಮಾಡುತ್ತಾನೆ ಕರಿಯಣ್ಣ. ಭರಮಣ್ಣನಾಯಕನ ಅಧೀನಕ್ಕೆ ಸೇರಿಹೋದ ಕ್ಯಾತೆಲಿಂಗನನ್ನು ಮರಳಿ ಪಡೆಯಲು ಪ್ರಯತ್ನಿಸುವ ಕಾಡುಗೊಲ್ಲರು ತಮ್ಮ ಕಾರ್ಯದಲ್ಲಿ ವಿಫಲರಾಗುತ್ತಾರೆ. ಸ್ವಯಂ ಕ್ಯಾತೇಲಿಂಗನೇ ಕಿನ್ನರಿಜೋಗಿ ವೇಷತಾಳಿ, ಗೌರಸಂದ್ರದ ಮಾರಕ್ಕಳಿಗೆ ದುರ್ಗದ ದಂಡನ್ನು ನಾಶಮಾಡಲು ಆದೇಶಿಸುತ್ತಾನೆ. ಮಾರಕ್ಕ ಹಾಗೆಯೇ ಮಾಡುತ್ತಾಳೆ. ಮಾರಕ್ಕ ಕೊರವಂಜಿ ವೇಷಧರಿಸಿ ಭರಮಣ್ಣನಾಯಕನಿಗೆ ಹಿತವಾದ ಕಣಿಯನ್ನು ನುಡಿದು, ಕಾಡುಗೊಲ್ಲರಿಗೆ ಕ್ಯಾತೇಲಿಂಗನನ್ನು ಮರಳಿಸುವ ಕಾರ್ಯದಲ್ಲಿ ಯಶಸ್ವಿಯಾಗುತ್ತಾಳೆ. ಭರಮಣ್ಣನಾಯಕನು ಕ್ಯಾತೇಲಿಂಗನ ಭಕ್ತನಾಗಿ ಮಾರ್ಪಡುತ್ತಾನೆ.

ಬಿಚ್ಚಗತ್ತಿ ಭರಮಣ್ಣನಾಯಕನ ದಂಡು ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯ ಪುರ್ಲೆಹಳ್ಳಿ ಬಳಿ ವಸತಿದಿಬ್ಬದಲ್ಲಿ ನೆಲೆಯೂರಿದ್ದ ಕ್ಯಾತೆಲಿಂಗ(ಕೇದಾರಲಿಂಗ)ನನ್ನು ವಶಪಡಿಸಿಕೊಳ್ಳಲು ಹೋದದ್ದನ್ನು 'ಕ್ಯಾತೆಲಿಂಗನ ಸೋಬಾನೆ ಪದಗಳಲ್ಲಿ ವ್ಯಕ್ತಗೊಂಡಿರುವುದನ್ನು ಮೀರಾಸಾಬಿಹಳ್ಳಿ ಶಿವಣ್ಣ ಅವರು ತಮ್ಮ 'ದುರುಗ ಜಾನಪದ'ದಲ್ಲಿ ಉಲ್ಲೇಖಿಸಿದ್ದಾರೆ. ಆದರೆ ಯಾವ ಕಾರಣಕ್ಕಾಗಿ ಭರಮಣ್ಣನಾಯಕ ಈ ದೇವರನ್ನು ವಶಪಡಿಸಿಕೊಳ್ಳಲು ಹೋದನೆಂಬುದು ಸ್ಪಷ್ಟವಾಗದಿದ್ದರೂ, ಬಹುಶಃ ಬಲಿಷ್ಠರಾಗಿದ್ದ ಗೊಲ್ಲರ ಸೊಕ್ಕನ್ನು ಬಗ್ಗುಬಡಿಯಲು ಅವರ ದೇವರನ್ನು ವಶಪಡಿಸಿಕೊಳ್ಳುವುದೇ ಸರಿಯಾದ ದಾರಿ ಎಂದು ಭಾವಿಸಿರಬಹುದೇ ಎಂಬ ಜಿಜ್ಞಾಸೆ ಅವರದು. ಕ್ಯಾತೆದೇವರ ರಕ್ಷಣೆಯನ್ನು ಹೊತ್ತವನು ಕರಿಯಣ್ಣ. ಈತನನ್ನು ಕೊಂದು ದೇವರನ್ನು

ವಶಪಡಿಸಿಕೊಂಡ ಭರಮಣ್ಣನಾಯಕ ಅನಂತರ ನಾನಾ ಕಷ್ಟ-ನಷ್ಟಗಳಿಗೀಡಾಗಿ, ಪುನಃ ದೇವರನ್ನು ಗೊಲ್ಲರಿಗೆ ವಹಿಸಿಕೊಟ್ಟು ಆ ದೇವರ ಪರಮ ಭಕ್ತನಾಗುತ್ತಾನೆನ್ನುತ್ತದೆ ಈ ಸೋಬಾನೆಪದ.

*"ಸಿಕ್ಕ ಸಿಂತರುಕಲ್ಲು ಗಚ್ಚಿನ ಬಾಗಲಾಗೆ*

*ಮತ್ತಿಲ್ಲಿ ನಿಂಗಣ್ಣ ದುರುಗಾದಲ್ಲಿ-ಬರಮಪ್ಪ*

*ಹಚ್ಚುಡುವನ್ಹಾಸಿ ಸರುಣಂದ"*

ಜಾನಪದ ಮಾನವಶಾಸ್ತ್ರದ ಮುಖ್ಯವಾದ ಒಂದು ಅಂಗ. ಜನ ಸಂಸ್ಕೃತಿಯ ವೈಶಿಷ್ಟತೆಗಳನ್ನು ಉಳಿಸಿಕೊಳ್ಳುವ ಸಲುವಾಗಿ ರಾಷ್ಟ್ರೀಯ ಪ್ರಜ್ಞೆಯುಳ್ಳ ಯೂರೋಪಿನ ವಿದ್ವಾಂಸರು ಅವನ್ನೆಲ್ಲಾ ಉಳಿಸಿಕೊಳ್ಳುವ ಕಾರ್ಯದಲ್ಲಿ ನಿರಂತರವಾಗಿ ತೊಡಗಿಸಿಕೊಂಡ ಅಧ್ಯಯನದ ಫಲವೇ ಇಂದು ಬೆಳೆದು ನಿಂತ ಜಾನಪದವಾಗಿದೆ. ಅಬೆದುಬೊಯ್‌ರವರು ಭಾರತೀಯ ಸಂಸ್ಕೃತಿಯನ್ನು ಅರಿಯುವ ಸಲುವಾಗಿ ಮಹತ್ವದ ಕೃತಿಯೊಂದನ್ನು ಬರೆದು ಜಾನಪದದ ಬಗ್ಗೆ ಬೆಳಕು ಚೆಲ್ಲಿದರು. ಜಾನಪದ ಸಂಸ್ಕೃತಿಯೆಂದರೆ "ಜನರು ಬದುಕುವ ಬಗೆಹೇಗೆ ಎಂಬುದನ್ನು ಈ ಹಿಂದೆಯೇ ನಿರ್ವಹಿಸಿಕೊಂಡಿದೆ. ಸಂಸ್ಕೃತಿ ನಿರ್ವಚನ ಎಂಬುದು ಮೂಲತಃ ಭಾಷಾ ವಿಜ್ಞಾನದ ಪರಿಭಾಷೆ. ನಂತರ ಅದು ಜಾನಪದ ಮಾನವಿಕ ವಿಜ್ಞಾನಗಳ ಕೇಂದ್ರವೂ ಆಗಿದೆ."[೨] ಪರಂಪರೆಯ ಸಂಸ್ಕೃತಿಯನ್ನು ಗುರುತಿಸುವಲ್ಲಿ ಆಚಾರ-ವಿಚಾರ, ನಂಬಿಕೆ, ಸಂಪ್ರದಾಯ, ಕಲೆ, ಸಾಹಿತ್ಯ ಅವುಗಳ ಬೆಳವಣಿಗೆಯನ್ನು ಕಂಡುಕೊಳ್ಳಲು ಈ ಎರಡು ನೆಲೆಗಳಲ್ಲಿ ಚಿಂತಿಸಬಹುದು. ಬಾಯಿಂದ ಹರಿದು ಬಂದದ್ದನ್ನ 'ಸರಳ' ಜಾನಪದ ಎಂದು ಕರೆಯುತ್ತೇವೆ.

ಸಂಸ್ಕೃತಿಯಲ್ಲಿ ಎರಡು ಬಗೆಗಳಿದ್ದು ಅದರಲ್ಲಿ ಮೊದಲನೆಯದಾಗಿ-'ಅಲಕ್ಷಿತಸಂಸ್ಕೃತಿ', ಎರಡನೆಯದು 'ನಾಗರಿಕ ಶಿಷ್ಟ ಸಂಸ್ಕೃತಿ' ಎನ್ನಬಹುದು. ಆದ್ದರಿಂದ, "ಜನಪದ ಸಾಹಿತ್ಯವೆಂಬುದು ವ್ಯಕ್ತಿನಿಷ್ಠವಲ್ಲ; ಅದು ಜನಪದ ಜೀವನದ ವಾಚಿಕ ರೂಪದ ಸಮಷ್ಠಿ ಅಭಿವ್ಯಕ್ತಿ. ಅದರ ಉಗಮಸ್ಥಾನ ವ್ಯಕ್ತಿಯಲ್ಲ, ಜನಪದ (ಪೋಕ್-ಏರಿಯಾ). ಈ ಸಾಹಿತ್ಯದ ಮೂಲ ಪ್ರೇರಣೆ ಹಾಗೂ ಕಾರಣ ವ್ಯಷ್ಠಿ ಪ್ರಜ್ಞೆಯಲ್ಲ; ಅದು ಸಮುದಾಯಿಕ ಸಮಷ್ಠಿ ಪ್ರಜ್ಞೆ. ಜನಪದ ಸಾಹಿತ್ಯವೆಂಬುದು ಒಂದು ವಿಶಿಷ್ಟ ಜನಪದ ಸಮಷ್ಠಿಕ್ರಿಯೆ ಹಾಗೂ ಆಯಾ ಜನಪದಗಳ ಖಾಸಗಿ ಕ್ರಿಯೆ (ಎಸ್ಟೆರಿಕ್ ಫಂಕ್ಷನ್)."[೩] ಜನಪದ ಸಾಹಿತ್ಯ, ಜನಪದ ಜೀವನ (ಪೋಕ್ ಲೈಪ್)ದ, ಜನಪದ ಸಂಸ್ಕೃತಿ (ಪೋಕ್ ಕಲ್ಚರ್)ಯ ಅಂಗವಾಗಿ ಬೆಳೆದಿರುವಂತಹದ್ದು. ಜಾನಪದವು ತನ್ನನ್ನು ತಾನು ನಿರ್ವಚಿಸಿಕೊಳ್ಳುತ್ತಲೇ ಸಂಸ್ಕೃತಿಯನ್ನು ಸಹ ನಿರ್ವಚಿಸುವ ಮಹತ್ವದ ಕೆಲಸವನ್ನು ಮಾಡುತ್ತದೆ.

ಜಾನಪದವು ಸಂಸ್ಕೃತಿಯನ್ನು ಭಿನ್ನವಾಗಿ ನಿರ್ವಚಿಸಿಕೊಳ್ಳುವ ಯತ್ನವನ್ನು ಮಾಡುತ್ತಲೇ ಬಂದಿದೆ. ಮಾನವನ ವರ್ತನೆಗಳ ಮೊತ್ತವನ್ನು ಸಂಸ್ಕೃತಿ ಎಂದು ಕರೆದುಕೊಳ್ಳುವ ಮಾನವಶಾಸ್ತ್ರೀಯ ತಿಳಿವಳಿಕೆ ಜಾನಪದದಲ್ಲೂ ಮುಖ್ಯವಾಗುತ್ತದೆ. ಜಾನಪದವು ತನ್ನನ್ನು ತಾನು ನಿರ್ವಚಿಸಿಕೊಳ್ಳುವ ಸಂದರ್ಭದಲ್ಲಿ ಕಾಲ ಕಾಲಕ್ಕೆ ತನಗೆ ಅಗತ್ಯವೊ, ಅನಗತ್ಯವೋ ಅದು ಸಂಸ್ಕೃತಿಯನ್ನು ನಿರ್ವಚಿಸಿಕೊಳ್ಳುತ್ತದೆ. ಸರಳ ಜಾನಪದ ಎನ್ನುವುದರಲ್ಲಿ ಧಾರ್ಮಿಕ ಆಚರಣೆಗಳು, ಪುರಾಣಕತೆ, ಗೀತೆ, ಒಗಟು ಮುಂತಾದ ಜೀವನಾನುಭವ ಅಭಿವ್ಯಕ್ತಿಯನ್ನು ಕಾಣುತ್ತೇವೆ. ಹೀಗೆ  ಜನಪದ ಸಂಸ್ಕೃತಿಯ ಸ್ವರೂಪ ಅರಿಯಲು ಸಮಷ್ಠಿ ಮನಸ್ಸಿನ ನೇರ ಅಭಿವ್ಯಕ್ತಿಯ ಜನಪದ ಸಾಹಿತ್ಯಕ್ಕೆ ಬರಬೇಕು. ಅಲ್ಲಿಯ ಜೀವನದಲ್ಲಿ ಶ್ರದ್ಧೆ, ಪರಸ್ಪರರಲ್ಲಿ ಪ್ರೀತಿ, ಪ್ರೇಮ, ಸಹಾನುಭೂತಿ, ಪ್ರಕೃತಿ ಜೊತೆಗಿನ ಸಂಬಂಧಗಳು ಅನ್ಯೋನ್ಯವಾಗಿ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು.

"ಜನಪದರ ಬದುಕಿನಲ್ಲಿ ನಿತ್ಯ ಕಾಣುವಂತಹ ಪ್ರಕೃತಿಯ ಶಕ್ತಿಯನ್ನು ಅಪಾರ ನಂಬಿಕೆಯಿಂದ ದೈವತ್ವಕ್ಕೇರಿಸಲಾಯಿತು. ಅದರಲ್ಲಿ ಮುಖ್ಯವಾಗಿ ಬೆಟ್ಟ-ಗುಡ್ಡ, ನದಿ-ಕಣಿವೆ ಹಾಗೂ ಕಾಡಡವಿಗಳಲ್ಲಿ ವಾಸಿಸುವಂತಹ ಬುಡಕಟ್ಟು ಸಮುದಾಯದವರು ವಿಸ್ಮಯವಾದ ನಿಸರ್ಗವನ್ನು ಕಂಡು ಮುಖಾಮುಖಿ ಸಂಘರ್ಷಕ್ಕೆ ಇಳಿಯದೇ ಹೊಂದಾಣಿಕೆ ಮಾಡಿಕೊಂಡು ಶಕ್ತಿ ಆರಾಧನೆಗೆ ಮೊದಲು ಮಾಡಿದರು."[೨] ದುಷ್ಟಶಕ್ತಿಗಳಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ದೆವ್ವ ಮೊದಲಾದುವುಗಳನ್ನು ಕಲ್ಪಿಸಿಕೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ದೈವಾರಾಧನೆ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆಯಿತು. ದೇವರನ್ನು ಒಲಿಸಿಕೊಳ್ಳಲು ದೇವರ ಪ್ರಾರ್ಥನೆ, ಮಾಟ-ಮಂತ್ರ ಹಾಗೂ ವರ್ಣನೆಗಳ ಸಾಹಿತ್ಯ ನಿರ್ಮಾಣಗೊಂಡಿತು. ದೈವರಾಧನೆಗೆ ಸಂಬಂಧಿಸಿದಂತಹ ಧಾರ್ಮಿಕ ಆಚರಣೆ, ನಂಬಿಕೆ, ಸಂಪ್ರದಾಯಗಳು ಸಾಮಾಜಿಕ ಜೀವನದಲ್ಲಿ ಅಚ್ಚಳಿಯದೆ ನೆಲೆಸಿದವು. ತಾವು ನಂಬಿದ ದೇವ-ದೇವತೆಯರನ್ನು ತಮ್ಮೊಂದಿಗೆ ಬದುಕಿ ಜನಸಮುದಾಯದ ರಕ್ಷಣೆ, ಪಶುಗಳ ಸಂರಕ್ಷಣೆಗಾಗಿ ಹೋರಾಡಿದ ವ್ಯಕ್ತಿಗಳನ್ನು ಕುರಿತಂತೆ ತಾವು ಕಟ್ಟಿದ ಹಾಡು, ಕಥೆಗಳು ಹಾಗೂ ಸೃಷ್ಠಿ ಪುರಾಣಗಳು ಅದ್ಭುತ ಕಲ್ಪನಾ ವೈಖರಿಯಿಂದ ಜನಪದ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ.

ಐತಿಹಾಸಿಕ ಪ್ರದೇಶದಲ್ಲಿ ಜನಪದ ಗೀತೆಗಳು ಹುಟ್ಟುವಾಗ ಅನಿವಾರ್ಯವಾಗಿ ಆಯಾ ಪ್ರದೇಶದ ಚರಿತ್ರೆಯ ಎಳೆಗಳನ್ನೆಲ್ಲ ಅಂಟಿಸಿಕೊಂಡೇ ಜನ್ಮತಾಳುತ್ತವೆ. ಒಮ್ಮೊಮ್ಮೆ ತೀರ ಆಕಸ್ಮಿಕವಾಗಿ ಇಲ್ಲವೆ ಉದ್ದೇಶಿತವಾಗಿ ನಡೆದ ಘಟನೆಗಳನ್ನೇ ಮುಖ್ಯವಸ್ತುವನ್ನಾಗಿ ಹೊಂದಿ ಹುಟ್ಟಿಕೊಂಡಿರುತ್ತವೆ. ಹೀಗಾಗಿ ನಾಡಿನ ಯಾವುದೇ ಭಾಗದಲ್ಲಿ ಕೋಲುಪದಗಳಿಂದ ಹಿಡಿದು ದೀರ್ಘ ಪ್ರಮಾಣದ ಕಾವ್ಯಗಳವರೆಗೆ ದಕ್ಕುವ ಸಾಹಿತ್ಯವನ್ನೆಲ್ಲ

ಇಟ್ಟುಕೊಂಡು ಐತಿಹಾಸಿಕವಾಗಿ ನೋಡಬೇಕಾದುದರ ಅಗತ್ಯವೂ ಇದೆ. ಆಗ ಇತಿಹಾಸಕ್ಕೆ ಜನಪದ ಸಾಹಿತ್ಯವೂ ಕೂಡ ಪ್ರಮುಖ ಆಕರವಾಗಿ ನಿಲ್ಲಬಲ್ಲದು. ನಾಡಿನ "ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಯಲ್ಲಿ ಅತಿದಟ್ಟವಾಗಿ ನೆಲೆಸಿರುವ ಮ್ಯಾಸಬೇಡ ಹಾಗೂ ಕಾಡುಗೊಲ್ಲರು ತಮ್ಮ ಬುಡಕಟ್ಟು ಸಂಸ್ಕೃತಿಯಿಂದ ಜೀವಂತ ಜಾನಪದ ಸಂಸ್ಕೃತಿಯ ಕಣಜವಾಗಿದ್ದಾರೆ. ತಮ್ಮ ದೈವಗಳ ನೆಲೆಗಳು, ಆಚಾರ ವಿಚಾರಗಳು, ಸಂಪ್ರದಾಯಗಳು, ಜನಪದ ಸಾಹಿತ್ಯಕ್ಕೆ ಸಮೃದ್ಧ ಕಾಣಿಕೆ ನೀಡಿವೆ. ಅದರಲ್ಲಿ ಕಾಡುಗೊಲ್ಲ ಸಮುದಾಯದವರು ತಾವು ಕಟ್ಟಿಕೊಂಡಿರುವ ಕ್ಯಾತಪ್ಪನ ಸೃಷ್ಠಿ ಪುರಾಣ, ಕತೆ, ಹಾಡು ಮತ್ತು ಆರಾಧನೆ ಕುರಿತಾದ ಅಂಶಗಳ ಜೊತೆ ಅವರ ಮೌಖಿಕ ಕಾವ್ಯಗಳಲ್ಲಿ ದೇವರ ವರ್ಣನೆಯೇ ಪ್ರಮುಖವಾಗಿರುತ್ತದೆ."[೫]

ಅಲ್ಲದೆ ಸೋಬಾನೆಪದ, ಮಂಗಳಾರತಿ, ಗಗ್ಗರ ಪದ, ದೇವರ ಮೇಲಿನ ಪದಗಳಲ್ಲಿ ಪುನರುಕ್ತಿಯೂ ಸರ್ವೇ ಸಾಮಾನ್ಯವಾಗಿರುತ್ತದೆ. ಅನೇಕ ಸಂದರ್ಭಗಳಲ್ಲಿ ಜನಪದ ಗೀತೆಗಳು ಹಾಗೂ ಸ್ತುತಿ ಗೀತೆಗಳು ಹಾಡಿನ ದಾಟಿಯಲ್ಲಿ ಒಂದೇ ತೆರನಾಗಿರುತ್ತವೆ. ಇಲ್ಲಿಯ ದೇವರ ಬಗೆಗಿನ ಆತ್ಮೀಯತೆ, ಭಯ, ವೈಭವ, ಭಕ್ತಿ ವರ್ಣನೀಯವಾಗಿರುತ್ತದೆ. ಮನುಷ್ಯನ ಎಲ್ಲ ಸ್ವಭಾವಗಳನ್ನು ದೇವರಿಗೆ ಅನ್ವಯಿಸಿ ಹಾಡುತ್ತ ಕುಣಿಯುವುದು ಕಂಡು ಬರುತ್ತದೆ. ದೇವರ ಹಾಡುಗಳನ್ನು ಸ್ತ್ರೀಯರು–ಪುರುಷರು ಹಬ್ಬ ಉತ್ಸವಗಳಲ್ಲಿ ಹಾಗೂ ಹೊಲದಲ್ಲಿ ಕೆಲಸ ಮಾಡುವಾಗ ಮತ್ತು ಸೋಬಾನೆ ಸಂದರ್ಭದಲ್ಲಿ ಕ್ಯಾತಪ್ಪನ ಬಗೆಗಿನ ಹಾಡುಗಳನ್ನು ಹಾಡುತ್ತಾರೆ. ಸಾಮಾನ್ಯವಾಗಿ ಇಲ್ಲಿನ ಜನಪದ ಸಾಹಿತ್ಯವು ಸಾಂಸ್ಕೃತಿಕ ವೀರರ ಜೀವನದ ಪ್ರತಿಯೊಂದು ಘಟನೆಗಳನ್ನು ಒಳಗೊಂಡಿರುತ್ತದೆ.

- ಕಲ್ಯಾಣ(ದುರ್ಗ)ಪಟ್ಟಣದಿಂದ ಬೊಮ್ಮಣ್ಣನೊಂದಿಗೆ ಆಗಮಿಸಿದ್ದು.
- ರೆಡ್ಡಿ ಮನೆತನದವರನ್ನು ನಾಶ ಮಾಡಿದ್ದು
- ಕ್ಯಾತಪ್ಪನು ಭಕ್ತ ಬೊಮ್ಮಣ್ಣನಿಗೆ ಒಲಿದಿದ್ದು.
- ರೆಡ್ಡಿಗಳ ಮನೆಯಿಂದ ದನಗಳನ್ನು ಹೊಡೆದುಕೊಂಡು ಬರುವಾಗ ಮಾಡಿದ ಪವಾಡ.
- ಬೊಮ್ಮಣ್ಣನಿಗೆ ಉಳ್ಳಿ–ನವಣೆ ವ್ರತ ಹಿಡಿಯುವಂತೆ ಮಾಡಿದ್ದು.
- ಮತ್ಸಮುದ್ರದ ಹನುಮಂತರಾಯ ಪೂಜಾರಿಗೆ ಕಾಣಿಸಿಕೊಂಡ ರೀತಿ.
- ಗೌರಸಂದ್ರದ ಮಾರಮ್ಮನ ಮೇಲೆ ಕಣ್ಣು ಬಿಟ್ಟಿದ್ದು.
- ವೇಷ ಮರೆಸಿಕೊಂಡು ಚಿತ್ರದುರ್ಗವನ್ನು ನಾಶ ಮಾಡಿದ್ದು.

- ಗೌರಸಂದ್ರದ ಮಾರಮ್ಮನ ಮೂಲಕ ದೊರೆ ಭರಮಪ್ಪ ನಾಯಕನಿಗೆ ತೊಂದರೆ ಕೊಟ್ಟಿದ್ದು.
- ಅನನ್ಯ ಭಕ್ತ ಕರಿಯಣ್ಣನಿಗೆ ಒಲಿದು ಆತನಿಗೆ ಬುದ್ಧಿ ಹೇಳಿದ್ದು.
- ಹಾಲು ಕುಡಿದಪ್ಪ ಕೇತಪ್ಪ ಆಗಿದ್ದು, ಕ್ಯಾತಪ್ಪ ನಿಂಗಣ್ಣ ಆಗಿದ್ದು, ನಿಂಗಣ್ಣ ಮಹಾಲಿಂಗ ಆಗಿದ್ದು.
- ಪುರ್ಲೆಹಳ್ಳಿ ವಸತಿ ದಿಬ್ಬದಲ್ಲಿ ಸಿರಿಯಣ್ಣ, ಕರಿಯಣ್ಣರೊಡನೆ ಐಕ್ಯನಾಗಿದ್ದು.

ಹೀಗೆ ಜನಪದರು ಕ್ಯಾತಪ್ಪನ ಕತೆಯನ್ನು ನಿರೂಪಿಸುತ್ತಾರೆ.

**೪.೨ ಪುರಾಣಗಳು ಮತ್ತು ಐತಿಹ್ಯಗಳ ಯಾದೃಚ್ಛಿಕತೆ**

ಧರ್ಮ, ದೇವರು, ಮಾಟ-ಮಂತ್ರ, ಪುರಾಣ ಇವುಗಳೆಲ್ಲವೂ ಅತ್ಯಂತ ಪ್ರಾಚೀನವಾದ ಸಂಗತಿಗಳು. ಇವುಗಳು ಇಂದಿಗೂ ಜನ ಸಮುದಾಯದ ನಂಬಿಕೆಯ ನೆಲೆಗಟ್ಟಿನ ಮೇಲೆ ನಿಂತಿದೆ. ಆದಿ ಮಾನವನ ಭಯ-ಭೀತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಆರಾಧನೆಯ ಫಲವಾಗಿ ಪುರಾಣಗಳು ನಿರ್ಮಾಣಗೊಂಡಿವೆ. ಇಂಗ್ಲಿಷಿನ 'ಮಿಥ್' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಪುರಾಣ' ಪದವು ಬಳಕೆಗೆ ಬಂದಿದೆ. ಗ್ರೀಕ್‌ನ ಮೈಥಸ್ ಎನ್ನುವ ಪದದಿಂದ ನಿಷ್ಪನ್ನಗೊಂಡದ್ದು ಮೈಥ್, ಇದರ ಅರ್ಥ ನೀತಿಕಥೆ, ಮಾತು ಅಥವಾ ನೀತಿ ಇತ್ಯಾದಿ. ಪುರಾಣಗಳಲ್ಲಿ ಸೃಷ್ಟಿ ಪುರಾಣಗಳು, ಕುಲಪುರಾಣಗಳು, ಜನಾಂಗದ ಪುರಾಣಗಳು, ಜಲ ಪುರಾಣಗಳು, ಚಾರಿತ್ರಿಕ ಪುರಾಣಗಳು, ಶಿವಪುರಾಣಗಳು, ವಿಷ್ಣುಪುರಾಣಗಳು ಮುಂತಾದ ಬಗೆಗಳನ್ನು ಕಾಣಬಹುದು.

ಸೃಷ್ಟಿ ಪುರಾಣಗಳಲ್ಲಿ ದೈವಿಕ ಆವರಣವು ಪ್ರಾಪ್ತವಾಗುತ್ತದೆ. ಇದರ ಬಗ್ಗೆ ಜನರಲ್ಲಿ ಪೂಜ್ಯ ಭಾವನೆ ಇರುತ್ತದೆ. ಜನಸಮುದಾಯದ ಸಂಸ್ಕೃತಿಯನ್ನು ಹಿಡಿದಿಟ್ಟಿರುವ ಪುರಾಣಗಳು ಜನಾಂಗದ ಪುರಾಣಗಳು. ಇವುಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವ ಪಡೆದಿರುತ್ತವೆ. ಏಕೆಂದರೆ ಪುರಾಣ ಮತ್ತು ಐತಿಹ್ಯಗಳು ನಾಡಿನ ಹೆಮ್ಮೆಯ ಪ್ರತೀಕಗಳು. ಇವು ಕೇವಲ ಕಥೆಗಳಲ್ಲ, ಯಾವುದೊ ಒಂದು ಕಾಲಕ್ಕೆ ನಡೆದುಹೋದ ಘಟನೆಯ ವಿಸ್ತೃತ ರೂಪಗಳು. ನೀತಿ ಮಾತು, ಇವು ಹಿಂದೆ ಎಂದೋ ಆಗಿಹೋದ ಘಟನೆಯನ್ನು ಆಧರಿಸಿದ ನಿಜ ಸಂಗತಿ ಮುಂತಾದ ಅಂಶಗಳು ಪುರಾಣಗಳಲ್ಲಿ ಕಂಡು ಬರುತ್ತವೆ. ಇವುಗಳು ಧಾರ್ಮಿಕ ಪರಿವೇಷವನ್ನು ಪಡೆದು ಆಚರಣೆಗೆ ಬಂದವು ಜನಪದ ಪುರಾಣಗಳು ಐತಿಹ್ಯಗಳಾಗಿಯೇ ಪ್ರಸಿದ್ಧವಾಗಿವೆ.

ಸಾಮಾನ್ಯವಾದ ಕಥೆಯೊಂದಕ್ಕೆ ಹೆಚ್ಚಿನ ಮಹತ್ವ ಹಾಗೂ ಪ್ರಾಮುಖ್ಯತೆಯನ್ನು ತಂದುಕೊಡುವುದು ಪುರಾಣೀಕರಣದ ಉದ್ದೇಶ. ಭಾರತೀಯ ಸಂದರ್ಭದಲ್ಲಿ ವ್ಯಕ್ತಿ ಹಾಗೂ ಕಾಲದ ಉಗಮವನ್ನು ದೈವಿಕ ನೆಲೆಗಳೊಂದಿಗೆ ಆರೋಪಿಸಿ ಹೇಳುವುದು ಪುರಾಣದ ಉದ್ದೇಶ. ಇಲ್ಲಿ ಕಂಡುಬರುವ ಮೂಲ ಪುರುಷರು, ಇಲ್ಲವೆ ಸಾಂಸ್ಕೃತಿಕ ವೀರರ ಕತೆಗಳು ತುಂಬಾ ರೋಚಕವಾಗಿರುತ್ತವೆ. ಇವರು ಆಯಾ ಜನಾಂಗದ ನಾಯಕರಾಗಿ ನಂತರ ದೇವರು–ದೇವತೆಗಳಾಗಿ ಪರಿಣಮಿಸುತ್ತಾರೆ. ಜಗತ್ತಿನ ಪ್ರತಿಯೊಂದು ಜನಾಂಗವೂ ತನ್ನದೇ ಆದ ಮೂಲ ಪುರುಷರನ್ನು ಹೊಂದಿರುತ್ತದೆ. ಆ ಕುಲದ ಹುಟ್ಟು ಹಾಗೂ ಅವುಗಳ ಪ್ರಚಲಿತವಿರುವ ಆಚಾರ–ವಿಚಾರ, ನಂಬಿಕೆಗಳನ್ನು ಪುರಾಣಗಳು ವಿವರಿಸುತ್ತವೆ. ಭಾರತದಂತಹ ದೇಶದಲ್ಲಿ ಇಂಥವು ಹೇರಳವಾಗಿ ಸಿಗುತ್ತವೆ. ಮೂಲ ಪುರುಷರು, ಸಾಂಸ್ಕೃತಿಕ ನಾಯಕರುಗಳು, ಅಲೌಕಿಕರು, ಅ ಪ್ರಾಕೃತರು, ದೈವಾಂಶ ಸಂಭೂತರು, ಇಲ್ಲವೇ ಅವತಾರ ಪುರುಷರಾಗಿರುತ್ತಾರೆ. ಇವರ ಹುಟ್ಟು ಸಹ ಅಲೌಕಿಕ, ಅಪ್ರಾಕೃತವಾಗಿರುತ್ತದೆ. ಇವರುಗಳು ತಾಯಿಯ ಗರ್ಭದಲ್ಲಿ ಹುಟ್ಟಿದವರಲ್ಲ ಕಾಲಕ್ಕೆ ಬೆಳೆದವರು. ಇವರ ವಿನೋದಗಳು ಅಪಾರ, ಅನಂತ. ಹಾಲುಮತದ ಭೀರಪ್ಪ, ಕಾಡುಗೊಲ್ಲರ ಕ್ಯಾತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ, ಪಾತೇಲಿಂಗ, ಬೀರಪ್ಪ, ಮಾದಪ್ಪ, ಮಂಟೇಸ್ವಾಮಿ, ಸೌದತ್ತಿ ಎಲ್ಲಮ್ಮ, ಎಲ್ಲರು ಜನರ ದೃಷ್ಟಿಯಲ್ಲಿ ದೇವರ ಅವತಾರಗಳೇ. ಅವರನ್ನೇ ದೇವರೆಂದು ನಂಬಿ ಗುಡಿ ಕಟ್ಟಿಸಿ, ಪೂಜೆ ಪುನಸ್ಕಾರ, ಹಬ್ಬ ಹರಿದಿನ ಹಾಗೂ ಉತ್ಸವಗಳನ್ನು ಆಚರಿಸುತ್ತಾರೆ. ಹರಕೆ ಹೊರುತ್ತಾರೆ. ದೇವ ಮಾನವರು ಎಂದು ಅವರನ್ನು ಭಕ್ತಿಯಿಂದ ನೆನೆಯುತ್ತಾರೆ. ಜನರ ಅಚಲವಾದ ನಂಬಿಕೆ ಇದಕ್ಕೆ ಮುಖ್ಯ ಕಾರಣ ಎನ್ನಬಹುದು. ಜನಾಂಗದ ಮೂಲ ಪುರುಷರು ಆಯಾ ಜನಾಂಗದ ಉಗಮ, ವಿಕಾಸ, ಆಚಾರ–ವಿಚಾರ, ದೇವಾನು ದೇವತೆಗಳು, ಸಮಾಜಿಕ ನಡಾವಳಿಗಳು ಇತ್ಯಾದಿ ಅಂಶಗಳನ್ನು ತಿಳಿಸುತ್ತವೆ. ಇವುಗಳ ಜೊತೆಗೆ ತಾವು ಅನುಸರಿಸುವ ಧರ್ಮ, ಅದರ ಮಹತ್ವ ಮತ್ತು ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತವೆ.

“ಯಾವುದೇ ಬುಡಕಟ್ಟಿನ ದೈವಗಳ ಆಚರಣೆ, ನಂಬಿಕೆಗಳನ್ನು ಕುರಿತ ಸಾಂಸ್ಕೃತಿಕ ಅಧ್ಯಯನದಲ್ಲಿ ಆಯಾ ಬುಡಕಟ್ಟಿನ ಪುರಾಣ ಮತ್ತು ಐತಿಹ್ಯಗಳು ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ”[೬] ನಂಬಿಕೆ, ಆಚಾರ, ವಿಚಾರ, ಸಂಪ್ರದಾಯಗಳಿಗೆ ಪುರಾಣಗಳು ಸಮರ್ಥನೆ ನೀಡುತ್ತವೆ. ಬುಡಕಟ್ಟು ಸಮುದಾಯಗಳಲ್ಲಿ ಪುರಾಣಗಳು ಎಲ್ಲಿಯವರೆಗೆ ಜೀವಂತವಾಗಿರುತ್ತವೆಯೋ ಅಲ್ಲಿಯವರೆಗೆ ತನ್ನ ಸಮಾಜದ ಅಥವಾ ಬುಡಕಟ್ಟಿನ ಸಂಘಟನೆಯನ್ನು ಉಂಟುಮಾಡುತ್ತವೆ. ಇದರಿಂದ ಆ ಬುಡಕಟ್ಟು ಅಥವಾ ಸಮುದಾಯದಲ್ಲಿ ಏಕತೆಯನ್ನು ಉಂಟು ಮಾಡುತ್ತದೆ. ಈ ದೃಷ್ಟಿಯಿಂದ ಪುರಾಣಗಳು ಪ್ರಮುಖ ಪಾತ್ರವಹಿಸುತ್ತವೆ.

ವಾಯು ಪುರಾಣ, ಜಲಪುರಾಣ, ವಿಷ್ಣುಪುರಾಣ, ಶಿವಪುರಾಣ, ಆದಿಪುರಾಣ ಮೊದಲಾದ ಮಾನವನು ಸೃಷ್ಟಿಸಿದಂತಹ ಪುರಾಣಗಳ ಅಧ್ಯಯನವು ಭೌಗೋಳಿಕ, ಪ್ರಾಕೃತಿಕ ವಿದ್ಯಮಾನಗಳು ಹಾಗೂ ಮಾನವನ ಸಂಸ್ಕೃತಿಯ ವಿಕಾಸವನ್ನು ಕುರಿತ ಅನೇಕ ಅಪೂರ್ವವಾದ ಮಾಹಿತಿಗಳನ್ನು ಒದಗಿಸುವುದಲ್ಲದೆ ನಂಬಿಕೆಗಳನ್ನು ಜನರಲ್ಲಿ ಬಿತ್ತುತ್ತವೆ. ಆದರೂ ಜನ ಇವುಗಳನ್ನು ನಂಬುತ್ತಾರೆ. ಅಲ್ಲದೆ ದೇವರೆಂದು ಪೂಜಿಸುತ್ತಾರೆ. ಉತ್ಸವ ಆಚರಿಸುತ್ತಾರೆ. ಗುಡಿ ಕಟ್ಟಿಸುತ್ತಾರೆ. ಪುರಾಣಗಳಲ್ಲಿ ವಾಸ್ತವಿಕತೆ ಹೆಚ್ಚು. ಮಾನವನ ಸೃಷ್ಟಿ, ದೈವಸೃಷ್ಟಿ, ಪ್ರಕೃತಿ ಸೃಷ್ಟಿ, ಸ್ವರ್ಗ, ನರಕಗಳ ಸೃಷ್ಟಿ, ಪಂಚಭೂತ, ಪ್ರಾಣಿ ಹೀಗೆ ಅನೇಕ ಬಗೆಯ ಸೃಷ್ಟಿಯ ರಹಸ್ಯಗಳು ಪುರಾಣಗಳಲ್ಲಿ ದೊರೆಯುತ್ತವೆ. ಇವು ಐತಿಹ್ಯಗಳಲ್ಲಿ ದೊರೆಯುವುದಿಲ್ಲ. ಮನುಷ್ಯ ಯಾವಾಗ ಪ್ರಕೃತಿಯ ವಿಕೋಪಕ್ಕೆ ಹೆದರಿ ಪ್ರಕೃತಿಯನ್ನೇ ಪೂಜಿಸಿದನೋ ಅಂದೇ ಪೌರಾಣಿಕ ಕಲ್ಪನೆಗಳು ಉಂಟಾದವು. ಪ್ರಕೃತಿಯಲ್ಲಿ ತನಗಿಂತ ಹೆಚ್ಚಿನದೊಂದು ಶಕ್ತಿ ಇದೆ. ಅದೇ ದೇವರು ಎಂಬ ನಿರ್ಧಾರಕ್ಕೆ ಬಂದು,ಅದನ್ನು ಕುರಿತ ಅನೇಕ ಅನುಮಾನಗಳಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸಿದ ಫಲವಾಗಿ ಪುರಾಣದ ಕಲ್ಪನೆಗಳು ಉಂಟಾಗಿರಬಹುದು. ಮಾನವನು ಕಂಡುಕೊಳ್ಳದ ಹಲವು ಬಗೆಯ ಊಹಾತ್ಮಕ ಕಲ್ಪನೆಗಳೇ ಪುರಾಣಗಳಾಗಿ ಸೃಷ್ಟಿಯಾದವು. ಮನುಷ್ಯನ ಕಲ್ಪನಾ ಶಕ್ತಿ ಪುರಾಣಗಳ ಸೃಷ್ಟಿಗೆ ಕಾರಣವಾಗಿವೆ. ಇದು ದೇವರ ಲೀಲೆ ಮಾತ್ರವಲ್ಲ, ಮಾನವನ ಬೆಳವಣಿಗೆಯ ಹಂತವನ್ನು ಹೇಳುವುದು.

ಪುರಾಣ ಎನ್ನುವುದು ಚರಿತ್ರೆಯಲ್ಲ, ಚರಿತ್ರೆಯ ಮಾತೃಕೆ ಎನ್ನುವ ಏಲಿಯಟ್‌ರ ಮಾತು ಗಮನಾರ್ಹ. ವೈಜ್ಞಾನಿಕ ಸಂಶೋಧನೆಗೆ ಪೂರ್ವದಲ್ಲಿದ್ದ ಊಹಾತ್ಮಕ ಕಲ್ಪನೆಗಳೇ ಪುರಾಣಗಳು ಎನ್ನಲಾಗುತ್ತದೆ. ೧೮೮೪ರಲ್ಲಿ ಆಂಡ್ರ್ಯುಲಾಂಗ್ ತನ್ನ "ಕಸ್ಟಮ್ಸ್ ಅಂಡ್ ಮಿಥ್" ಪ್ರಬಂಧಗಳ ಸಂಕಲವನ್ನು ಪ್ರಕಟಿಸಿದಂದಿನಿಂದ ಮೆಕೆಂಝಿ, ಇಕಾನಿರೆಕ್, ಹೆನ್ರಿ, ಎಡ್ವರ್ಡ್‌ಬುವೆಸ್, ಲೀನ್ನಾಟ್, ಹರ್ನಸ್ ಗ್ಯುಂಕಲ್, ಹೆರ್ಸ್ಕೋವಿಟ್ಸ್, ಅನೇಕ ವಿದ್ವಾಂಸರು ಪುರಾಣ ಅಥವಾ ಮಿಥ್ ಎನ್ನುವುದನ್ನು ದೀರ್ಘವಾಗಿ ಚರ್ಚಿಸಿದ್ದಾರೆ. ಪುರಾಣವು ಪವಿತ್ರ ಎಂದು ಭಾವಿಸಿದ ಸತ್ಯಕಥನ, ನಡೆಯಿತೆನ್ನಲಾದ ಘಟನೆಗಳನ್ನು ಮರೆ ಮಾಡಿ, ಅದರೊಂದಿಗೆ ದೈವಿಕ ಅಂಶಗಳು ಬೆರೆತು ಪವಾಡಗಳು ವಿಜೃಂಭಿಸಿ ಅದ್ಭುತವಾಗಿ ಬೆಳೆದು, ಒಂದೇ ಕಾಲದಲ್ಲಿ ನಡೆದವುಗಳೇ ಎಂಬ ಭ್ರಮೆ ಹುಟ್ಟಿಸುವ ಕತೆಗಳನ್ನೇ ಪುರಾಣಗಳು ಎನ್ನಬಹುದು. ಪುರಾಣ ಎಂಬ ಶಬ್ಧ ಕಾಲ್ಪನಿಕ ಕಥೆಗಳಿಗೆ ಸಂಬಂಧಿಸಿದ್ದು ಪುರಾಣಗಳಿಗೆ ಜನಪದವೇ ತಾಯಿಬೇರು. ಡಾ.ಜೀ.ಶಂ.ಪ ಅವರು ಹೇಳುವಂತೆ "ಮಾನವನ ವೈಜ್ಞಾನಿಕವಾದ ಮೊದ ಮೊದಲಿನ ವಿಚಾರಗಳೇ ಪುರಾಣ ಕಥೆಗಳು ಹುಟ್ಟಿಕೊಳ್ಳಲು ಕಾರಣವಾಗಿವೆ. ಈ ಭೂಮಿ, ಆಕಾಶ, ಗಿಡ, ಪ್ರಾಣಿ,

ಮನುಷ್ಯ ಹೇಗೆ ಸೃಷ್ಟಿಗೊಂಡವು ಎಂಬುವುದು ಮನುಷ್ಯನಿಗೆ ಕಾಡಿದ ಸಮಸ್ಯೆಯಿಂದ ಅವನು ತಂತಾನೆ ಕಲ್ಪಿಸಿಕೊಂಡ."[೨]

ಪ್ರಕೃತಿಯಲ್ಲಿನ ಅಗೋಚರವಾದ ಶಕ್ತಿಯ ಸ್ವರೂಪಗಳನ್ನು ಕುರಿತ ಕಲ್ಪನೆಗಳು ದೈವಿಕ ಆವರಣವನ್ನು ಪಡೆದುಕೊಂಡು ಪುರಾಣವಾಗುತ್ತವೆ. ಅವು ದೈವಿಕ ಅಂಶಗಳನ್ನು ಕಳೆದುಕೊಂಡರೆ ಐತಿಹ್ಯಗಳಾಗುತ್ತವೆ. ಸ್ಥಳದ ಹುಟ್ಟು, ಮಹಿಮೆಯನ್ನು ವಿವರಿಸುವ ಕಥೆಗಳನ್ನು ಸ್ಥಳ ಪುರಾಣಗಳೆಂದು ಕರೆಯುತ್ತಾರೆ. ಅಲ್ಲದೆ ಇದನ್ನು ಕುಲ ಪುರಾಣ, ಕುಲ ಐತಿಹ್ಯ ಎಂತಲೂ ಕರೆಯುತ್ತಾರೆ. ಯಾವುದೇ ಒಂದು ಬುಡಕಟ್ಟಿನ ಸಂಪ್ರದಾಯ ಮತ್ತು ನಂಬಿಕೆಯ ಪುರಾಣಗಳು ಮತ್ತು ಐತಿಹ್ಯಗಳು ಪ್ರಮುಖ ಪಾತ್ರ ವಹಿಸುತ್ತವೆ. ಆ ಬುಡಕಟ್ಟಿನ ಜನರ ಜೀವನವನ್ನು ನಿರ್ದೇಶಿಸುತ್ತವೆ. ಆ ಬುಡಕಟ್ಟಿನ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಸಮರ್ಥನೆ ನೀಡುತ್ತವೆ. ಇದರಿಂದಾಗಿ ಅವುಗಳ ಸ್ವರೂಪವೇನು ಎಂಬುವುದನ್ನು ಅಗತ್ಯವಾಗಿ ವಿಚಾರ ಮಾಡಲೇ ಬೇಕಾಗುತ್ತದೆ. ಯಾವುದೇ ಒಂದು ಬುಡಕಟ್ಟಿನ ಜನರಿಗೆ ಸಂಬಂಧಿಸಿದಂತೆ ಇತಿಹಾಸ ಮಾಡುವ ಕೆಲಸವೇ ಬೇರೆ, ಪುರಾಣ ಮಾಡುವ ಕೆಲಸವೇ ಬೇರೆ. ಬುಡಕಟ್ಟಿನ ಜನಜೀವನ ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿದೆ ಎಂಬುದರ ತಿಳಿವಳಿಕೆಯನ್ನು ಇತಿಹಾಸ ತಂದು ಕೊಡುತ್ತದೆ. ಆದರೆ ಪುರಾಣದ ಉದ್ದೇಶ ಇತಿಹಾಸ ತಂದುಕೊಟ್ಟಂತಹ ತಿಳಿವಳಿಕೆಯನ್ನು ತಂದುಕೊಡುವುದಿಲ್ಲ, ಬುಡಕಟ್ಟಿನ ಅಸ್ತಿತ್ವಕ್ಕೆ ಅಗತ್ಯವಾದ ಕ್ರಿಯೆಯನ್ನು ಸೂಚಿಸುವುದು. ಈ ಕಾರಣದಿಂದಾಗಿ ಬುಡಕಟ್ಟು ಜನರಿಗೆ ತಮ್ಮ ಇತಿಹಾಸಕ್ಕಿಂತಲೂ ತಮ್ಮ ದೇವರ ಕುರಿತ ಪುರಾಣಗಳು ಮುಖ್ಯವಾಗುತ್ತವೆ. ಇವು ಜನ ಜೀವನಕ್ಕೆ ಬಹಳ ಹತ್ತಿರವಾಗಿರುತ್ತವೆ. ಆ ಮೂಲಕ ಆತ್ಮೀಯವೂ ಆಗುತ್ತವೆ. ಹೀಗಾಗಿ ಬುಡಕಟ್ಟಿನ ಜನ ತಮ್ಮ ಇತಿಹಾಸ ತಿಳಿದುಕೊಳ್ಳದೇ ಇದ್ದರೂ ಬುಡಕಟ್ಟಿನ ಪುರಾಣವನ್ನು ತಿಳಿದೇ ತಿಳಿದಿರುತ್ತಾರೆ.

ಜನಪದ ಪುರಾಣಗಳಲ್ಲಿ ಕಂಡು ಬರುವ ಎಲ್ಲಾ ಗುಣಲಕ್ಷಣಗಳನ್ನು ಒಳಗೊಂಡೇ ಶಿಷ್ಟ ಪುರಾಣ ಅಥವಾ ಜನಪ್ರಿಯ ಪುರಾಣಗಳು ರೂಪ ತಾಳಿವೆ ಎನ್ನಬಹುದು. ಇವುಗಳಲ್ಲಿ ಸೃಷ್ಟಿಯ ಉಗಮ, ಜೀವಿಯ ಉಗಮ, ದೇವತೆಗಳ ಪವಾಡಗಳು, ಧಾರ್ಮಿಕ ಪುರುಷರ ಇತಿಹಾಸಗಳಿದ್ದ ಧಾರ್ಮಿಕ ತತ್ವಗಳ ಪ್ರತಿಪಾದನೆ, ಪ್ರಸರಣ, ಪುಣ್ಯಪ್ರಾಪ್ತಿ, ಆಚರಣೆ ಮುಂತಾದುವುಗಳೇ ಪ್ರಧಾನ ಉದ್ದೇಶಗಳಾಗಿರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಮಾನವ ವರ್ಗಕ್ಕಾಗಲಿ, ಒಂದು ಬುಡಕಟ್ಟಿಗಾಗಲಿ ಹೋರಾಟದ ಮೂಲಕ ಸೌಲಭ್ಯಗಳನ್ನು ಒದಗಿಸಿಕೊಟ್ಟು ನೀತಿ ನಿಯಮಗಳನ್ನು ರೂಪಿಸಿದ ಪುರುಷನನ್ನು ಸಾಂಸ್ಕೃತಿಕ ವೀರ ಎಂದು ಕರೆಯುತ್ತಾರೆ. ದೇವತೆಗಳಿಂದ ಬೆಂಕಿಯನ್ನು ಕದ್ದು ಭೂಮಿಯಲ್ಲಿನ ಜನರಿಗೆ ಅದನ್ನು ತಂದುಕೊಟ್ಟು ಪ್ರೊಮಿಥಿಯಸ್ ಒಬ್ಬ ಸಾಂಸ್ಕೃತಿಕ

ವೀರ. ಒಂದು ಸಂಸ್ಕೃತಿಯ ಅತ್ಯಂತ ಕನಿಷ್ಠ ಘಟಕವನ್ನು ಸಾಂಸ್ಕೃತಿಕ ಮೂಲಾಂಶ ಎಂದು ಕರೆಯುತ್ತಾರೆ. ಹಿರಿಯರಿಗೆ ಗೌರವ ಸೂಚಿಸಲು ಅವರ ಕಾಲು ಮುಟ್ಟಿ ನಮಸ್ಕರಿಸುವ ವಿಧಾನ ಸಾಂಸ್ಕೃತಿಕ ಮೂಲಾಂಶಕ್ಕೆ ಒಂದು ಉದಾಹರಣೆ. ಪುರಾಣವೂ ಸಹ ಕೆಲವು ಸಾಂಸ್ಕೃತಿಕ ಮೂಲಾಂಶಗಳನ್ನು ವಿವರಿಸುತ್ತವೆ.ಈ ಮೂಲಾಂಶಗಳನ್ನು ರೂಪಿಸಿದವನೂ ಸಾಂಸ್ಕೃತಿಕ ವೀರನೆಂದು ತಿಳಿದು ಬರುತ್ತದೆ. ಕೆಲವು ಸಂದರ್ಭಗಳಲ್ಲಿ ಪುರಾಣ ಮತ್ತು ಐತಿಹ್ಯ ಎರಡಕ್ಕೂ ವ್ಯತ್ಯಾಸ ಗುರುತಿಸುವುದು ಕಷ್ಟವಾಗುತ್ತದೆ. ಅಂತ ಸಂದರ್ಭಗಳಲ್ಲಿ ಧಾರ್ಮಿಕ ಅಂಶಗಳನ್ನು ಒಳಗೊಂಡ, ಉಪಾಸನೆಗಳಿಗೆ ಸಂಬಂಧಿಸಿದ ಕತೆಗಳನ್ನು ಪುರಾಣಗಳೆಂದೂ, ಲೌಕಿಕ ಅಂಶಗಳನ್ನು ಒಳಗೊಂಡ ಕತೆಗಳನ್ನು ಐತಿಹ್ಯಗಳೆಂದೂ ಕರೆಯುತ್ತಾರೆ. ಕಾಡುಗೊಲ್ಲರ ಜುಂಜಪ್ಪನ ಪುರಾಣ, ಎತ್ತಪ್ಪನ ಪುರಾಣ, ಚಿತ್ರದೇವರ ಪುರಾಣ, ಕಾಟಮದೇವರ ಪುರಾಣ, ಪಾತೇದೇವರ ಪುರಾಣ ಮತ್ತು ಕ್ಯಾತೆದೇವರ ಪುರಾಣ ಇನ್ನು ಮುಂತಾದ ಪುರಾಣಗಳನ್ನು ಐತಿಹ್ಯಗಳೆಂದೂ ನಿರೂಪಿಸಲಾಗಿದೆ. ಈ ಪುರಾಣಗಳು ಹಾಗೂ ಐತಿಹ್ಯಗಳನ್ನೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾಗಿದೆ. ಜುಂಜಪ್ಪನ ಪುರಾಣಕ್ಕೆ ಮಾತ್ರ ಎರಡು ಪಾಠಾಂತರ ಇರುವುದನ್ನು ವಿದ್ವಾಂಸರಾದ ಎಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ.ಅನಂತಕೃಷ್ಣ ಅಯ್ಯರ್ ಗುರುತಿಸಿದ್ದಾರೆ. ಇದೇ ರೀತಿ ತೀ.ನಂ.ಶಂಕರನಾರಾಯಣ ಅವರೂ ಸಹ ಗುರುತಿಸಿರುವುದನ್ನು ಕಾಣಬಹುದು.

ಪುರಾಣಗಳು ಜನರ ನಂಬಿಕೆಯ ಫಲ, ನಂಬಿಕೆಗಳು ಅವರ ಅನುಭವದ ಪರಿಣಾಮ ಎಂಬ ಮಾತನ್ನು ಗಮನಿಸಿದರೆ, ಕ್ಯಾತಪ್ಪನ ದೈವಗಳ ಮೂಲಕ ಒಂದು ಜನ ಸಮುದಾಯದ ಜೀವನ ಕ್ರಮವನ್ನು ವಿವರಿಸಿರುವ ರೀತಿಯನ್ನು ಕಾಣಬಹುದು. 'ಪುರಾಣಗಳು ಹಿಂದೆ ನಡೆದವು ಎನ್ನಲಾದ ದೇವಾನುದೇವತೆಗಳ ಚಟವಟಿಕೆಗಳನ್ನು ವಿವರಿಸುತ್ತವೆ' ಎಂಬ ಲೆವಿಸ್ ಸ್ಪೆನ್ಸ್‌ರವರ ಮಾತು ಉತ್ಪ್ರೇಕ್ಷೆಯಲ್ಲ. ಆದ್ದರಿಂದ ಜನ ಸಮುದಾಯದ ಚರಿತ್ರೆಯನ್ನು ಹುಡುಕಲು ಈ ಪುರಾಣ ಕತೆಗಳು ಆಧಾರ ಸಾಧನವಾಗಿವೆ. ಜನಪದರ ಪುರಾಣಗಳು ಕಟ್ಟು ಕಥೆಯಲ್ಲ. ಅವು ಬಹುಸಂಖ್ಯಾತ ಜನತೆಯ ಬದುಕಿಗೆ ಹಿಡಿದ ಕನ್ನಡಿ. "ಪುರಾಣ ಅನಾಗರಿಕ ಜನರಲ್ಲಿ ಕೇವಲ ಕೇಳಿದ ಕತೆಯಲ್ಲ;"[೭] ಅತ್ಯಂತ ಕ್ರಿಯಾಶಾಲಿಯಾದ ಸಾಂಸ್ಕೃತಿಕ ಶಕ್ತಿ ಎಂಬ ಮ್ಯಾಲಿನೋವಸ್ಕಿಯ ಮಾತನ್ನು ಜನಪದ ಪುರಾಣಗಳಿಗೆ ಖಚಿತವಾಗಿ ಅನ್ವಯ ಮಾಡಬಹುದು. ಪುರಾಣವು ಆದಿಮಾನವನ ಜೊತೆಗೆ ಹುಟ್ಟಿದ್ದಲ್ಲ; ಅವನ ಆದಿಮ ಬದುಕನ್ನು ಕುರಿತದ್ದು. ಸಾಮಾನ್ಯ ಮನುಷ್ಯ ಸಂಸ್ಕೃತಿಯನ್ನು ಪಡೆದುದರ ಇತಿಹಾಸ ಅದು. ಅವನ ಪೂರ್ವೇತಿಹಾಸ ನಾಗರಿಕತೆ ಮತ್ತು ಅನಾಗರಿಕತೆಯ ಮಧ್ಯೆ ಏನನ್ನೋ ಅದು ಹೇಳುತ್ತದೆ. ಪುರಾತನ

ಮನುಷ್ಯನ ಬದುಕೆಲ್ಲ ಪುರಾಣಗಳಲ್ಲ. ಎಲ್ಲ ಮಾನವ ಧರ್ಮಗಳಿಗೂ ಪುರಾಣವೇ ತಳಹದಿ ಎಂಬುವುದನ್ನು ಮರೆಯಬಾರದು. ಜಾನಪದೀಯ ಅಂಶಗಳನ್ನು ಒಳಗೊಂಡ ಧರ್ಮ ಜನಪದ ಧರ್ಮ, ಅಂತೆಯೇ ಪುರಾಣ ಧರ್ಮ, ಜೀವನ ಧರ್ಮಇತ್ಯಾದಿಗಳನ್ನು ಗುರುತಿಸಬಹುದು. ಪ್ರತ್ಯೇಕಿತ ಧರ್ಮಗಳು ಕಲ್ಪನೆ ಮತ್ತು ಸಿದ್ಧ ನಂಬಿಕೆಗಳ ಮೇಲೆ ನಿಂತವು. ಇವು ಜೀವನವನ್ನು ರೂಪಿಸುವುದಕ್ಕಿಂತ ಹೆಚ್ಚಾಗಿ ಬದುಕನ್ನು ಶೋಧಿಸುತ್ತವೆ.

ಪುರಾಣ ಮತೀಯ ಗುಣವುಳ್ಳದ್ದು, ಐತಿಹ್ಯ ಬುದ್ಧಿಗೆ ಸಂಬಂಧಿಸಿದ್ದು, ಪುರಾಣ ಮನುಷ್ಯನ ಆತ್ಮವನ್ನು ಕಲಕುವ, ಉದ್ರೇಕಿಸುವ ಗುಣವುಳ್ಳದ್ದು. ಪುರಾಣ ಐತಿಹ್ಯಗಳ ಹುಟ್ಟು ಗಂಭೀರ, ಹೆಚ್ಚು ಪಾವಿತ್ರ. ಒಬ್ಬನ ಕತೆ ಜನಕ್ಕೆ ಐತಿಹ್ಯ. ಈ ಕತೆಯೇ ಕಾಲಾಂತರದಲ್ಲಿ ಪುರಾಣವಾಗಿ ಕಾಣಿಸಿಕೊಳ್ಳಬಹುದು. ಚರಿತ್ರೆಯ ಅಂಶ ಐತಿಹ್ಯಕ್ಕೆ ಆಧಾರವಾದರೆ, ಐತಿಹ್ಯ ಪುರಾಣಕ್ಕೆ ಆಧಾರವಾಗುತ್ತದೆ. ಪ್ರಕೃತಿಗೆ ಸಂಬಂಧಪಟ್ಟ ಹಲವಾರು ಪುರಾಣಗಳನ್ನು ನಾವು ನೋಡಬಹುದು. ವಿಶ್ವದ ಸೃಷ್ಟಿ ಹಾಗೇ ಇರಲು ಸಾಧ್ಯವಿಲ್ಲ. ಅದು ಬದಲಾಗುತ್ತಿರಬೇಕು. ಇಲ್ಲವೇ ನಾಶವಾಗಬೇಕು. ನಾಶಕ್ಕೆ ಸಂಬಂಧಿಸಿದ ಪುರಾಣಗಳು ನಮ್ಮಲ್ಲಿ ಇವೆ. ನಾವು ಮಾಡುವ ಪ್ರತಿಯೊಂದು ಕಾರ್ಯಕ್ಕೂ ಒಂದು ಸಮರ್ಥನೆ ಬೇಕು. "ಆರಾಧಿಸುವ ದೈವ, ಆಚರಿಸುವ ಧರ್ಮ, ನಂಬಿದ ತತ್ವ, ಎಲ್ಲದಕ್ಕೂ ಹಿನ್ನೆಲೆ ಇದೆ."[೮] ಜನರಲ್ಲಿ ನಂಬಿಕೆ ಹುಟ್ಟಿಸುವ ಧಾರ್ಮಿಕ ಪುರಾಣಗಳು ನಮ್ಮಲ್ಲಿ ಅಧಿಕವಾಗಿವೆ. ಹೀಗಾಗಿ ಬುಡಕಟ್ಟು ಸಮುದಾಯದ ಕಾಡುಗೊಲ್ಲರಿಗೆ ತಮ್ಮದೇ ಆದ ಸೃಷ್ಟಿ ಪುರಾಣವಿದ್ದು ತಮ್ಮ ಸಾಂಸ್ಕೃತಿಕ ನಾಯಕರುಗಳನ್ನು ದೈವಗಳನ್ನಾಗಿ ಮಾಡಿಕೊಂಡು ಪೂಜಿಸುತ್ತಾರೆ. ಅಲ್ಲದೆ ದೈವಗಳ ಬಗೆಗೆ ಮಹಾಕಾವ್ಯಗಳನ್ನು ಕಟ್ಟಿ ಹಾಡುತ್ತಾರೆ. ಹೀಗೆ ಅನೇಕ ಒಳಕತೆಗಳು, ಸತಿಗೀತೆಗಳು, ಸೋಬಾನೆ ಪದಗಳು, ಸಂಪ್ರದಾಯದ ಪದಗಳು, ಒಗಟುಗಳು, ಇತ್ಯಾದಿ ಅಪಾರವಾದ ಸಾಹಿತ್ಯ ಸಂಪತ್ತನ್ನು ಈ ಸಮುದಾಯ ಮೌಖಿಕ ನೆಲೆಯಲ್ಲಿ ಉಳಿಸಿಕೊಂಡು ಬಂದಿದೆ. ಸಾಂಸ್ಕೃತಿಕ ವೀರರ ಕುರಿತ ಕಾವ್ಯಗಳಲ್ಲಿ ಪಶುಪಾಲಕತನ ಮತ್ತು ಕುರಿ ಸಾಕಾಣಿಕೆ ಇವರ ಮುಖ್ಯ ವೃತ್ತಿಯಾಗಿದೆ. ತುಮಕೂರು ಜಿಲ್ಲೆಯಿಂದ ಹಿಡಿದು ಬಳ್ಳಾರಿ ಜಿಲ್ಲೆಯ ಸಂಡೂರಿನವರೆಗೆ, ಆಂಧ್ರದ ಕಲ್ಯಾಣದುರ್ಗದಿಂದ ಹಿಡಿದು ಚಿಕ್ಕಮಗಳೂರಿನ ಅಣ್ಣೆಬೆಟ್ಟದವರೆಗೆ ಇವರು ತಮ್ಮ ಕುರಿ ದನಗಳನ್ನು ಮೇಯಿಸುತ್ತಾ ತಿರುಗಾಡಿದ ಹುಲ್ಲುಗಾವಲುಗಳ ಬಗ್ಗೆ ಜನಪದ ಕಾವ್ಯಗಳಲ್ಲಿ ಹಲವಾರು ಉಲ್ಲೇಖಗಳೂ ದೊರೆಯುತ್ತವೆ. ಹಿಂದೆ ಅಪಾರ ಸಂಖ್ಯೆಯ ಪಶುಸಂಪತ್ತಿಗೆ ಒಡೆಯರಾಗಿದ್ದ ಇವರಿಗೆ ತಮ್ಮ ದನಕರುಗಳೇ ದೇವರು ಎಂಬ ನಂಬಿಕೆ ಇದೆ. ಹಾಲು, ತುಪ್ಪದ ಮೀಸಲು, ಕಳ್ಳೆ ಮುಳ್ಳು ಇವರು ತಮ್ಮ ದೇವರಿಗೆ ಅರ್ಪಿಸುವ ಬಹಳ ಮುಖ್ಯವಾದ ನೈವೇದ್ಯ. ಒಂದು ಕಾಲದಲ್ಲಿ ತುಪ್ಪ

ಮಾರಾಟ ಮಾಡಿ ಕುಟುಂಬ ನಿರ್ವಹಣೆ ಮಾಡುತ್ತಿದ್ದ ಇವರ ಬದುಕು ಇಂದು ಪಲ್ಲಟಗಳಿಗೆ ಒಳಗಾಗುತ್ತಿರುವುದು ವಿಪರ್ಯಾಸದ ಸಂಗತಿಯೇ ಆಗಿದೆ.

ಐತಿಹ್ಯ ಎನ್ನವುದು ಇಂಗ್ಲಿಷಿನ 'ಲೆಜೆಂಡ್' ಎನ್ನವುದರ ಕನ್ನಡ ಸಂವಾದಿ ಪದ. ಲೆಜೆಂಡ್ ಪದವು ಮಧ್ಯಕಾಲೀನ ಲ್ಯಾಟಿನ್‌ನ ಲೆಜೆಂಡಾ ಎಂಬ ಪದದಿಂದ, ಇತಿ'ಇತಿಹ' ಎನ್ನುವ ಸಂಸ್ಕೃತ ರೂಪದಿಂದ ಐತಿಹ್ಯವು ನಿಷ್ಪನ್ನಗೊಂಡಿದೆ. ಆಂಗ್ಲ ಭಾಷೆಯಲ್ಲಿ ಲೆಜೆಂಡ್ ಎಂಬ ಪದ ಬಳಕೆಯಲ್ಲಿದೆ. ಐತಿಹ್ಯದಲ್ಲಿ ಕಥೆಗೆ ಕಾರಣವಾದ ವಸ್ತು ಮೊದಲೇ ಘಟಿಸಿರುತ್ತದೆ ಅಥವಾ ಹಾಗೆಂದು ಜನಪದರು ಪರಿಭಾವಿಸುತ್ತಾರೆ. "ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ, ಘಟನೆ, ಚರಿತ್ರೆ, ಸಮಾಜ ಮತ್ತು ಸಂಸ್ಸೃತಿಯ."[೯] ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಪುರಾಣ ಮತ್ತು ಐತಿಹ್ಯಗಳು ಜಾನಪದದಲ್ಲಿ ಅತಿಮುಖ್ಯವಾದ ಪ್ರಕಾರಗಳು. ಐತಿಹ್ಯ ಇದು ರೂಪದಲ್ಲಿ ಸರಳವಾಗಿದ್ದು ಒಂದು ನಿರ್ದಿಷ್ಟ ಸ್ಥಳ ಅಥವಾ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳನ್ನು 'ಐತಿಹ್ಯ' ಎಂದು ಕರೆಯುತ್ತಾರೆ. 'ಐತಿಹ್ಯಗಳು' ವ್ಯಕ್ತಿ, ಸ್ಥಳ ಅಥವಾ ಘಟನೆಗಳ ವಾಸ್ತವ ಅಥವಾ ಅವಾಸ್ತವ ನಂಬಿಕೆಗಳನ್ನೊಳಗೊಂಡ ಕಥನಗಳು ಅಥವಾ ನಡೆದ ಘಟನೆಗಳ ಪಳೆಯುಳಿಕೆಗಳು ಎನ್ನಬಹುದು. ಅಂದರೆ ಪ್ರಾಚೀನ ಕಾಲದ ಯಾವುದೇ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಅದ್ಭುತವಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿಯುವಾಗ ಕಥೆಯಾಗಿ ರೂಪುಗೊಂಡಿರುವುದಾಗಿರುತ್ತದೆ. ಐತಿಹ್ಯಗಳಲ್ಲಿ ಮೂರು ಬಗೆಗಳನ್ನು ನೋಡಬಹುದು. ವಿವರಣಾತ್ಮಕ ಐತಿಹ್ಯಗಳು, ಅತಿಮಾನುಷ ಜೀವಿಗಳ ಕುರಿತ ಐತಿಹ್ಯ, ಚಾರಿತ್ರಿಕ ಐತಿಹ್ಯಗಳು. ಈ ಐತಿಹ್ಯಗಳು ನಂಬಿಕೆ, ಪದ್ಧತಿ, ರೂಢಿ, ಸಂಪ್ರದಾಯ, ವಸ್ತು ವೈಶಿಷ್ಟ್ಯ ಅಥವಾ ವಿಶೇಷ ಗುಣದ ಹುಟ್ಟಿಗೆ ಕಾರಣವನ್ನು ವಿವರಿಸುತ್ತವೆ. ಉದಾಹರಣೆ:–ದೊಡ್ಡ ಬಂಡೆ,ದಿಬ್ಬಗಳ ಮೇಲಿನ ಮಡಿಕೆಯಂತಹ ರಚನೆಯನ್ನು ಸೀತೆಸೆರಗು ಎಂಬುವುದಾಗಿ ನಿರೂಪಿಸುವುದು ಇತ್ಯಾದಿ. ಕೆಲವು ವೇಳೆ ಸ್ಥಳ ನಾಮಗಳನ್ನು ಐತಿಹ್ಯಗಳು ವಿವರಿಸುತ್ತವೆ. ಇತಿಹಾಸವು ವಾಸ್ತವವಾಗಿ ನಡೆದಿರುವ ಘಟನೆಗಳನ್ನು ಖಚಿತ ಆಧಾರಗಳ ಮೂಲಕ ಸ್ಪಷ್ಟಪಡಿಸಿದರೆ, ಐತಿಹ್ಯಗಳು ನಿಜವಾಗಿ ನಡೆದದ್ದು ಎಂದು ನಂಬಿ ಜನಪದರು ನಿರೂಪಿಸುತ್ತಾರೆ. ಇವುಗಳಿಗೆ ಯಾವುದೇ ಲಿಖಿತ ಆಧಾರಗಳಿಲ್ಲ. ಇವು ಕೇವಲ ಮೌಖಿಕ ಸಂಪ್ರದಾಯದಲ್ಲಿ ಬೆಳೆದು ಬಂದಿವೆ.

"ಐತಿಹ್ಯಗಳು ನೇರವಾಗಿ ಇತಿಹಾಸವನ್ನು ದಾಖಲಿಸುವ, ವಿಮರ್ಶಿಸುವ ಕೆಲಸಕ್ಕೆ ಹೋಗುವುದಿಲ್ಲ. ಇತಿಹಾಸದಲ್ಲಿ ಸೇರದ ಆದರೆ ಇತಿಹಾಸವಾಗಿರುವ ಸಂಗತಿಗಳನ್ನು ಅವಲಂಬಿಸಿರುತ್ತವೆ. ಪರಂಪರೆಯನ್ನು ಸದಾ ಜೀವಂತವಾಗಿಡುವುದರಿಂದ ಐತಿಹ್ಯಗಳು ಇಂದಿಗೂ ಸೃಷ್ಟಿಯಾಗುತ್ತಲೇ ಇರುತ್ತವೆ."[೧೦] ಐತಿಹ್ಯಗಳು ತಮ್ಮ ಸುತ್ತ ಮುತ್ತಲ

ಜಗತ್ತಿಗೆ ಸಂಬಂಧಿಸಿರುವುದರಿಂದ ಇದು ಕೇಳುಗರಿಗೆ ಮತ್ತು ಹೇಳುಗರಿಗೆ ತೀರಾ ಹತ್ತಿರವೆನಿಸುತ್ತದೆ. ಕೇಳುಗರಿಗೆ ಅದರ ಪರಿಣಾಮ ನೇರವಾಗಿರುತ್ತದೆ. ಇವುಗಳಲ್ಲಿ ವ್ಯಕ್ತಿಪ್ರಧಾನ ಐತಿಹ್ಯಗಳು ಮುಖ್ಯವಾಗಿವೆ. ಉದಾಹರಣೆಗೆ ರಾಮ, ಕೃಷ್ಣ, ಹನುಮಂತ, ಸೀತೆ, ಪರಶುರಾಮ ಮುಂತಾದ ಪೌರಾಣಿಕ ವ್ಯಕ್ತಿಯ ಐತಿಹ್ಯಗಳು ಸೇರುತ್ತವೆ. ಸ್ಥಳ ಪ್ರಧಾನ ಐತಿಹ್ಯಗಳ ಹುಟ್ಟಿಗೆ ಕೆಲವೊಂದು ಅವಶೇಷ ವಸ್ತುಗಳು, ಸ್ಥಳಗಳು, ಬೆಟ್ಟ-ಗುಡ್ಡ, ಹೆಬ್ಬಂಡೆ, ಕೆರೆ-ಕಟ್ಟೆ, ಆಳವಾದ ಬಾವಿ, ಆಯುಧ, ಉಡುಗೆ-ತೊಡುಗೆ, ಮರ-ಗಿಡಗಳು ಕಾರಣವಾಗುತ್ತವೆ. ಜನಪದರು ಕೊಡುವ ಇಂತಹ ಐತಿಹ್ಯಗಳ ವಿವರಣೆಗಳಲ್ಲಿ ವೈಜ್ಞಾನಿಕತೆಯ ಅಭಾವ ಎದ್ದು ಕಾಣುವ ಅಂಶವಾಗಿದೆ. ಆದರೂ ಒಬ್ಬನ ನಂಬಿಕೆ ಹಲವರ ನಂಬಿಕೆಯಾಗಿ ಅದು ಐತಿಹ್ಯವಾಗಿ ವಿಸ್ತಾರಗೊಂಡು ಕೊನೆಗೆ ಪುರಾಣವಾಗಿ ಬೆಳೆದು ಬಿಡುತ್ತದೆ. ಇವು ನಿರ್ದಿಷ್ಟ ಉದ್ದೇಶಗಳಿಗಾಗಿ ರಚನೆಯಾಗಿ ನಿರ್ದಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಆರಾಧನಾ ದೈವಗಳ ಬಗೆಗೆ ಜನರಲ್ಲಿ ಭಯ ಭಕ್ತಿಯನ್ನು ಮೂಡಿಸುವುದಲ್ಲದೆ ಅದನ್ನು ನಿರಂತರವಾಗಿ ಕಾಪಾಡುವ ಕೆಲಸದ ಜೊತೆಗೆ ಧಾರ್ಮಿಕ ಪರಂಪರೆಗಳ ನಡುವೆ ನಡೆದಿರಬಹುದಾದ ಸಂಘರ್ಷವನ್ನು ಬಿಂಬಿಸುತ್ತವೆ. ಕೆಲವೊಮ್ಮೆ ದೈವ ಸಂಬಂಧಿ ಆಚರಣೆಗಳ ಸಂದರ್ಭದಲ್ಲಿ ಕಂಡುಬರುವ ಪವಾಡಗಳು ಪುರಾಣ ಸಂಬಂಧದ ಐತಿಹ್ಯಗಳಾಗಿ ಉಳಿದು ಬರುತ್ತಿರುವುದನ್ನು ಗಮನಿಸಬಹುದು.

ಈಗಾಗಲೇ ಜನಪದರಲ್ಲಿ ತಾವು ಆರಾಧಿಸುವ ದೈವಗಳು, ತಮ್ಮ ಸಮುದಾಯದ ಸಾಂಸ್ಕೃತಿಕ ವೀರರ ಕಥೆಗಳು ಹಾಸುಹೊಕ್ಕಾಗಿರುವುದರಿಂದ ಇಲ್ಲಿನ ಪಾತ್ರಗಳನ್ನೂ, ಘಟನೆಗಳನ್ನು ಐತಿಹ್ಯಗಳಲ್ಲಿ ಬಳಸಿಕೊಳ್ಳುವಂತೆ ಮಾಡಿವೆ ಎನಿಸುತ್ತದೆ. ಜನಪದರ ಗಮನಕ್ಕೆ ಬಾರದ ವಸ್ತುವೇ ಇಲ್ಲ. ಅವನ್ನು ನೋಡಿದಾಗ ಮೂಡಿದ ಭಾವನೆಗಳು ಅವನ ಶುದ್ಧ ಸ್ವಚ್ಛಂದ ಕಲ್ಪನಾ ಪ್ರತಿಭೆಯ ಮೂಲಕ ಹೊರಬರುವಾಗ ಐತಿಹ್ಯಗಳು ಪುರಾಣ ರೂಪ ಪಡೆಯುತ್ತವೆ. ಐತಿಹ್ಯಗಳಿಗೂ, ಪುರಾಣಗಳಿಗೂ ಹೊಕ್ಕಳ ಬಳ್ಳಿ ಸಂಬಂಧವುಂಟು. ಪುರಾಣ, ಐತಿಹ್ಯಗಳನ್ನು ಅರಿಯಲು ಶಾಸನಗಳನ ಪುರಾವೆಗಳಾಗಲಿ, ಸಾಹಿತ್ಯ ಕೃತಿಗಳ ಆಧಾರವಾಗಲೀ ಅತ್ಯಂತ ಕಡಿಮೆ. ಇತಿಹಾಸ ಐತಿಹ್ಯಕ್ಕೆ ಆಧಾರವಾದರೆ, ಐತಿಹ್ಯ ಪುರಾಣಕ್ಕೆ ಮೂಲವಾಗಿದೆ. ಈ ಹಿನ್ನೆಲೆಯಲ್ಲಿ ದೈವಗಳ ಕಥೆಯ ಮೂಲ ಸ್ವರೂಪವನ್ನು ತಿಳಿಯಲು ಪುರಾಣ ಮತ್ತು ಐತಿಹ್ಯಗಳೇ ಆಧಾರವಾಗಿದೆ.

ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ಸುಮಾರು ಹದಿನೆಂಟು ಕಿ.ಮೀ ದೂರದಲ್ಲಿರುವ ಗ್ರಾಮವೇ 'ಪುರ್ಲೆಹಳ್ಳಿ'. ಇದು ಪ್ರಾಕ್ಚಾರಿತ್ರಿಕ ನೆಲೆಯನ್ನು ಹೊಂದಿದೆ. ಈ ಗ್ರಾಮದ ಪೂರ್ವಕ್ಕೆ ಮೂರು ಹೆಕ್ಟೇರ್ ಪ್ರದೇಶದಲ್ಲಿ ಹಾಳು ಹೊಲ, ಬೂದಿ ದಿಬ್ಬ ಇದೆ. ದಕ್ಷಿಣಕ್ಕೆ ಕ್ಯಾತಪ್ಪನ ನೆಲೆಯ ವಸತಿ ದಿಬ್ಬವೂ ಇದೆ. ಈ ನೆಲೆಯ ದಕ್ಷಿಣಕ್ಕೆ

ಹಿರಿಯೂರು ತಾಲ್ಲೂಕು, ಪಶ್ಚಿಮಕ್ಕೆ ಚಳ್ಳಕೆರೆ ತಾಲ್ಲೂಕು. ಪೂರ್ವಕ್ಕೆ ಕಲ್ಯಾಣದುರ್ಗ ತಾಲ್ಲೂಕು, ಉತ್ತರಕ್ಕೆ ಮೊಳಕಾಲ್ಮೂರು ತಾಲ್ಲೂಕುಗಳಿಂದ ಸುತ್ತುವರೆದಿದೆ.

ಈ ಪ್ರದೇಶದಲ್ಲಿ ಹಿಂದೆ ಕಾಡುಗೊಲ್ಲ ಬುಡಕಟ್ಟು ಸಮುದಾಯದ ದನಗಾಹಿಯಾದ 'ಪುರ್ಲೆಗಟ್ಟಪ್ಪ' ಎಂಬ ವ್ಯಕ್ತಿ ವಸತಿ ದಿಬ್ಬದ, ಹೊನ್ನಬಂಡೆ, ಕುರ್ಕತಿಪ್ಪೆ ಈ ಬಯಲ ಪ್ರದೇಶದಲ್ಲಿ ದನ ಮೇಯಿಸಿಕೊಂಡು ನೆಲೆಸಿದ್ದನು. ಒಮ್ಮೆ ಶತ್ರುಗಳೊಂದಿಗೆ ಹೋರಾಡಿ ತನ್ನ ದನಗಳನ್ನು ರಕ್ಷಣೆ ಮಾಡಿಕೊಂಡಿದ್ದ ಎಂಬುವುದರ ಬಗ್ಗೆ ಈ ಗ್ರಾಮದಲ್ಲಿ ವೀರಗಲ್ಲೊಂದನ್ನು ನೆಟ್ಟಿರುವುದು ಕಂಡುಬರುತ್ತದೆ. ಪುರ್ಲೆಗಟ್ಟಪ್ಪ ಇಲ್ಲಿಯೇ ನೆಲೆಸಿದ್ದರಿಂದ ಈ ಗ್ರಾಮಕ್ಕೆ ಪುರ್ಲೆಹಳ್ಳಿ ಎಂಬ ಹೆಸರು ಬಂದಿದೆ. ವೀರಗಾರನಾದ ಪುರ್ಲೆಗಟ್ಟಪ್ಪನನ್ನು ಕಾಡುಗೊಲ್ಲ ಸಮುದಾಯದವರು ಇಂದಿಗೂ ದೇವರ ರೂಪದಲ್ಲಿ ಆರಾಧಿಸ ತೊಡಗಿದ್ದಾರೆ. "ಸ್ಥಳ ನಾಮದ ನಿಷ್ಪತ್ತಿಯನ್ನು ಗಮನಿಸಿದಾಗ ಪುರಲೇ, ಪುರ್ಲೆ, ಪುರ್ಲ ಎಂದರೆ ಮುಳ್ಳು, ಕಂಟಿ ಹಾಗೂ ಕಡ್ಡಿ ಎಂದರ್ಥ. ಕಳ್ಳೆ, ಮುಳ್ಳು, ಕಡ್ಡಿಗಳಿಂದ ಕೂಡಿದ ಹಳ್ಳಿಯೇ ಪುರ್ಲೆಹಳ್ಳಿ ಎಂದಾಗಿರಬಹುದು ಎಂದು ಇತಿಹಾಸದ ಖ್ಯಾತ ಸಂಶೋಧಕ ಎಸ್.ಜಿ.ರಾಮದಾಸರೆಡ್ಡಿ ಅಭಿಪ್ರಾಯಪಟ್ಟಿದ್ದಾರೆ."[೧೧] ವಸತಿ ದಿಬ್ಬದ ಪ್ರದೇಶದಲ್ಲಿ ಮಾನವ ವಸತಿಯ ನೆಲೆಯ ಕುರುಹುಗಳು, ಜಾನುವಾರುಗಳ ರಕ್ಷಣೆಗಾಗಿ ನಿರ್ಮಾಣಗೊಂಡಿರುವ ಕಲ್ಲಿನಗೂಡುಗಳು, ಮಾಸ್ತಿ ಹಾಗೂ ವೀರಗಲ್ಲುಗಳನ್ನು ಹೊರತು ಪಡಿಸಿದರೆ, ಯಾವುದೇ ತರಹದ ಕೋಟೆ ಕೊತ್ತಲುಗಳಾಗಲೀ, ಅವಶೇಷಗಳಾಗಲೀ ಕಂಡುಬರುವುದಿಲ್ಲ. ಎತ್ತರವಾದ, ಪ್ರಮುಖವಾದ ಯಾವ ಬೆಟ್ಟಗಳ ಸಾಲು ಇಲ್ಲದೆ ಚದುರಿದಂತೆ ಕೆಲವು ಕಣಶಿಲೆಯ ಸಾಲುಗಳು, ಬೂದು ಮಿಶ್ರಿತ ಕೆಂಪುಮಣ್ಣಿನ ದಿಬ್ಬಗಳು ಇವೆ. ಬಿಳಿ ಗ್ರಾನೈಟ್ ಬಂಡೆಗಳು, ಕಣಶಿಲೆ, ಶಿಸ್ಟ್‌ಕಲ್ಲು, ಕ್ವಾಟ್ರಜೈಟ್, ಸಮೂಹಶಿಲೆ ಇತರೆ ಕಲ್ಲುಗಳಿಂದ ಈ ನೆಲೆ ಆವರಿಸಿದೆ. ಈ ಪ್ರದೇಶ ವೇದಾವತಿ ನದಿ ಎಡ ದಂಡೆ ಮೇಲಿರುವುದರಿಂದ ಇಲ್ಲಿ ಸೂಕ್ಷ್ಮಶಿಲಾಯುಗ, ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ಸಂಸ್ಕೃತಿ ಮತ್ತು ಇತಿಹಾಸ ಆರಂಭ ಕಾಲದ ಕೆಲವು ಅವಶೇಷಗಳು ಇಲ್ಲಿ ಕಂಡುಬರುತ್ತವೆ. ಆದ್ದರಿಂದ ಈ ಪ್ರದೇಶದಲ್ಲಿನ ಪ್ರಾಕ್ಚಾರಿತ್ರಿಕದ ಕುರುಹು ಮತ್ತು ಐತಿಹ್ಯಗಳ ಅಧ್ಯಯನದ ಮೂಲಕ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದು.

ಅಡವಣ್ಣ ಮತ್ತು ಗಿಡವಣ್ಣ ಎಂಬ ಇಬ್ಬರು ಅಣ್ಣ ತಮ್ಮಂದಿರು ಅಡವಿಯಲ್ಲಿ ದನಕಾಯುತ್ತಾ, ಆಟವಾಡುತ್ತಿದ್ದರಂತೆ. ಆಗ್ಗೆ ದಾರಿಯಲ್ಲಿ ಒಬ್ಬ ಜಂಗಮ ಬಂದು ನಿಮಗೆ ದೇವರು ಕೊಡುತ್ತೀನಿ ಕುರಿಪಿಚ್ಚಿಗೆ ಕಲ್ಲಿನ ಹರಳುಗಳನ್ನು ತೆಗೆದುಕೊಂಡು ಬನ್ನಿ ಎಂದು ಹೇಳಿದನಂತೆ. ಆಗ ಅಡವಣ್ಣ ಮತ್ತು ಗಿಡವಣ್ಣ ಇಬ್ಬರು ಓಡಿ ಹೋಗಿ ಕುರಿಪಿಚ್ಚಿಗೆ ಹಾಗೂ ಕಲ್ಲಿನ ಹರಳುಗಳನ್ನು ಆಯ್ದುಕೊಂಡು ಹೋಗಿ ಜಂಗಮನ ಕೈಗೆ

ಕೊಟ್ಟರಂತೆ. ಆತ ಅವುಗಳನ್ನು ಬಿಳಿಬಟ್ಟೆಯೊಳಕ್ಕೆ ಹಾಕಿ ಗಂಟುಕಟ್ಟಿದನಂತೆ. ನಂತರ ಆ ಗಂಟನ್ನು ಎಂದಿಗೂ ಬಿಚ್ಚಿ ನೋಡಬಾರದು. ಬಿಚ್ಚಿ ನೋಡಿದರೆ ಅದರಲ್ಲಿ ಕಲ್ಲು, ಕುರಿಪಿಚ್ಚಿಗೆ ಇವೆ. ನಾನು ಸುಳ್ಳು ಹೇಳುತ್ತಿಲ್ಲ ಸತ್ಯವನ್ನೇ ಹೇಳುತ್ತೇನೆ. ಈ ಹಿಡಿಗಂಟನ್ನು ಯಾರಿಗೂ ಕಾಣದೇ ಇರುವ ಜಾಗದಲ್ಲಿ ಇಟ್ಟು  ನಲವತ್ತೊಂದು ದಿನ ಪೂಜೆ ಮಾಡಿ ಎಂದು ಸಲಹೆ ನೀಡಿದನಂತೆ. ಅಡವಣ್ಣ ಮತ್ತು ಗಿಡವಣ್ಣ ಇಬ್ಬರು ಆ ದಿನ ಸಂಜೆ ದನಗಳನ್ನು ಮನೆಗೆ ಹೊಡೆದುಕೊಂಡು ಹೋಗಿ ಯಾರಿಗೂ ಕಾಣದಿರುವ ಊರ ಹೊರಗಿನ ತಿಪ್ಪೆಯಲ್ಲಿ ಬಟ್ಟೆಗಂಟನ್ನು ಹೂಳಿ ಅದಕ್ಕೆ ಪ್ರತಿ ದಿನ ಹಾಲೊಯ್ದು ಪೂಜಿಸುತ್ತಿದ್ದರಂತೆ. ತಿಪ್ಪೆ ಮೇಲ್ಹಾಕಿದ ಹಾಲು ಇಂಗಿ ಹೋಗುತ್ತಿದ್ದವಂತೆ. ಹೀಗೆ ಸುಮಾರು ಮುವತ್ತೊಂಬತ್ತನೆ ದಿನ ಆಯಿತಂತೆ ಅಡವಣ್ಣ ಮತ್ತು ಗಿಡವಣ್ಣ ತಿಪ್ಪೆಯೊಳಗೆ ಇದ್ದ ದೇವರಿಗೆ ಹಾಲು ಹಾಕುತ್ತಿರುವುದನ್ನು ಊರಿನ ಜನ ನೋಡಿಕೊಂಡರಂತೆ. ಎಲ್ಲರೂ ತಿಪ್ಪೆ ಹತ್ತಿರ ಓಡಿ ಹೋಗಿ ನೋಡಿದರಂತೆ ದಿನಾಲು ತಿಪ್ಪೆಯೊಳಗೆ ಹಾಕಿದ್ದ ಹಾಲು ಹೆಪ್ಪುಗಟ್ಟಿ ಅದು ಲಿಂಗದ ಆಕಾರದಲ್ಲಿ ಕಾಣುತ್ತಿತ್ತಂತೆ. ಅದನ್ನೇ ಹಾಲುಕುಡಿದಪ್ಪ- ಹಾಲುಗುಡದಪ್ಪ ಎಂದು ಕರೆದುಕೊಂಡು ಅಂದಿನಿಂದ ಇಂದಿನವರೆಗೂ ಆ ದೇವರನ್ನು ಪೂಜಿಸಿ ಆರಾಧಿಸುತ್ತಿದ್ದಾರೆ. ಆ ದೇವರ ಜಾತ್ರೆ ಪ್ರತಿವರ್ಷ ಜರುಗುತ್ತದೆ.

ಹಿಂದೆ ಅಣ್ಣ-ತಮ್ಮಗಳ ನಡುವಿನ ವ್ಯಾಜ್ಯದ ಕಾರಣ ಈ ದೇವರನ್ನು ಬಾವಿಯಲ್ಲಿ ಹಾಕಿದರಂತೆ. ಹೊಂದಾಣಿಕೆ ನಂತರ ದೇವರನ್ನು ಬಾವಿಯಿಂದ ಹೊರ ತೆಗೆಯುವಾಗ ಪೂರಾ ಬಾಯಿಬತದ ತಾಳಿಬೊಟ್ಟು ಮೊದಲು ಯರಬಳ್ಳಿಯವರಿಗೆ ಸಿಕ್ಕಿತಂತೆ. ಆದ್ದರಿಂದ ಅವರು ಪೂರ್ಣಬತದವರಾದರು ಎಂಬ ನಂಬಿಕೆ ಇದೆ. ಹುರುಳಿ-ನವಣೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಲ್ಲದೆ, ಬಾಯಿಗೆ ಬಟ್ಟೆಕಟ್ಟಿಕೊಂಡು ದೇವರ ಪೂಜೆ ಮಾಡಲು ತೊಡಗಿದ್ದರಿಂದ ಅದು ಬಾಯಿಬತದ ದೇವರಾಯಿತು. ಮತ್ತು ಚನ್ನಮ್ಮನಾಗತಿಹಳ್ಳಿಯವರಿಗೆ ದೇವರು ಲಿಂಗದ ರೂಪದಲ್ಲಿ ಸಿಕ್ಕಿದ್ದರಿಂದ ಅವರು ಅರ್ಧಬತಕ್ಕೆ ನಿಂತರು. ಆದ್ದರಿಂದ ಅವರು ಅಂದಿನಿಂದ ಇಂದಿನವರೆಗೆ ವರ್ಷದಲ್ಲಿ ಆರು ತಿಂಗಳು ಮಾತ್ರ ಹುರುಳಿ-ನವಣೆ ಬಳಸುವುದು ಕಂಡುಬರುತ್ತದೆ.

ಮೂಡಲ ದಿಕ್ಕಿನಲ್ಲಿ ಹೇಮರೆಡ್ಡಿ ಮತ್ತು ಭೀಮರೆಡ್ಡಿ ಮನೆಯ ಹುರುಳಿ-ನವಣೆ ಧಾನ್ಯಗಳ ವಾಡೇವಿನೊಳಗೆ ಹೂತ್ತಿಟ್ಟಿದ್ದರಂತೆ ಅದನ್ನು ಸಹಿಸಿಕೊಳ್ಳದ ಕ್ಯಾತಪ್ಪ ಬೊಮ್ಮಣ್ಣನೊಡನೆ ಚಿತ್ರದುರ್ಗಕ್ಕೆ ಬಂದಿತ್ತಂತೆ. ಅಲ್ಲಿ ತುರುಕರ ಕಾಟ ತಡಿಯಲಾರದೆ ಗಾಣದಾಳಿಗೆ ಬಂದು ನೆಲೆಯೂರಿತಂತೆ. ಇಲ್ಲಿನ ದನಗಾಹಿಯೊಬ್ಬ ಅದನ್ನು ಕಟ್ಟುನಿಟ್ಟಿನಿಂದ ಪೂಜಿಸಿದನಂತೆ.  ಹೀಗೆ ಅವನ ಕುಟುಂಬ ಬೆಳೆಯುತ್ತಾ ಬಂದು ಒಂದು ಗ್ರಾಮವೇ ಆಯಿತಂತೆ. ಆ ಊರೇ ಇಂದು ಸೋಮನಹಳ್ಳಿಯಾಗಿದೆ. ಈ ದೇವರಿಗೆ ನಂದಿಹಳ್ಳಿ

ಗುಡಿಕಟ್ಟಿಗೆ ಸೇರಿದ ಬೊಮ್ಮನೋರು, ಕೋಣನೋರು, ಸನ್ನೋರು ಮತ್ತು ಅಬ್ಬಗ್ಲೋರು, ಅಜ್ಜೇರು ಬೆಡಗಿನ ಕಾಡುಗೊಲ್ಲರು ಕೇತಪ್ಪನನ್ನು ಕ್ಯಾತೇಲಿಂಗ ಎಂಬ ಹೆಸರಿನಲ್ಲಿ ಆರಾಧಿಸಿದರಂತೆ. ದೇವರಿಗೆ ಆಗದ ಧಾನ್ಯಗಳನ್ನು ಅವರು ಯಾವತ್ತೂ ಬಳಕೆ ಮಾಡದೇ ಕಟ್ಟುನಿಟ್ಟಿನ ವ್ರತ ಪರಿಪಾಲನೆ ಮಾಡಿಕೊಂಡು ಬಂದಿದ್ದಾರೆ. ಹುಟ್ಟುವ ಮಗು ಗಂಡಾದರೆ ಕ್ಯಾತಪ್ಪ, ಹೆಣ್ಣಾದರೆ ಕ್ಯಾತಮ್ಮ ಹೀಗೆ ಪ್ರತಿ ಮಗುವಿಗೂ ಮೊದಲಿಗೆ ದೇವರ ಹೆಸರನ್ನು ಇಡುತ್ತಾರೆ. ಪ್ರತಿ ಶಿವರಾತ್ರಿ ಸಂದರ್ಭದಲ್ಲಿ ಮೂರು ದಿನ ಜಾತ್ರಾಚರಣೆ ಮಾಡುತ್ತಾರಂತೆ.

ಊರ ಹೊರವಲಯದಲ್ಲಿದ್ದ ಕ್ಯಾತೇದೇವರು, ಒಮ್ಮೆ ಗೌಡ ಹಾಗೂ ಪೂಜಾರಿಗೆ ಕನಸಿನಲ್ಲಿ ಹೋಗಿ ನಾನು ಚಿತ್ರದುರ್ಗದಿಂದ ಬಂದಿದ್ದೇನೆ ನನ್ನನ್ನು ತೆಗೆದುಕೊಂಡು ಹೋಗಿ ಪ್ರತಿಷ್ಠಾಪನೆ ಮಾಡಿಕೊಂಡು ಪೂಜಿಸು ಎಂದು ಹೇಳಿದ್ದಲ್ಲದೆ, ಹುಟ್ಟುವ ಮೊದಲ ಮಕ್ಕಳಿಗೆ ಕ್ಯಾತಪ್ಪ, ಕ್ಯಾತಮ್ಮ ಎಂಬ ಹೆಸರನ್ನು ಇಟ್ಟು ಕರೆಯಿರಿ, ನಿಮಗೆ ಒಳ್ಳೆಯದು ಮಾಡುತ್ತೇನೆ ಎಂದು ಹೇಳಿತ್ತಂತೆ. ಆ ದೇವರ ಮಾತಿನಂತೆ ಗೌಡ ಹಾಗೂ ಪೂಜಾರಿ ಇಬ್ಬರೂ ನಡೆದು ಕೊಂಡರಂತೆ. ಇಂದಿಗೂ ಆ ಊರಿನಲ್ಲಿ ಹುಟ್ಟಿದ ಮಕ್ಕಳಿಗೆ ಕ್ಯಾತಮ್ಮ, ಕ್ಯಾತಪ್ಪ ಎಂಬ ಹೆಸರು ಕರೆದು ನಂತರ ಬೇರೆ ಹೆಸರು ನಾಮಕರಣ ಮಾಡುವ ಪದ್ದತಿ ಇದೆ. ಪ್ರತಿ ಸೋಮವಾರ ಅಕ್ಕಿ ಅನ್ನ ಮಾಡಿ ಹಾಲಿನೊಂದಿಗೆ ಕಲಸಿ ಉಂಡೆ ಮಾಡಿ ದೇವರ ಪೆಟ್ಟಿಗೆಮುಂದೆ ಇಡುತ್ತಾರೆ. ಅನ್ನದುಂಡೆಯನ್ನು ದೇವರು ತಿಂದರೆ ಮಾತ್ರ ಆ ದಿನ ದೇವರಿಗೆ ಪೂಜೆ ಮಾಡುತ್ತಾರೆ. ಇಲ್ಲವಾದಲ್ಲಿ ದೇವರಿಗೆ ಅಂಟು-ಮುಂಟು ಆಗಿದೆ ಎಂದು ಆ ದಿನ ಪೂಜೆ ಸಲ್ಲಿಸುವುದಿಲ್ಲ. ಇಲ್ಲಿಯೂ ಹುರುಳಿ-ನವಣೆ ಸಂಪೂರ್ಣವಾಗಿ ನಿಷಿದ್ದ. ಇದು ಗುಬ್ಬಿ ಕ್ಯಾತೇದೇವರೆಂದೇ ತುಂಬಾ ಪ್ರಸಿದ್ಧಿ ಪಡೆದಿದೆ. ಇಲ್ಲಿ ಶಿವರಾತ್ರಿಯಲ್ಲಿ ದೇವರನ್ನು ಹೊಳೆಗೆ ಹೊರಡಿಸುವ ಪದ್ಧತಿ ಇದೆ.

ಹಿಂದೆ ಕೂಸ್ಫಟ್ಟದಲ್ಲಿ ಈ ದೇವರು ನೆಲೆಸಿತ್ತು. ಅಲ್ಲಿ ರೆಡ್ಡಿಗೊಲ್ಲರು ಪೂಜಿಸುತ್ತಿದ್ದರಂತೆ. ನಂತರ ಈ ದೇವರು ದಮ್ಮನಕುಪ್ಪೆಗೆ ಬಂದು ನೆಲೆಸಿತ್ತಂತೆ. ಅಲ್ಲಿಂದ ನಮ್ಮ ಪೂರ್ವಿಕರು ಈ ದೇವರನ್ನು ಹೊತ್ತು ದೇವರಹಟ್ಟಿಗೆ ತಂದು ಅದಕ್ಕೆ ಗುಡಿ ಕಟ್ಟಿ ಕ್ಯಾತೇಶ್ವರ ಎಂಬ ಹೆಸರಿನಲ್ಲಿ ಪೂಜಿಸಿದರಂತೆ. ಕೆಲವರು ಇಲ್ಲಿಂದಲೇ ಘಂಟೆ ಧೂಪದಾರತಿ ಇತರೆ ಪರಿಕರಗಳನ್ನು ತೆಗೆದುಕೊಂಡು ಆ ವಸ್ತುಗಳನ್ನೇ ದೇವರನ್ನಾಗಿ ಮಾಡಿಕೊಂಡು ಲಕ್ಕೇನಹಳ್ಳಿಯಲ್ಲಿ ಪೂಜಿಸತೊಡಗಿದರು. ಇನ್ನು ಕೆಲವರು ಆ ದೇವರನ್ನು ಆಮೇಲೆ ಪುರದಹಟ್ಟಿಗೆ ಕೊಂಡೊಯ್ದರು. ಅಲ್ಲಿ ಸಹ ದೇವಸ್ಥಾನ ನಿರ್ಮಾಣ ಮಾಡಿಕೊಂಡು ಸೋಮವಾರ ಆ ದೇವರಿಗೆ ಹಿಪ್ಪೆ ಎಣ್ಣೆ ಇಲ್ಲವೆ ಅರಳೆ ಎಣ್ಣೆ ದೀಪ

ಹಚ್ಚಿ ಒಂದೊತ್ತೀಲಿ ವಿಶೇಷ ಪೂಜೆ ಸಲ್ಲಿಸುವ ಪದ್ಧತಿ ಇಂದಿಗೂ ಇದೆ. ಈ ಹಿಂದೆ ಕ್ಯಾತೇದೇವರು ಸಿದ್ದರ ಬೆಟ್ಟ-ಶಿವಗಂಗೆ ಹತ್ತಿರದ ಸಿದ್ದಾಪುರದಲ್ಲಿ ಒಕ್ಕಲಿಗರ ಮನೆಯಲ್ಲಿ ನೆಲೆಸಿತ್ತಂತೆ. ಅಲ್ಲಿನ ಪೂಜಾರಿ ಪೂಜಿಸಲು ನಿರ್ಲಕ್ಷ್ಯ ಮಾಡಿದ್ದರಿಂದ ಈ ಕ್ಯಾತೇದೇವರು ಮ್ಯಾಸಬೇಡರಿಗೆ ಒಲಿದುಕೊಂಡಿತು. ಅವರೂ ನಿರ್ಲಕ್ಷ್ಯ ಮಾಡಿದರು. ಕೆಲ ದಿನಗಳಲ್ಲಿ ಮ್ಯಾಸಬೇಡರ ಮನೆಯಲ್ಲಿ ದನ ಕಾಯುತ್ತಿದ್ದ ಹುಡುಗನೊಬ್ಬ ಕ್ಯಾತಪ್ಪನನ್ನು ತಂದು ಅದರಂಗಿ ಗ್ರಾಮದಲ್ಲಿ ಪೂಜಿಸ ತೊಡಗಿದನು. ಪೂಜಾರಿ ಬೈಲಪ್ಪ ಅದರಂಗಿಯಿಂದ ದೇವರನ್ನು ಕದ್ದು ತನ್ನ ಹಟ್ಟಿಯಲ್ಲಿ ಪ್ರತಿಷ್ಠಾಪಿಸಿದ. ಆದ್ದರಿಂದ ಹಟ್ಟಿಗೆ ದೇವರಹಟ್ಟಿ ಎಂಬ ಹೆಸರು ಬಂದಿತಂತೆ.

ಅಣ್ಣ-ತಮ್ಮಂದಿರು ಒಬ್ಬರಿಗೊಬ್ಬರು ಜಗಳವಾಡಿಕೊಂಡು ದೇವರ ಗುಡಿಯೊಳಗಿದ್ದ ಒಡವೆ ವಸ್ತು ಹಾಗೂ ಪೂಜಾ ಸಾಮಗ್ರಿಗಳನ್ನು ಹೊತ್ಕೊಂಡೋಗಿ ಗುಬ್ಬಿಹಟ್ಟಿ, ಲಕ್ಕೇನಹಳ್ಳಿ ಹಾಗೂ ನಿಟ್ಟೂರಿನ ಪುರದಹಟ್ಟಿ ಅಲ್ಲಲ್ಲಿ ದೇವಸ್ಥಾನ ನಿರ್ಮಾಣ ಮಾಡಿಕೊಂಡು ಕ್ಯಾತೇದೇವರು ಎಂಬ ಹೆಸರಿನಿಂದ ಪೂಜಿಸುತ್ತಿದ್ದಾರೆ. ಅಣ್ಣೆ ಬೆಟ್ಟದಲ್ಲಿದ್ದ ಕ್ಯಾತೆಲಿಂಗ ದೇವರನ್ನು ತರಲು ಹೊರಟಾಗ ಅವನ ಇಬ್ಬರು ಹೆಂಡತಿಯರು ಅಡ್ಡಗಾಲು ಹಾಕಿದ್ದರಿಂದ ಜಡಿಗೊಂಡನಿಗೆ ಸಿಟ್ಟು ಬಂದು 'ಬಿದಿರೆಲೆ ಏಣಿಗೆ ಹೋಗೋ ಹೊತ್ತಿಗೆ ಚಿಕ್ಕ ಮಾಳಿಯ ಸಾವು ಸುದ್ದಿ ಬರಲಿ' ಎಂದು ಶಪಿಸುತ್ತಾನೆ. ಅವನ ಅಪೇಕ್ಷೆಯಂತೆ ಹೆಂಡತಿ ಸತ್ತ ಸುದ್ದಿ ತಿಳಿದು ಮೇಕೆ ಹಾಲನ್ನು ಮನವಾರೆ ಕುಡಿಯುತ್ತಾನೆ. ಕೇವಲ ದೇವರ ಮೇಲಿನ ಭಕ್ತಿ ಮತ್ತು ವ್ಯಾಮೋಹದಿಂದಾಗಿ ತಮ್ಮ ಕರುಳ ಕುಡಿಯನ್ನು ಹೊಸಕಿ ಹಾಕುವ ಸಹಧರ್ಮಿಣಿಯ ಸಾವನ್ನು ಪರೀಕ್ಷಿಸುವ ಈ ಜೀವ ವಿರೋಧಿ ನಿಲುವುಗಳು ಗೊಲ್ಲರ ಕಾವ್ಯಗಳಲ್ಲಿ ಸಿಗುತ್ತವೆ. ಕ್ಯಾತೆಲಿಂಗನನ್ನು ಜಡೆಗೊಂಡ, ಕೆಂಜೆಡಿ, ಜಡೇಲಿಂಗೇಶ್ವರ ಎಂದು ಕರೆಯುತ್ತಾರೆ. ಇಲ್ಲಿ ಪ್ರತಿ ಸೋಮವಾರ ದೇವರ ಹೇಳಿಕೆ ಆಗುತ್ತದೆ. ಆದ ಕಾರಣ ದೂರದ ಊರುಗಳಿಂದ ನೂರಾರು ಜನ ಭಕ್ತರು ಹರಕೆ ತೀರಿಸಲು ಸೇರುತ್ತಾರೆ. ಶಿವರಾತ್ರಿ ವೇಳೆ ಮೂರು ದಿನ ವಿಜೃಂಭಣೆಯಿಂದ ದೇವರ ಜಾತ್ರೆ ನೆರವೇರುತ್ತದೆ. ಹಿನ್ನೆಲೆ-ಮಲೆನಾಡಿನ ಅಣ್ಣೆಬೆಟ್ಟದಲ್ಲಿ ಕ್ಯಾತೆದೇವರು ಇತ್ತು. ಅದನ್ನು ತರಲು ಹೋದ ವ್ಯಕ್ತಿಯೇ ಜಡೇಗೊಂಡ. ಆತ ದೇವರನ್ನು ತರುವಾಗ ದಾರಿ ಮಧ್ಯೆ ಮರಣ ಹೊಂದಿದ. ಆತನ ಹೆಸರಿನಲ್ಲಿ ಈ ದೇವಸ್ಥಾನ ನಿರ್ಮಿಸಿ ಈ ದೇವರನ್ನೇ ಜಡೇಗೊಂಡ, ಜಡೇಲಿಂಗೇಶ್ವರ, ಜಡಿಯಪ್ಪ, ಕೆಂಜೆಡಿಯಪ್ಪ ಹಾಗೂ ಅಜ್ಜಪ್ಪ ಹೀಗೆ ಹಲವು ಹೆಸರುಗಳಿಂದ ಕರೆಯುತ್ತಾರೆ.

ಹಿರಿಯೂರು ತಾಲ್ಲೂಕಿನ ಕೂನಿಕೆರೆಯಿಂದ ದೇವರನ್ನು ತಂದು ಅದನ್ನು ಪ್ರತಿಷ್ಠಾಪಿಸಿದರಂತೆ. ದಪ್ಪಗುಂಟೆ ಕಾಟಮದೇವರು, ಅಜ್ಜಿ ಸಿರಿಯಣ್ಣ, ಬಡಿಕೋಲು

ರಾಮದೇವರು, ಕೆಂಪರಾಯ, ಕೋಲು ದೇವರು, ಧಾರೆ ಚಿತ್ತಮ್ಮ ದೇವರು ಹೀಗೆ ಈ ದೇವರು ಏಳು ಗುಡಿಕಟ್ಟುಗಳನ್ನು ಒಳಗೊಂಡಿದ್ದು, ಒಂದೇ ವಂಶದ ಏಳು ಜನರಿಗೆ ಒಂದೊಂದು ದೇವರು ಮಾಡಿಕೊಟ್ಟು ಕೆಲವರಿಗೆ ನೂರು ಮನೆ ವಕ್ಕಲು, ಇನ್ನು ಕೆಲವರಿಗೆ ಸಾವಿರ ಮನೆ ವಕ್ಕಲು ಕೊಟ್ಟಂತೆ ಹೊನ್ನಜ್ಜಿ ಸಿರಿಯಣ್ಣ ಎಂಬ ಈರಗಾರ. ಈ ಈರಗಾರರನನ್ನೇ ಗಾಣದಾಳಿನಲ್ಲಿ ಹಿರೇ ಕ್ಯಾತೇದೇವರು ಎಂದು ಪೂಜಿಸುತ್ತಿದ್ದಾರೆ. ಈ ದೇವರ ಭಕ್ತರು ಕುಂಬಳ ಕಾಯಿಯನ್ನು ಎಂದೂ ಮುಟ್ಟುವುದಿಲ್ಲ. ಮುಟ್ಟಿದರೆ ಕೇಡಾಗುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಪ್ರತಿ ಶಿವರಾತ್ರಿಗೂ ಮೂರು ನಾಲ್ಕು ದಿನ ದೇವರ ವಿಶೇಷ ಜಾತ್ರೆ ಜರುಗುತ್ತದೆ. ಮೂಡಲ ಸೀಮೆಯಲ್ಲಿ ಕ್ಯಾತಪ್ಪ ಮತ್ತು ಆತನ ತಮ್ಮ ಕುಂಟಕ್ಯಾತಪ್ಪ ಇಬ್ಬರು ದಂಡಿನಲ್ಲಿ ಸೈನಿಕರಾಗಿ ಕರ್ತವ್ಯ ನಿರ್ವಹಿಸುತ್ತಿರುವಾಗ ಶತ್ರುಗಳು ಅವರನ್ನು ಓಡಿಸಿಕೊಂಡು ಬಂದರು. ಆಗ ಅವರಿಬ್ಬರು ಇತ್ತ ಕಾಡಿಗೆ ಬಂದು ನೆಲೆಸಿದರು. ದಂಡಿನಲ್ಲಿದ್ದ ಜನರನ್ನು ರಕ್ಷಣೆ ಮಾಡಿದ್ದರಿಂದ ಆತನೆ ದೇವರು ಎಂಬ ನಂಬಿಕೆ ಸೋಲಿಗರಲ್ಲಿದೆ.

ಚಿತ್ರದುರ್ಗದ ಕರವಿನಕಟ್ಟೆ ಸರ್ಕಲ್‌ನಲ್ಲಿರುವ ಹೀರೆಕಂಬಿ ಕ್ಯಾತೇದೇವರಿಗೆ ಬಹಳ ವರ್ಷಗಳಿಂದ ನಡೆದುಕೊಳ್ಳುತ್ತಿದ್ದರಂತೆ. ದೇವರ ಆಚರಣೆ ವಿಷಯವಾಗಿ ಜಗಳ ಮಾಡಿಕೊಂಡು ದುರ್ಗದಲ್ಲಿ ನಡೆಯುವ ಆಚರಣೆಯನ್ನು ತಿರಸ್ಕರಿಸಿದರಂತೆ. ಅಲ್ಲಿನ ಘಂಟೆ ಮತ್ತು ಧೂಪದಾರತಿಯನ್ನು ತೆಗೆದುಕೊಂಡುಹೋಗಿ ತಮ್ಮ ಗ್ರಾಮದಲ್ಲಿ ಪ್ರತಿಷ್ಠಾಪಿಸಿಕೊಂಡು ಆರಾಧನೆ ಮಾಡಿಕೊಂಡರಂತೆ. ಶಿವರಾತ್ರಿಯಲ್ಲಿ ಎರಡು ದಿನ ಜಾತ್ರೆ ನಡೆಯುತ್ತದೆ. ಒಮ್ಮೆ ಚಿತ್ರದುರ್ಗದಲ್ಲಿ ನಡೆದ ದೇವರ ಉತ್ಸವದಲ್ಲಿ ಅಣ್ಣ–ತಮ್ಮಂದಿರ ನಡುವೆ ಜಗಳ ನಡೆದ ಕಾರಣ ಉತ್ಸವಕ್ಕೆ ಹೋದ ಯಜಮಾನರು ಪೂಜಾ ಸಾಮಾಗ್ರಿ ಹಾಗೂ ಇತರೆ ಪರಿಕರಗಳನ್ನು ಮೊದಲಿಗೆ ನುಲುಗುಂದಕ್ಕೆ ತೆಗೆದುಕೊಂಡು ಬಂದರು, ನಂತರ ಶಂಕರನಹಳ್ಳಿಗೆ, ಆನಂತರ ಕ್ಯಾತನಹಳ್ಳಿ, ಮಾಗಡಿಗೆ ತಂದು ಪ್ರತಿಷ್ಠಾಪಿಸಿ ಆಮೇಲೆ ದಿಂಡದಹಳ್ಳಿಗೆ ತಂದು ಆ ಪರಿಕರಗಳನ್ನು ಪೂಜಿಸಿ ದೇವಸ್ಥಾನ ಮಾಡಿಕೊಂಡರು. ಹೀಗೆ ತಮ್ಮ ಕುರಿ–ದನಗಳನ್ನು ಎಲ್ಲೆಲ್ಲಿ ಮೇಯಿಸಿಕೊಂಡು ಹೋದರೊ ಅಲ್ಲಲ್ಲಿ ದೇವರನ್ನು ಪ್ರತಿಷ್ಠಾಪಿಸಿಕೊಂಡಿದ್ದಾರೆ.

ಕ್ಯಾತಪ್ಪನನ್ನೇ ನರಸಿಂಹಸ್ವಾಮಿ ಹೆಸರಲ್ಲಿ ಪೂಜಿಸುತ್ತಾರೆ. ಇಲ್ಲಿ ಕ್ಯಾತಪ್ಪನಿಗೆ ಹಾಲುಕಂಬಿ, ಉಕ್ಕಿನಕಂಬಿ, ತುಪ್ಪದ ದೀಪ, ದೊಡ್ಡ ಎಡೆ ಪ್ರಮುಖ ಆಚರಣೆಗಳನ್ನು ಆಚರಿಸುತ್ತಾರೆ. ಕ್ಯಾತೆದೇವರ ಪರಿಷೆಯ ದೊಡ್ಡಬುತ್ತಿಯನ್ನು ಯುಗಾದಿ ಹಬ್ಬದ ಮೊದಲ ದಿನ ಆ ನೈವೆದ್ಯ ಸ್ವೀಕರಿಸಿದ ನಂತರ ಬೇವು ಬೆಲ್ಲ ತಿನ್ನುತ್ತಾರೆ. ಏಕೆಂದರೆ ನೈವೆದ್ಯ ದೇವರ ಮೀಸಲು ಎಂಬ ನಂಬಿಕೆ ಇದೆ. ಆ ದಿನದಂದು ಇಪ್ಪತ್ತೊಂದು ಬಾಳೆ ಎಲೆ ಹಾಕಿ

ಹಾಲು-ತುಪ್ಪದಿಂದ ಒಂಬತ್ತು ಜನ ಕೋರಿ ಹುಡುಗರಿಗೆ ಊಟ ಹಾಕುತ್ತಾರೆ. ಇಲ್ಲಿ ಪ್ರತಿ ಶನಿವಾರ ಪೂಜೆ ಹಾಗೂ ಮಹಾ ಮಂಗಳಾರತಿ ಆಚರಣೆಗಳು ನಡೆಯುತ್ತವೆ. ಗುಂಜಗನೂರು ಮತ್ತು ಚನ್ನಮ್ಮನಾಗತಿಹಳ್ಳಿ ಕ್ಯಾತೇದೇವರಿಗೂ ಅವಿನಾವಭಾವ ಸಂಬಂಧವಿದೆ. ಕ್ಯಾತಪ್ಪನ ಕಟ್ಟುನಿಟ್ಟಾದ ವ್ರತಾಚರಣೆಗಳನ್ನೇ ವ್ರತದ ದೇವರನ್ನಾಗಿ ಮಾಡಿಕೊಂಡು ಆತನನ್ನೇ ನಿಂಗ(ಲಿಂಗ)ಣ್ಣ ಅಥವಾ ಬತವಿನ ಅಥವಾ ವ್ರತದ ದೇವರು ಎಂತಲೂ ಕರೆಯುತ್ತಾರೆ.



**ಚಿತ್ರದುರ್ಗ ತರುವಿನಕಟ್ಟೆಯ ಕ್ಯಾತಪ್ಪನ ಹಾಲುಕಂಬಿ**

ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ದೈವಗಳ ಉತ್ಸವ ನಡೆಯುತ್ತದೆ. ಶಿವರಾತ್ರಿ ವೇಳೆಯಲ್ಲಿ ವಸತಿದಿಬ್ಬದಲ್ಲಿ ಜರಗುವ ಕ್ಯಾತಪ್ಪನ ಕಳ್ಳೆಮುಳ್ಳಿನ ದೊಡ್ಡ ಜಾತ್ರೆಗೆ ಕ್ಯಾತಪ್ಪನ ಹೆಸರಿನ ಲಿಂಗಣ್ಣ ದೇವರು ಬರುತ್ತದೆ. ಹೀಗೆ ಕಾಡುಗೊಲ್ಲರ ಸಾಂಸ್ಕೃತಿಕ ನೆಲೆಗಳ ಅಧ್ಯಯನದಲ್ಲಿ ಕ್ಯಾತಪ್ಪನನ್ನು ಕುರಿತಂತೆ ಸಾಕಷ್ಟು ಐತಿಹ್ಯ ಹಾಗೂ ಪುರಾಣಗಳು ಕಂಡುಬರುತ್ತವೆ. ಇವುಗಳನ್ನು ಶೋಧಿಸುವ ಕೆಲಸ ಆಗಬೇಕಿದೆ.

### ೪.೩ ಮೌಖಿಕ ಸಾಹಿತ್ಯದಲ್ಲಿ ಕ್ಯಾತಪ್ಪದೈವದ ಬಾಹುಳ್ಯತೆ

ಕಾಡುಗೊಲ್ಲರಿಗೆ ಸಂಬಂಧಿಸಿದ ಮೌಖಿಕ ಸಾಹಿತ್ಯದಲ್ಲಿ ಮುಖ್ಯವಾಗಿ ಸಾಮಾಜಿಕ ಹಾಗೂ ಧಾರ್ಮಿಕ ಗೀತೆಗಳಲ್ಲಿ ಕ್ಯಾತೇಲಿಂಗನ ಪ್ರಸ್ತಾಪದೊಡನೆ ಬಿಚ್ಚುಗತ್ತಿ ಭರಮಣ್ಣನಾಯಕನ ಪ್ರಸಂಗವೂ ವಿವರವಾಗಿ ಬಂದಿದೆ. ಅಂಬಳಿಕೆ ಹಿರಿಯಣ್ಣ ಅವರು ತಮ್ಮ ಸಂಕಲನವಾದ 'ಕಾಡುಗೊಲ್ಲರ ಜನಪದ ಗೀತೆಗಳು' ಎಂಬ ಸಂಪಾದನಾ

ಕೃತಿಯ ಪ್ರಸ್ತಾವನೆಯಲ್ಲಿ ಈ ರೀತಿ ನಿರೂಪಿಸಿದ್ದಾರೆ. "ಕ್ಯಾತರಲಿಂಗ, ಇದು ಕಾಡುಗೊಲ್ಲರ ಪ್ರಸಿದ್ಧ ದೇವರು. ಕ್ಯಾತರುಲಿಂಗ, ಕಾಟಮುಲಿಂಗ, ಪಾತೇಲಿಂಗ, ಚಿತ್ತರಲಿಂಗ ಮತ್ತು ರಾಮಲಿಂಗ ಎಂಬ ಪಂಚಲಿಂಗಗಳನ್ನು ಈ ಬುಡಕಟ್ಟು ಸಮುದಾಯ ಆರಾಧಿಸುತ್ತಿದೆ. ಒಂದೊಂದು ಲಿಂಗವನ್ನು ದೇವರನ್ನಾಗಿಸಿಕೊಂಡು ಇವರಲ್ಲೇ ಬೇರೆ ಬೇರೆ(ಕುಲ) ಬೆಡಗಿನವರು ಆರಾಧಿಸುತ್ತಾರೆ. ಲಿಂಗಪೂಜೆ ಮಾಡುತ್ತಾರೆ ಎಂಬ ಈ ಅಂಶ ಅವರು ಶೈವಮೂಲದವರೂ ಆಗಿದ್ದಾರೆ ಎಂಬುವುದನ್ನು ಖಚಿತಪಡಿಸುತ್ತದೆ."[೧೨]

ಪಂಚಲಿಂಗಗಳಲ್ಲಿ ಶ್ರೇಷ್ಠವೆಂದು ಪರಿಗಣಿಸಿರುವ ಕ್ಯಾತರುಲಿಂಗನನ್ನು ಕೇದಾರಲಿಂಗ, ಕೇತೇಲಿಂಗ ಮುಂತಾಗಿ ಕರೆಯುತ್ತಾರೆ. ಈ ಲಿಂಗವು ಸೋಮನೋರು, ದೇವರೋರು, ಕೋಣನೋರು, ಬೊಮ್ಮನೋರು ಇನ್ನು ಮುಂತಾದ ಬೆಡಗಿಗೆ ಸೇರಿದ ಆರಾಧ್ಯ ದೈವವಾಗಿದೆ. ಈ ದೈವದ ಬಗೆಗೆ ಹಾಡಿರುವ ಪ್ರಸ್ತುತ ತ್ರಿಪದಿಗಳು ಕ್ಯಾತೇಲಿಂಗ ಕಾಡುಗೊಲ್ಲರನ್ನು ಒಲಿದಿದ್ದು, ಆತನ ಮಹಿಮೆ ಪವಾಡಗಳ ವರ್ಣನೆಯನ್ನು ಸವಿವರವಾಗಿ ಕಟ್ಟಿಕೊಡುತ್ತವೆ. ಆದರೆ ಕ್ಯಾತೇಲಿಂಗನ ಮೂಲ, ಉದ್ಭವ ಸ್ಥಳ ಮತ್ತು ನೆಲೆ ನಿಂತಿರುವ ಬಗೆಗೆ ಹೆಚ್ಚು ಮಾಹಿತಿ ಇಲ್ಲಿ ದೊರೆಯುವುದಿಲ್ಲ. "ಅಳುವನೂರಿನ ಬಾಲಕ ಬೊಮ್ಮಣ್ಣ ಹೇಮರೆಡ್ಡಿ ಪಟ್ಟಕ್ಕೆ ಬಂದು 'ರೆಡ್ಡಿಗುರ' ಮನೆಯಲ್ಲಿ ಆಶ್ರಯ ಪಡೆದು ಗೋವುಗಳನ್ನು ಕಾದುಕೊಂಡಿರುತ್ತಾನೆ. ಸ್ವಭಾವದಿಂದಲೇ ಅನುಪಮ ದೈವಭಕ್ತನಾಗಿದ್ದ ಬೊಮ್ಮಣ್ಣನ ಅಚಲ ನಿಷ್ಠೆಗೆ ಕ್ಯಾತೇಲಿಂಗ ಒಲಿಯುತ್ತಾನೆ. ಇದ್ದಕ್ಕಿದ್ದಂತೆಯೇ ಬೊಮ್ಮಣ್ಣನಿಗೆ ಕ್ಯಾತೇಲಿಂಗನನ್ನು ಹೇಮರೆಡ್ಡಿಯರ ಮನೆಯ 'ಸೋಮಸಲೆಗೆ' ಹೊತ್ತುತರುವಂತೆ ಪ್ರೇರಣೆಯಾಗುತ್ತದೆ."[೧೩] ಕ್ಯಾತೇಲಿಂಗ ಕೆಲಕಾಲ ರೆಡ್ಡಿಗುರ ಮನೆಯಲ್ಲೇ ಇರುತ್ತಾನೆ. ಸಂಕೋಚ ಸ್ವಭಾವಶೀಲನಾದ ಬೊಮ್ಮಣ್ಣ ನಾನು ಹುರುಳಿ-ನವಣೆ ಬೆಳೆಯುವ ಒಕ್ಕಲು ಮಗ; ಸ್ವಾಮಿಯನ್ನು ಸ್ಪರ್ಶಿಸಬಾರದು ಎಂದು ಸಂಕಲ್ಪಿಸಿ; ಬಲಿಷ್ಠರಾಗಿದ್ದ ಹಟ್ಟಿಗೊಲ್ಲರು ಲಿಂಗಣ್ಣನನ್ನು ಬಳಸಿದರೆ ಅವರಿಗೆ ಆ ದೋಷ ಬರುವುದಿಲ್ಲ ಎಂದು ಗೊಲ್ಲರನ್ನು ಒಲಿದುಕೊಳ್ಳಬೇಕೆಂದು ದೇವರಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ. ಅಂತೆಯೇ ಕ್ಯಾತೆಲಿಂಗ ಸ್ವಲ್ಪಕಾಲ ಪುರ್ಲೆಹಳ್ಳಿ ಬಳಿ ವಸತಿದಿಬ್ಬದ ಹಟ್ಟಿಯಲ್ಲಿ ನೆಲೆಗೊಳ್ಳುತ್ತಾನೆ. ಆ ನಡುವೆ ವಸತಿದಿಬ್ಬದ ಹಟ್ಟಿಯಲ್ಲಿರುವ ಗೊಲ್ಲರೊಳಗೆ ಘರ್ಷಣೆಗಳುಂಟಾಗಿ ದೇವರನ್ನು ದೋಷಾರೋಪಣೆಗೆ ಗುರುಪಡಿಸುತ್ತಾರೆ. ಕ್ಯಾತೆಲಿಂಗ ಅದಕ್ಕಾಗಿ ಹತ್ತೆಂಟು ರಾಜ್ಯವನ್ನೆಲ್ಲ ಸುತ್ತಾಡುತ್ತಾನೆ. ಅಷ್ಟಾದರೂ ತನಗೆ ಎಲ್ಲಾ ವಿಧದಲ್ಲಿಯೂ ಒಪ್ಪಿಗೆಯಾಗುವ ಗೊಲ್ಲರು ದೊರಕದಿದ್ದ ಕಾರಣ ಚಿಕ್ಕಮಾಯಾಸಂದ್ರಕ್ಕೆ ಪ್ರಯಾಣ ಮುಂದುವರೆಸುತ್ತಾನೆ. ಅಲ್ಲಿ ಚಿಕ್ಕಮಾಯಾಸಂದ್ರದ ಕರಿಯಣ್ಣನ ನಿರ್ಮಲ ಹೃದಯ, ನಿರ್ವ್ಯಾಜ್ಯ ಪ್ರೀತಿಗೆ ಕಟ್ಟುಬಿದ್ದು ಆತನಿಗೆ ಒಲಿಯುತ್ತಾನೆ.

ಆದರೆ ಅದೇ ವೇಳೆಯಲ್ಲಿ ಚಿತ್ರದುರ್ಗದ ದೊರೆ ಭರುಮಣ್ಣನ ದಂಡು ನಾಡಿನ ಮೇಲೆ ಹೊರಟಿದೆ ಎಂಬ ಸುದ್ದಿ ತಿಳಿದು ಕರಿಯಣ್ಣ ಕಂಗಾಲಾಗುತ್ತಾನೆ. ಪಾಳೆಗಾರರ ದಂಡು ಹಟ್ಟಿಯ ಮೇಲೆ ದಾಳಿ ನಡೆದರೆ ಕ್ಯಾತೆಲಿಂಗನಿಗೆ ಮೈಲಿಗೆಯಾಗುವುದೆಂದು ಅಳುಕುತ್ತಾನೆ. ಅಷ್ಟೇ ಅಲ್ಲದೆ ತಮ್ಮ ದೇವರು ಪಾಳೆಗಾರರ ವಶವಾಗುತ್ತದೆ ಎಂದು ಚಿಂತೆಗೀಡಾಗುತ್ತಾನೆ. ಕ್ಯಾತೆಲಿಂಗ ವ್ಯಸನಗ್ರಸ್ಥನಾದ ಕರಿಯಣ್ಣನಿಗೆ ನಾನಾ ರೀತಿಯಲ್ಲಿ ಸಮಾಧಾನ ನೀಡಿ, ಎಷ್ಟೇ ಕಷ್ಟಬಂದರೂ ಹಟ್ಟಿಯನ್ನು ತ್ಯಜಿಸಬಾರದೆಂದು ಆಗ್ರಹಿಸುತ್ತಾನೆ. ದೊರೆ ಬರುಮಪ್ಪನಾಯಕನ ದಂಡು ಗೊಲ್ಲರಹಟ್ಟಿಯ ಮೇಲೆ ಆಕ್ರಮಣ ನಡೆಸುತ್ತದೆ. ಕರಿಯಣ್ಣ ರಣದಲ್ಲಿ ಏಕಾಂಗಿವೀರನಾಗಿ ವೀರಾವೇಷದಿಂದ ಹೋರಾಡಿ 'ಸಿವನ ಸೆಳಿಮಂಚ' ಸೇರುತ್ತಾನೆ. ದೊರೆಗಳ ದಂಡು ಗೊಲ್ಲರ ದೇವರನ್ನು ಸೆರೆಹಿಡಿದು ದೇವರಿಗೆ ತೊಡಿಸಿದ ಒಡವೆ, ವಸ್ತ್ರಾಭರಣಗಳನ್ನು ಉಚ್ಚಂಗಿದುರ್ಗಕ್ಕೆ ಒಯ್ಯುತ್ತದೆ. ಬರುಮಪ್ಪನ ದುರಾಕ್ರಮಣದಿಂದಾಗಿ ದೇಶಾಂತರ ಓಡಿಹೋಗಿದ್ದ ಗೊಲ್ಲರು ತಮ್ಮ ಹಟ್ಟಿಗೆ ಹಿಂತಿರುಗಿದ ನಂತರ ದೇವರನ್ನು ಮರಳಿ ಪಡೆಯಬೇಕೆಂದು ತೀರ್ಮಾನಿಸಿ ದೊರೆಗೆ ಎತ್ತು ಮುತ್ತುಗಳನ್ನು ಕಪ್ಪಕಾಣಿಕೆಯಾಗಿ ಸಲ್ಲಿಸಿ, ತಮ್ಮ ದೇವರನ್ನು ಬಿಟ್ಟುಕೊಡಬೇಕೆಂದು ವಿಜ್ಞಾಪಿಸಿಕೊಳ್ಳುತ್ತಾರೆ. ಬರುಮಪ್ಪ ಬೇಕೆಂದೆ ಗೊಲ್ಲರ ದೇವರನ್ನು ಹೀನಾಯವಾಗಿ ಅಳಿದು ಶರಣಾಗತರಾದ ಗೊಲ್ಲರನ್ನು ಅಪಮಾನಗೈದು ಅಲ್ಲಿಂದ ಓಡಿಸುತ್ತಾನೆ. ಆವರೆಗೆ ಮೌನವಾಗಿದ್ದ ಕ್ಯಾತೇಲಿಂಗ ಬರಮಪ್ಪನ ಅನೀತಿಯುತವಾದ ಆಳ್ವಿಕೆಗೆ ಪೂರ್ಣ ವಿರಾಮ ಹಾಕಲು ಕಿನ್ನರಿಜೋಗಿ ವೇಷ ಹಾಕುತ್ತಾನೆ.

ಪಟ್ಟಣವಾಸಿಗಳಿಗೆ ಬೆರಗುಂಟುಮಾಡಿ ಗೌರಸಂದ್ರದ ಮಾರಕ್ಕನ ಮೇಲೆ ಉರಿಗಣ್ಣು ಬಿಡುತ್ತಾನೆ. ಮಾರಕ್ಕ ಅಣ್ಣನಿಗೆ ಹೆಗಲಾಗಿ ನಿಂತು ದುರ್ಗದ ದಂಡು ಮಾರ್ಬಲವನ್ನು ನಾಶಗೈಯುತ್ತಾಳೆ. ತನ್ನ ಪಟ್ಟಣದ ಸರ್ವನಾಶವನ್ನು ಕಣ್ಣಾರೆ ಕಂಡ ಬರುಮಪ್ಪ ಕಣಿ ಕೇಳ ಹೊರಡುತ್ತಾನೆ. ಕೊರವಂಜಿ ವೇಷತಾಳಿದ ಮಾರಕ್ಕ ಬರುಮಪ್ಪನಿಗೆ ಕ್ಯಾತೆಲಿಂಗನನ್ನು ಸಾಗುಕಳಿಸಿದರೆ ರಾಜ್ಯ ಕೋಶವೆಲ್ಲಾ ಮರಳಿ ಲಭಿಸುವುದೆಂದೂ ಎಸಗಿದ ಅಪರಾಧ ಕೃತ್ಯಕ್ಕೆ ಪ್ರಾಯಶ್ಚಿತ್ತವಾಗಿ ಅರವತ್ತು ಹೊನ್ನು ಮುಡುಪಾ ಕಟ್ಟಬೇಕು ಎಂದು ಬೋಧಿಸುತ್ತಾಳೆ. ಅದರಂತೆಯೇ ದೊರೆ ಮುಡಿಪು ಕಟ್ಟಿ ಕ್ಯಾತೆಲಿಂಗನ ಪರಮಭಕ್ತನಾಗುತ್ತಾನೆ. ಈ ಘಟನೆ ಬರುಮಣ್ಣನಾಯಕನ ಅವಧಿಯಲ್ಲಿ ನಡೆದುದ್ದಾದರೆ ಇದಕ್ಕೆ ಕಾರಣವಾದ ಚಾರಿತ್ರಿಕ ಸಂದರ್ಭವನ್ನು ಶೋಧಿಸಿ ವಿಶ್ಲೇಷಿಸಬೇಕಾದ ಅನಿವಾರ್ಯತೆಯೂ ಇದೆ. ಜನಪದರ ಮೌಖಿಕ ಕಾವ್ಯಗಳಲ್ಲಿ ಚಿತ್ರದುರ್ಗದ ಚಾರಿತ್ರಿಕ ಕುರುಹುಗಳು ಕತೆಯಂತೆ ಹರಿದಾಡುವುದು ಕಂಡುಬರುತ್ತದೆ. ಅಲ್ಲದೆ, ಇದೊಂದು ರಾಜಪ್ರಭುತ್ವವು ಕೈಗೊಂಡ ಮತವಿರೋಧಿ, ಜನವಿರೋಧಿ ಕ್ರಮವೆಂದು ಚಿತ್ರಿಸುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ,

ಜನಪದರ ಕಾವ್ಯಗಳಲ್ಲಿ ಅಂತರ್ಗತವಾಗಿರುವ ಈ ಘಟನೆಯ ಸತ್ಯಾಸತ್ಯತೆಯನ್ನು ಪರಿಶೀಲಿಸಿ ನೋಡುವ ಅಗತ್ಯವಿದೆ.

**೪.೪ ಜನಪದ ಗೀತೆಯಲ್ಲಿ ಕ್ಯಾತಪ್ಪದೈವದ ವ್ಯಾಪಕತೆಯ ಸಾರ**

ಕ್ಯಾತಪ್ಪನನ್ನು ಕುರಿತ ಜನಪದ ಕಥನ ಗೀತೆಗಳು ಕಾಡುಗೊಲ್ಲರಲ್ಲಿ ಮಾತ್ರ ಅತಿ ಹೆಚ್ಚಾಗಿ ಕಂಡುಬರುತ್ತವೆ. ಕೇತಪ್ಪನನ್ನು ಕುರಿತ ಜನಪದ ಕಾವ್ಯಗಳನ್ನು ಅಂಬಳಿಕೆ ಹಿರಿಯಣ್ಣ (ಕಾಡುಗೊಲ್ಲರ ಜನಪದ ಗೀತೆಗಳು) ಮತ್ತು ಕೃಷ್ಣಮೂರ್ತಿ ಹನೂರು (ಮ್ಯಾಸಬೇಡರ ಸಂಸ್ಕೃತಿ ಅಧ್ಯಯನ).ಮೇತ್ರಿ ಕೆ.ಎಂ ಅವರು (ಕೃಷ್ಣಗೊಲ್ಲರ ಕಥನ ಕಾವ್ಯ) ಕೇವಲ ಕಾಡುಗೊಲ್ಲರಿಂದ ಮಾತ್ರ ಸಂಗ್ರಹಿಸಿದ್ದಾರೆ. ನಾನು ಕ್ಷೇತ್ರ ಕಾರ್ಯದಲ್ಲಿ ಕಾಡುಗೊಲ್ಲರು ಸೇರಿದಂತೆ ಇತರೆ ಬೇರೆ, ಬೇರೆ ಸಮುದಾಯಗಳಿಂದ ಕ್ಯಾತಪ್ಪನನ್ನು ಕುರಿತ ಜನಪದ ಕಥನ ಗೀತೆಗಳನ್ನು ಸಂಗ್ರಹಿಸಿದ್ದೇನೆ. ಮೊದಲಿನ ಸಂಗ್ರಹಕ್ಕೂ ಈಗಿನ ಸಂಗ್ರಹದ ಗೀತೆಗಳಿಗೆ ಅಲ್ಪ ಸ್ವಲ್ಪ ವ್ಯತ್ಯಾಸ ಕಂಡು ಬಂದರೂ, ಹೇಳಿಕೊಳ್ಳುವಂತ ರೀತಿಯಲ್ಲಿ ಇರುವುದಿಲ್ಲ. ಆದರೆ ಇತ್ತೀಚೆಗೆ ಜನಪ್ರಿಯ ಗೀತೆಗಳ ಭರಾಟೆಯಿಂದ ಜನಪದ ಗೀತೆಗಳು ಜಾಳು ಜಾಳಾಗಿ ಜನಪದರಲ್ಲಿ ಅಭಿವ್ಯಕ್ತಿಯ ಮರು ರೂಪ ಪಡೆಯುತ್ತಿವೆ. ಜನಪದ ಕಾವ್ಯಗಳು ತ್ರಿಪದಿಯ ರೂಪದಲ್ಲಿದ್ದು, ಕ್ಯಾತಪ್ಪನ ಪವಾಡ ಹಾಗೂ ಚಿತ್ರದುರ್ಗ ಪರಿಸರದ ಕಾರ್ಯವೈಖರಿ, ಕ್ಯಾತಪ್ಪನ ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ಕುರಿತವುಗಳಾಗಿವೆ. ಅದರಂತೆ ಜಾತ್ರೆಯಲ್ಲಿ ಆಯಾಗಾರರ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಆದ್ದರಿಂದ ಜನಪದ ಗೀತೆಗಳಲ್ಲಿ ಅಲ್ಲಲ್ಲಿ ಆಯಾಗಾರರ ಕುರಿತ ಅಂಶಗಳು ಸಿಗುತ್ತವೆ. ಸುಮಾರು ಮೂರು ನೂರಕ್ಕೂ ಹೆಚ್ಚು ತ್ರಿಪದಿಗಳು ಕ್ಯಾತಪ್ಪನನ್ನು ಕುರಿತಂತೆ ಕಂಡುಬರುತ್ತವೆ.

*"ಎದ್ದೋನೆ ನೆನದೇವು*
*ಮುದ್ದು ನಿಂಗಣ್ಣಾನ ದೊಡ್ಡ ಕಂಪಳದ*
*ವಡಿಯಾನ ತಂದಾನ್ನ ತಾನ*
*ನಿಂಗಣ್ಣನ ಹೂ ಅರಳ್ಹೊತ್ತೀಲಿ*
*ನೇನದೇವು ತಂದನ್ನ ತಾನ*
*ಹದಿಮೂರು ಗುಡಿಕಟ್ಟಿನ*
*ಲಚ್ಚಾಣಪುರಕೆ ನಡೆದಾನು ತಂದಾನ್ನ ತಾನ*
*ಲಚ್ಚಾಣಪುರವೆಂಬ ದೊಡ್ಡ ಗ್ರಾಮದಾಗೆ*
*ಹೇಮಾರೆಡ್ಡೆರು ಸಾವುಕಾರ್ರು ತಂದಾನ್ನ ತಾನ"*

ಬೊಮ್ಮಣ್ಣ ಒಂದು ದಿನ ದನಗಳನ್ನು ಮೇಯಲು ಬಿಟ್ಟು ತಾನು ಜಾಲಿಮರದ ನೆರಳಲ್ಲಿ ಕಂಬಳಿ ಹಾಸಿ ಸುಖ ನಿದ್ರೆ ಮಾಡುತ್ತಿದ್ದಾಗ ನಿಂಗಣ್ಣ ಕರೆದ. ಬೊಮ್ಮಣ್ಣ ಯಾರಿರಬಹುದೆಂದು ನೋಡಿ ಅವನ ಹತ್ತಿರಕ್ಕೆ ಹೋದ. ಅವನಿಗೆ ರೆಡ್ಡಿಗಳ ಮನೆಯಿಂದ ದನಗಳನ್ನು ಹೊಡೆಯಲು ನಿಂಗಣ್ಣ ತಿಳಿಸಿದಾಗ.

*"ಉಂಬಾಕೆ ಇಕ್ಕವರೆ ಕಂಬಳಿ ಕೊಟ್ಟವರೆ*
*ಉಂಡ ಮನಿಗೆ ಎರಡು ಬಗಿಲಾರೆ"*

ಎಂದು ದನ ಹೊಡೆಯಲು ನಿರಾಕರಿಸಿದಾಗ ನಿಂಗಣ್ಣ ಅಂಡ ಉಂಡನ ಮಾಡಿ ದಂಡೆ ಕೊರಳಿಗೆ ಹಾಕಿ ದನಗಳನ್ನು ದುರುಗದ ಮಕನಾಗಿ ಹೊಡೆದ.

ಜನಪದ ಕಥೆಯಲ್ಲಿ ಬರುವಂತೆ ಇಲ್ಲಿಯೂ ಕೂಡಾ ಕ್ಯಾತಪ್ಪ ಲಚ್ಚಾಣ(ಕಲ್ಯಾಣ)ಪುರದ ಹೇಮರೆಡ್ಡಿ ಮತ್ತು ಭೀಮಾರೆಡ್ಡಿಗಳ ಮನೆಯಿಂದ ದನಗಾಹಿ ಪರಮಭಕ್ತ ಬೊಮ್ಮಣ್ಣನೊಂದಿಗೆ ದನಗಳನ್ನು ಹೊಡೆದುಕೊಂಡು ಪುರ್ಲೆಹಳ್ಳಿಯ ವಸತಿದಿಬ್ಬಕ್ಕೆ ಬಂದು ನೆಲೆಸುತ್ತಾನೆ. ಬೊಮ್ಮಣ್ಣನು ತನ್ನ ಅಸಹಾಯಕತೆ ಹೇಳಿಕೊಂಡರೂ ಸಹ ಅವನ ಭಕ್ತಿಗೆ ಮೆಚ್ಚಿದ ನಿಂಗಣ್ಣ ಉಳ್ಳಿ ನವಣೆಯನ್ನೇ ಸ್ವೀಕರಿಸಿ, ಬಿಂದಿಗೆಯಲ್ಲಿ ಹಾಲಕೊಟ್ಟ. ಆದ್ದರಿಂದ ಇಂದಿಗೂ ಅಡವಿಗೊಲ್ಲರು ಉಳ್ಳಿ ಬತವನ್ನು ಬಹಳ ಕಟ್ಟುನಿಟ್ಟಾಗಿ ಮಾಡುವುದುಂಟು.

*"ಅರತಿದ್ದು ನನಗಿರಲಿ ಮರೆತಿದ್ದು ನನಗಿರಲಿ*
*ಸರ್ವ ತಪ್ಪುಗಳು ನನಗಿರಲಿ ಅಂದ*
*ನಿಂಗಣ್ಣ ಬಲಗೈಲಿ ಬಾಸೆ ಕೊಟ್ಟ"*

ಬೊಮ್ಮಣ್ಣನಿಗೆ ಬಲಗೈಲಿ ಬಾಸೆ ಕೊಟ್ಟು ವಸತಿ ದಿಬ್ಬದಲ್ಲಿ ಐಕ್ಯನಾಗುತ್ತಾನೆ. ಹಾಗೆ ಪವಾಡದ ಮೂಲಕ ಹುಲ್ಲುಗಾವಲುಗಳನ್ನು ನಿರ್ಮಾಣ ಮಾಡುವುದು, ರೆಡ್ಡಿಗಳು ದನಗಳನ್ನು ಹುಡುಕಿಕೊಂಡು ಬಂದಾಗ ಕರಿಯಾವನ್ನು ಬಿಳಿದನಗಳನ್ನಾಗಿ ಮಾಡುವುದು, ಬಳ್ಳಾರಿ ತುರುಕರ ವೃದ್ಧ ವೇಷದಲ್ಲಿ ಕಾಣಿಸಿಕೊಳ್ಳುವುದು ಮತ್ತು ಆವಿನಗೂಡು ಮತ್ತು ಕರವಿನಗೂಡುಗಳನ್ನು ಕಟ್ಟುವುದು, ನವಣೆ ಕುಟ್ಟುವುದು, ಕಳ್ಳಿ ಮುಳ್ಳಿನಗುಡಿ ನಿರ್ಮಾಣ ಮತ್ತು ಕಳಶ ಪ್ರತಿಷ್ಠಾಪನೆ ಮಾಡುವ ಮತ್ತು ಕೀಳುವ ಸಂದರ್ಭವನ್ನು ಜನಪದರು ತುಂಬಾ ಭಾವಾವೇಷದಿಂದ ಕಟ್ಟಿ ಹಾಡುವುದು ಕಂಡು ಬರುತ್ತದೆ.

*"ಕಳ್ಳಿಗುಳ ಕಡುದಾರೆ ಮುಳ್ಳುಗಳ ಬಡುದಾರೆ*
*ಸಣ್ಣಾ ಕುರಿಕೇಯ ನೆದವೋರು–ದಿನ್ನೇಲಿ*
*ಆಪ್ಪಯ್ಯಗು ಬೆರಗು ತಿರಿವ್ಯಾರೆ.*

*ಲಿಂಗಾನ ಗುಡಿಸುತ್ತ ಬಂಗಾರದ ಬಸುವಣ್ಣ*

*ತುಂಬು ವಾರೇಯ ಧಾರೆ ಹಲಗೇಯ*

*ಗುಡಿಯಾಗಿರುವ ಲಿಂಗನೆ*

*ನೀವು ಕೇಳಿರೆ ಸಿವ ನ್ಮಡಿಯ"*

ಮಾನವನ ವರ್ತನೆಗಳು ಕಾಲಕ್ಕೆ ತಕ್ಕಂತೆ ಬದಲಾವಣೆ ಆಗುತ್ತಾ ಇದ್ದರೂ, ಅವನ ಆಂತರ್ಯದಲ್ಲಿ ಮೂಡಿದ ಮೌಢ್ಯತೆಯನ್ನು ಬಿಟ್ಟು ಬರಲು ಕಷ್ಟವಾಗುತ್ತದೆ. ಅದು ಈ ಗೀತೆಗಳಲ್ಲಿ ಮೂಡಿಬಂದಿದೆ. ಭಾರತೀಯ ಸಂಸ್ಕೃತಿಯಲ್ಲಿ ಮೇಲು-ಕೀಳು ಒಂದು ಅಂಟುರೋಗ, ಬೆನ್ನುಬಿಡದೆ ಹಿಂಬಾಲಿಸಿರುವಂಥದ್ದು. ಇದು ಸಮಾನತೆ ಸಾರಿದ ವ್ಯಕ್ತಿಗಳನ್ನೂ ತಟ್ಟದೆ ಬಿಟ್ಟಿಲ್ಲ. ಹಗಲು, ಇರುಳೆನ್ನದೆ ಭಕ್ತ ಬೊಮ್ಮಣ್ಣನೊಂದಿಗೆ ಕಾಡಡವಿಯಲ್ಲಿ ದನಗಳನ್ನು ಮೇಯಿಸಲು ಕ್ಯಾತಪ್ಪ ಅವನ ಏಳಿಗೆಗಾಗಿ ಶ್ರಮಿಸುತ್ತಾನೆ. ಅವನಿಗೆ ನೀತಿ, ಧರ್ಮ ಮಾರ್ಗವನ್ನು ಬೋಧಿಸಿದ ಕ್ಯಾತಪ್ಪ ದನಗಳನ್ನು ಬಿಟ್ಟು ಬಹುದೂರ ಹೋಗಲು ಪ್ರಯತ್ನಿಸುತ್ತಾನೆ. ಕೇತಪ್ಪ ನೆಲೆಸಿರುವ ಪರಿಸರದ ಬಗೆಗಿನ ಕೆಲವು ಗೀತೆಗಳು ಇಲ್ಲಿವೆ.

*"ಹಾಲು ಕಂಬೀ ಮೇಲೆ ತಾ ಬಂದ ನಿಂಗಣ್ಣ*

*ತಾಮೂರದ ಸೆಂಬು ಬಲಗೈಲಿ-ಕನ್ನರ ಬಂಡೆ*

*ದಿಕ್ಕೊಳ್ಳೆಡೆಯ ನೆಲೆಗೊಂಡ*

*ಬಾಳೆಕಾಯಿ ವೂವ ಚಂದ*

*ಕೇತಪ್ಪನ ಗುಡಿ ಚಂದ"*

ಕ್ಯಾತಪ್ಪ ಸಾಂಕೇತಿಕವಾಗಿ ನೆಲೆಗೊಂಡಿರುವ ಪರಿಸರದಲ್ಲಿ ಜನರ ಜೀವನ ಮಳೆ-ಬೆಳೆ ಸಮೃದ್ಧಿಯಿಂದ ಕೂಡಿರುವಂಥದ್ದು, ಕ್ಯಾತಪ್ಪ ನೆಲೆಗೊಂಡಿರುವ ಸ್ಥಳ ಮತ್ತು ಜಾತ್ರೆ ನಡೆಯುವ ಸ್ಥಳದ ಕಳ್ಳೆ ಮುಳ್ಳಿನ ಗುಡಿ ಕುರಿತ ಗೀತೆಗಳು ಅದ್ಭುತವಾಗಿ ವರ್ಣಿತವಾಗಿವೆ.

*'ಅಕ್ಕಗಳು ಏಳೀರಿ ಮುತ್ತು ಸರಗೊಳ್ಳೀರಿ*

*ಲೆಕ್ಕವಿಲ್ಲುದ ತಾಳಿ ಕೊರುಳೋರು-ಅಕ್ಕಮಗಳು*

*ಅಕ್ಕಗಳು ಎದ್ದು ಕೊಣಲೂದಿ*

*ಅಕ್ಕುಗಳು ಆದ್ಯಾರೆ ಆಲಾದ ಮರುದಡಿಯ*

*ಕೆಕ್ಕೋಲು ಒಯ್ದೆ ಕರಿಯಾಲದ-ಮರಡಿಯ*

*ಅಕ್ಕುಗಳೇ ಸಿಕ್ಕ ಒಡುದಾರೆ."* (ಹಿರಿಯಣ್ಣ.ಕಾ.ಗೋ.ಜ.ಗೀಮ ೯೦)

ವಸತಿ ದಿಬ್ಬದ ಕರವಿನಗೂಡು, ಆವಿನಗೂಡು, ಮಜ್ಜನ(ಅಕ್ಕುಗಳ)ಬಾವಿ, ಹೊಳೆಪೂಜೆ ಬಗೆಗಿನ ವರ್ಣನೆಯನ್ನು ಕುರಿತು ಹಾಗೂ ಕ್ಯಾತಪ್ಪನನ್ನು ವಿವಿಧ ರೀತಿಯಲ್ಲಿ ಆರಾಧನೆಗೆ ಒಳಪಡಿಸುತ್ತಿರುವ ಲಿಂಗಗಳ ಆಕಾರದ ಕಲ್ಲುಗಳನ್ನು ಕುರಿತು ಭಕ್ತಿ ಪೂರ್ವಕವಾಗಿ ಕಾವ್ಯಗಳನ್ನು ಕಟ್ಟಲಾಗಿದೆ.

ಜನಪದರು ಹಬ್ಬ-ಜಾತ್ರೆಗಳಲ್ಲಿ ಅತೀ ಉತ್ಸಾಹದಿಂದ ಕ್ಯಾತಪ್ಪನನ್ನು ಕುರಿತಂತೆ ಸಂಪ್ರದಾಯನಿಷ್ಠ ಗೀತೆಗಳನ್ನು ಹಾಡುತ್ತಾರೆ. ದೈವ ಸ್ವರೂಪಿಯಾದ ಕ್ಯಾತಪ್ಪನನ್ನು ತಮ್ಮವನನ್ನಾಗಿ ಮಾಡಿಕೊಂಡು ಹೊಗಳುತ್ತಾ ಭಾವಾವೇಶದಲ್ಲಿ ಮುಳುಗಿ ಆನಂದ ಪಡುವಂತಹ ಸಂದರ್ಭ ಜಾತ್ರೆಯಾಗಿದೆ. ಕ್ಯಾತಪ್ಪನ ಭಯ, ಭಕ್ತಿನಿಷ್ಠೆಗೆ ಪ್ರೇರಕವಾದ ಉತ್ಸವದ ವರ್ಣನೆಯನ್ನು ಭಾವನಾತ್ಮಕವಾಗಿ ಹಾಡುತ್ತಾರೆ. ಜಾತ್ರೆಯಲ್ಲಿ "ಕಳ್ಳೆಮುಳ್ಳಿನ ಗುಡಿ ಮೇಲೆ ಕಳಶ ಏರಿಸುವ ಮತ್ತು ಕೀಳುವ ರೋಚಕ ಕ್ರಿಯೆ ಅತಿ ಶ್ರೇಷ್ಠವಾಗಿರುತ್ತದೆ. ೫" ಪೆಟ್ಟಿಗೆ ದೇವರುಗಳ ಮೇಲೆ ಮಂಡಕ್ಕಿ, ವಿಳ್ಯೇದೆಲೆ, ಕಡಲೆಕಾಯಿ, ಇತರೆ ದಾನ್ಯಗಳನ್ನು ಎಸೆಯುವ, ಆರತಿ ಮಾಡುವ, ಮೊದಲಾದುವುಗಳನ್ನು ಈ ಕಾವ್ಯಗಳಲ್ಲಿ ಪ್ರಸ್ತಾಪಿಸಿದ್ದಾರೆ. ಸಂಪ್ರದಾಯದ ಚೌಕಟ್ಟಿನೊಳಗೆ ರಚನೆಯಾದಂತ ಹಲವು ಗೀತೆಗಳಲ್ಲಿ ಹರಕೆಗಳನ್ನು ಕುರಿತ ಅಂಶಗಳನ್ನು ಕಾಣಬಹುದು.

*"ಹಾಲು ಅನ್ನವ ಕೊಡುವೆ ತೂಗಾ ಮಂಚವ ಕೊಡುವೆ*
*ನೀವು ಮೂರ್ತಿಂಗಳಾ ಬತುಗಳೇ ಹಿಡಿದಾರೆ*
*ನಾ ನಿಮುಗೆ ಜೋಳಿಗೆ ಹೊನ್ನ ಕೊಡುವೇನು"*

ಇಂತಹ ನಂಬಿಕೆ, ಸಂಪ್ರದಾಯ-ಆಚರಣೆಗಳು ಜನಪದವನ್ನು ಬಿಗಿಮುಷ್ಠಿಯಲ್ಲಿ ಬಂಧಿಸಿವೆ. ಈ ಸಂಪ್ರದಾಯಗಳಿಗೆ ಕಟಿಬದ್ಧರಾಗಿ ಬದುಕುವ ಕಾಡುಗೊಲ್ಲರು ವಾರದ ಆಚರಣೆಗಳನ್ನು ಚಾಚು ತಪ್ಪದೆ ನೇಮನಿಷ್ಠರಾಗಿ ಆಚರಿಸುತ್ತಾರೆ. "ಸಾಮಾನ್ಯವಾಗಿ ಮನುಷ್ಯನಿಗೆ ಸಾವು-ನೋವುಗಳು ಸಂಭವಿಸುವ ಸಂದರ್ಭದಲ್ಲಿ ಅವರ ನೋವು ನಲಿವೆಗೆ ಸ್ಪಂದಿಸುವಂಥಹವರೆಂದರೆ, ಅವರು ನಂಬಿಕೊಂಡಿರುವ ದೈವ-ದೇವತೆಗಳು, ಮಳೆ ಬಾರದಿರುವಾಗ, ಮನೆಯಲ್ಲಿ ಮಕ್ಕಳು ಮರಿಗಳಿಗೆ, ಹಸುಕರುಗಳಿಗೆ ಯಾವುದೇ ಅನಾಹುತ ಸಂಭವಿಸಿದರೂ, ದೇವರ ಮೊರೆ ಹೋಗುತ್ತಾರೆ."[೧೪] ದೇವರ ಮೊರೆಯಿಂದ ಸಕಾಲಕ್ಕೆ ಪರಿಹಾರ ಸಿಕ್ಕರೆ ಮಾಡಿಕೊಂಡ ಹರಕೆಯನ್ನು ತೀರಿಸಲು ನೇಮಬದ್ಧರಾಗಿ ಅವರ ಕುಟುಂಬದ ಸದಸ್ಯರೆಲ್ಲರೂ ಭಾಗವಹಿಸುತ್ತಾರೆ. ಜಾತ್ರೆಯಲ್ಲಿ ಇಂತಹ ಹರಕೆ, ಸಂಪ್ರದಾಯಗಳಿಗೇನು ಕಡಿಮೆಯೇ, ಜನರು ಹೊತ್ತು ತರುವ ಹರಕೆಗಳು ಹಲವಾರು. ಅವುಗಳನ್ನು ಕಟ್ಟಿ ಹಾಡುವುದು ಕೂಡಾ ಮಹತ್ವದ್ದಾಗಿರುತ್ತದೆ.

*"ಕಂಡುಗದ ಜಡಿಯೋನು ಕಂಡೇವೇರಿ ಮ್ಯಾಲೆ*

*ಕಂಡುಗದ ಈಬೂತಿ ದರಿಸೋನು-ನಿಂಗಣ್ಣ*

*ಕಂಡೇವಕ್ಕಳ ಗುಡಿಯಾಗೆ ತಂದನ್ನ ತಾನ"*

ಹೀಗೆ ನಾನಾ ಬಗೆಯಿಂದ ಕ್ಯಾತಪ್ಪನ ಸ್ವರೂಪ ಮತ್ತು ಆತನ ಪವಾಡದ ಮಹಿಮೆಯನ್ನು ಹೊಗಳುವ ರೀತಿಯಲ್ಲಿ ಹಾಡುತ್ತಾ ತಮ್ಮ ಲೌಕಿಕ ಜೀವನಕ್ಕೆ ಸಮೀಪಿಸುವ ರೀತಿಯಲ್ಲೂ ಭಕ್ತಿಯಿಂದ ಹಾಡುತ್ತಾರೆ. ಹಾಗೆಯೇ ಕೋಲಾಟದ ಪದಗಳಲ್ಲಿ, ಭಜನೆ ಪದಗಳಲ್ಲಿ ಕೂಡಾ ಇದೇ ತರಹದ ವಸ್ತು ಸಾಹಿತ್ಯ ಕಂಡುಬರುತ್ತದೆ.

ತಮ್ಮ ದೈವಗಳನ್ನು ಕುರಿತು ಕಾಡುಗೊಲ್ಲ ಸಮುದಾಯದ ಕಲಾವಿದರು ಕಟ್ಟುವ ಕಾವ್ಯ ಅನನ್ಯವಾದುದ್ದು, ಈ ಕಾವ್ಯಗಳನ್ನು "ಗಣೆ ವಾದನದ ಮೂಲಕ ಸುಶ್ರವ್ಯವಾಗಿ ಹಾಡಲಾಗುತ್ತದೆ. ಒಬ್ಬ ಹಾಡುವವನು ಮತ್ತೊಬ್ಬ ಗಣೆ ಊದುವವನು. ಹಿಮ್ಮೇಳಗಾರನೂ ಇರಬಹುದು ಅಥವಾ ಇಲ್ಲದಿರಬಹುದು. ಒಬ್ಬನೆ ಕಲಾವಿದ ಮಂತ್ರದಂತೆ ಪಠಿಸುತ್ತ ವಚನ ರೂಪದಲ್ಲಿ ಹಾಡುವ ಸಂಪ್ರದಾಯವೂ ಉಂಟು."[೧೫] ಹಬ್ಬ, ಉತ್ಸವಗಳಲ್ಲಿ ಉರುಮೆ(ವಾಲಗ) ನುಡಿಸುವಾಗ ಒಬ್ಬನೆ ದೇವರ ಬಗೆಗಿನ ಗಗ್ಗರ (ಕಗ್ಗ)ಪದಗಳನ್ನು ಏರು ಧ್ವನಿಯಲ್ಲಿ ಹಾಡುತ್ತಾನೆ. ಅದನ್ನು ಆಲಿಸಿದ ಭಕ್ತರು ಕೇಕೆ ಹಾಕಿ ವಾಲಗದ ದನಿಗೆ ಹೆಜ್ಜೆ ಹಾಕುತ್ತ ಕುಣಿಯುತ್ತಿರುತ್ತಾರೆ. ಈ ಹಾಡುಗಳಲ್ಲಿ ದೇವರ ಸಾಹಸ ಪವಾಡಗಳು ನಿರೂಪಿತವಾಗಿರುವುದನ್ನು ಕಾಣಬಹುದು. ಹೆಣ್ಣು ಮಕ್ಕಳು ದೇವರ ಬಗೆಗಿನ ಸೋಬಾನೆ ಪದಗಳನ್ನು ಒಬ್ಬರೆ ಹಾಡುವುದಿಲ್ಲ. ಕನಿಷ್ಟ ನಾಲ್ಕೈದು ಜನ ಗುಂಪು ಕಟ್ಟಿಕೊಂಡು ಹಾಡುತ್ತಾರೆ. ಇಲ್ಲಿ ಹಿಮ್ಮೇಳ-ಮುಮ್ಮೇಳಗಾರರು ಇರಲೇಬೇಕು. ಇಲ್ಲಿ ರಾಗಕ್ಕಿಂತ ಸಾಹಿತ್ಯಕ್ಕೆ ಹೆಚ್ಚಿನ ಹೊತ್ತು ನೀಡುತ್ತಾರೆ. ಸಾಂಸ್ಕೃತಿಕ ವೀರರ ಕಾವ್ಯಗಳನ್ನು ಸ್ತ್ರೀಯರು ಹಾಗೂ ಪುರುಷರೂ ಹಾಡುವುದುಂಟು. ದೈವವನ್ನು ಮತ್ತು ಪರಂಪರೆಯ ನಡುವಳಿಕೆಯನ್ನು ಪವಿತ್ರ ಭಾವನೆಯಿಂದ ಕಾಣುವ ಅವರು ತಮ್ಮ ಮೌಖಿಕ ಸಂಪ್ರದಾಯದಲ್ಲಿ ಬಹು ದೊಡ್ಡ ಕಾವ್ಯಪರಂಪರೆಯೊಂದನ್ನು ಬೆಳೆಸಿಕೊಂಡು ಬಂದಿದ್ದಾರೆ. ಕ್ಯಾತಪ್ಪನ ಕುರಿತ ಈ ಮಹಾಕಾವ್ಯ ಅವರ ಪಶುಪಾಲಕ ಜೀವನದ ಇತಿಹಾಸವನ್ನು ನಿರೂಪಿಸುವುದರ ಜೊತೆಗೆ ಅವರ ದೈವಗಳ ಕುರಿತ ಇತಿಹಾಸವನ್ನು ನಿರೂಪಿಸುತ್ತದೆ.

ಕ್ಯಾತಪ್ಪನ ಕಾವ್ಯ ಇಲ್ಲಿ ಪ್ರಾತಿನಿಧಿಕ ಎಂದು ಭಾವಿಸಿ ಈ ಕಥೆಯನ್ನು ನಿರೂಪಿಸುತ್ತೇನೆ. ಆದರೆ ಅವರ ಕಥೆಯಲ್ಲಿ ಕ್ಯಾತಪ್ಪನ ಕಾವ್ಯವಲ್ಲದೆ, ಬೋಮಣ್ಣನ ಕಾವ್ಯ, ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ ಮುಂತಾದ ಆರಾಧ್ಯ ದೈವಗಳ ಕಾವ್ಯಗಳು ಅತ್ಯಂತ ವೈವಿಧ್ಯಮಯವಾಗಿ ರೂಪಿತವಾಗಿವೆ. ಈ ಕಾವ್ಯಗಳಲ್ಲಿ ಎರಡು ಅಂಶಗಳು ಮುಖ್ಯವಾಗುತ್ತವೆ.

ತಮ್ಮ ದೇವರಿಗಾಗಿ ಕರಿಯಣ್ಣ ನಡೆಸುವ ಹೋರಾಟ ಸಮುದಾಯದ ಪರವಾಗಿದ್ದು ವಿಶೇಷವಾಗಿ ಗಮನ ಸೆಳೆಯುತ್ತದೆ. ದುರ್ಗದ ಕಡೆಯಿಂದ ಭರಮಣ್ಣನಾಯಕನ ದಂಡು ಗೊಲ್ಲರಹಟ್ಟಿ ಕಡೆಗೆ ಬರುತ್ತದೆ. ಆಗ "ಕರಿಯಣ್ಣ ದೇವರನ್ನು ಹೊತ್ತುಕೊಂಡು ಹಟ್ಟಿಯಿಂದಾಚೆಗೆ ಓಡುತ್ತಾನೆ. ದಾರಿಯಲ್ಲಿ ಬೇಡರು-ತುರುಕರು ಇದಿರಾಗುತ್ತಾರೆ. ಅತ್ತದರಿ-ಇತ್ತಪುಲಿ ಎಂಬಂತಾಗುತ್ತದೆ. ಕರಿಯಣ್ಣನಿಗೆ ದಿಕ್ಕೇ ತೋಚದಂತಾಗುತ್ತದೆ. ಜೀವದಾಸೆ ಬಿಟ್ಟು ತುರುಕರೊಂದಿಗೆ ಕಾದಾಟ ನಡೆಸುತ್ತಾನೆ."[೧೬]

*"ಒಬ್ಬನೆ ಕರಿಯಣ್ಣ ದಿಬ್ಬಗುಂಟ ಬರುವಾಗ*
*ಕಬ್ಬಕ್ಕಿ ಹಿಂಡೇ ಕವಿದಾವೆ-ಕರಿಯಣ್ಣ*
*ಒಬ್ಬನೆ ಕಾದಿ ಮಡಿದಾನು"*

ತುರುಕರು ಈರಣ್ಣನ ಮೇಲೆರಗಿ ಅವನನ್ನು ಈಡಾಡಿದ ಸನ್ನಿವೇಶ ತುರುಕರ ಸೈನ್ಯದ ಅಮಾನವೀಯ ವರ್ತನೆಗೆ ಸಾಕ್ಷಿಯಾಗಿದೆ.

*"ಈರಣ್ಣ ಮಡುದಾತಾವು ನೀರುಪಲ್ಲಟವಾಗಿ*
*ನೀರೆಂದು ಕುಡಿದಾರು ರೈತಾವ*
*ಅಪ್ಪ ಮಡುದಾತಾನ ತುಪ್ಪಾಪಲ್ಲಟದಲ್ಲಿ*
*ಅಪು ಕರಿಯಣ್ಣ ಮಡುದಲ್ಲಿ – ತುರುಕಾರು*
*ತುಪ್ಪೆಂದು ಕುಡಿದಾರೆ ರಯಿತಾವ"*

ತುರುಕರು ಕ್ಯಾತಪ್ಪ ದೇವರನ್ನು ಸೆರೆಹಿಡಿದು ದುರ್ಗಕ್ಕೆ ಕೊಂಡೊಯ್ದ ಸಂದರ್ಭದಲ್ಲಿ ಹಟ್ಟಿಗೊಲ್ಲರು ತಮ್ಮ ದೇವರುಗಳನ್ನು ಬಿಟ್ಟುಕೊಡಬೇಕೆಂದು ಪರಿಪರಿಯಾಗಿ ಬೇಡುತ್ತಾರೆ. ಎತ್ತುಗಳು ಕೊಟ್ಟೇವು, ಮುತ್ತುಗಳ ಕೊಟ್ಟೇವು ನಮ್ಮ ದೇವರ ನೀವು ಕೊಡಿರಣ್ಣ ಎಂದು ಅಂಗಲಾಚುತ್ತಾರೆ. ಆಗ ಗೊಲ್ಲರ ಆಕ್ರಂದನಕ್ಕೆ ಸೈನಿಕರು ಸೊಪ್ಪುಹಾಕದೆ ಮುಂದೆ ಹೋಗುತ್ತಾರೆ. ಆಗ ಗೊಲ್ಲರು ತುರುಕರಿಗೆ ಹಿಡಿ ಶಾಪಹಾಕುವುದರ ಮೂಲಕ ತಮ್ಮ ಅಸಹಾಯಕ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ.

*"ಎತ್ತುಗಳ ಸೆರೆಹೊಯ್ದು ಎಮ್ಮೆಗಳ ಸೆರೆಹೊಯ್ದು*
*ಅಪ್ಪಾನಿಂಗಣ್ಣಾನ ಸೆರೆಹೊಯ್ದು-ತುರುಕಾರ*
*ಸುಪ್ಪತ್ತಿಗೆ ಇಂದೇ ಉರಿಯಾಲಿ*
*ಏಳಗಾಲ ಪುತ್ರಮ್ಮಗೆ ಸಿಡಿಲೇ ಬಡಿಯಾಲಿ*
*ಮೈಯಾಗಳ ಮುತ್ತಿನ ಪೊನ್ನಾ ಕಳಸ ಸಿಡಿಯಾಲಿ"*

ಇಲ್ಲಿ ಮುಸ್ಲಿಮರು ಗೊಲ್ಲರ ಹಟ್ಟಿಯೊಂದನ್ನು ಲೂಟಿ ಮಾಡಿರಬಹುದಾದ ಸನ್ನಿವೇಶವನ್ನು ಚಿತ್ರಿಸುತ್ತದೆ. "ಚಿತ್ರದುರ್ಗ ಪಟ್ಟಣವನ್ನು ವಶಪಡಿಸಿಕೊಳ್ಳಲು ಹೈದರಾಲಿ ತನ್ನ ಸೈನ್ಯ ಸಮೇತ ಬಂದು ದುರ್ಗದ ಕೋಟೆ ಮುಂದೆ ಆರು ತಿಂಗಳು ಬೀಡುಬಿಟ್ಟ ಬಗ್ಗೆ ಚರಿತ್ರೆ ತಿಳಿಸುತ್ತದೆ. ಆಗ ಸಿಪಾಯಿಗಳು ಆಹಾರಕ್ಕಾಗಿ ಸುತ್ತ ಮುತ್ತಲ ಗ್ರಾಮಗಳ ಮೇಲೆ ದಾಳಿ ಇಟ್ಟಿರಬೇಕು."[೧೬] ಇಂತಹ ಘಟನೆಯೊಂದರ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಕಥೆ ಇದು ಎನಿಸುತ್ತದೆ ಎಂಬುದು ಹನೂರು ಅವರ ಅಭಿಪ್ರಾಯವಾಗಿದೆ.

ಈ ಸಮುದಾಯದ ಕಾವ್ಯಗಳಲ್ಲಿ ಹುದುಗಿರುವ ಶಾಪಗಳು, ಕಂಟಕಗಳು, ಅಂಟುಮುಂಟು, ಮತಾಂತರ, ಪಾವಿತ್ರ್ಯನಾಶ, ದೇವರಿಗೋಸ್ಕರ ತ್ಯಾಗ, ಪವಾಡಗಳು, ನಿರಾಕರಣ-ಸ್ವೀಕರಣ, ಬಹಿಷ್ಕಾರ ಶುದ್ಧೀಕರಣ, ವ್ರತ ನಿಷೇಧ, ಕಣಿ ಭವಿಷ್ಯ, ಮಾಟ ಮಂತ್ರ ಈ ಮೊದಲಾದ ಆಶಯಗಳ ನೆಲೆಗಟ್ಟಿನಲ್ಲೂ ಧಾರ್ಮಿಕ ಸಂಘರ್ಷವನ್ನು ಕಂಡುಕೊಳ್ಳಲಾಗಿದೆ. ಶಾಪಗಳು ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿವೆ. ಈ ಮಾದರಿಯ ಶಾಪಗಳ ಉಲ್ಲೇಖ ಕ್ಯಾತಪ್ಪನ ಕಾವ್ಯಗಳಲ್ಲಿ ಕಂಡುಬರುತ್ತದೆ. ಒಂದು ಕಡೆ ಈ ಗೊಲ್ಲ ಬುಡಕಟ್ಟು ಸಮುದಾಯವನ್ನು ಸಹಿಸದ ಬೇಟೆಗಾರ ಸಮೂಹ, ಮತ್ತೊಂದು ಕಡೆ ಅವರ ಹುಲ್ಲುಗಾವಲುಗಳನ್ನು ಕ್ರಮೇಣ ಬೇಸಾಯ ಭೂಮಿಯನ್ನಾಗಿ ಪರಿವರ್ತಿಸುತ್ತಾ ಬಂದ ಕೃಷಿಕ ವರ್ಗಗಳು ಹೀಗೆ ಎರಡು ಬುಡಕಟ್ಟುಗಳ ನಡುವೆ ತಮ್ಮ ಅಸ್ತಿತ್ವಕ್ಕಾಗಿ ಹೋರಾಡಿರುವಂತೆ ಅವರ ಜನಪದ ಕಾವ್ಯಗಳಲ್ಲಿ ಕಂಡುಬರುತ್ತದೆ. ದೇವರು ಮತ್ತು ದನಗಳೇ ಅವರ ಸರ್ವಸ್ವ. ಅವೇ ಅವರ ಮೂಲದೈವಗಳು.ಆದ್ದರಿಂದ ಅವರು ತಮ್ಮ ದನಕರುಗಳಿಗೆ ನೀಡಿರುವ ಪ್ರಾಧಾನ್ಯತೆ ಮುಂತಾದ ಅಂಶಗಳು ಅವರ ಮೌಖಿಕ ಕಾವ್ಯಗಳಲ್ಲಿ ಕಂಡುಬರುತ್ತವೆ. ಆರಾಧ್ಯ ದೈವಾದ ಕ್ಯಾತಪ್ಪ, ಶ್ರೀಮಂತರಾದ ರೆಡ್ಡಿಗಳ ಸರ್ವ ಸಂಪತ್ತನ್ನು ನಾಶ ಮಾಡುವುದಲ್ಲದೆ, ಅವರಲ್ಲಿನ ದುರಹಂಕಾರವನ್ನು ಕಡಿಮೆ ಮಾಡುತ್ತಾನೆ. ಮತ್ತು ಕೇತಪ್ಪ ಅವನೊಬ್ಬ ದನಗಾಹಿ ಎಂಬಂತೆ ಕಂಡು ಬಂದರೂ ಅವನಲ್ಲಿನ ಛಲ, ಆತ್ಮವಿಶ್ವಾಸ ಹಾಗೂ ತಾಳ್ಮೆ ಮತ್ತು ಪಶುಪಾಲನೆ ವೃತ್ತಿಯಲ್ಲಿನ ಪ್ರಾಮಾಣಿಕತೆ ಇವು ಆತನನ್ನು ನಾಯಕನನ್ನಾಗಿಸಿವೆ ಎಂಬಂತಹ ಅಂಶಗಳು ತಾವುಗಳು ಕಟ್ಟಿಕೊಂಡಿರುವ ಸೃಷ್ಟಿ ಪುರಾಣಗಳಲ್ಲಿ ಉಲ್ಲೇಖಿತವಾಗಿವೆ.

### ೪.೫ ಜನಪದರಲ್ಲಿ ಕ್ಯಾತಪ್ಪದೈವದ ಸಂವೇದನಶೀಲ ಕಥನಗಳು

ಜನಪದ ಕತೆಗಳಲ್ಲಿ ಕಟ್ಟುಕತೆ, ರಮ್ಯಕತೆ, ಹಾಸ್ಯಕತೆ, ಪ್ರಾಣಿಕತೆಗಳು ಮುಖ್ಯವಾಗಿ ಕಂಡು ಬರುತ್ತವೆ. ಇವುಗಳಲ್ಲಿ ಹೆಚ್ಚು ಕತೆಗಳು ಕಲ್ಪಿತವಾದವು. ಇವು ಕತೆ ಕೇಳುವವರ ಮನರಂಜನೆಗೆ ಮಾತ್ರ ಸೀಮಿತವಾಗಿರುತ್ತವೆ. ಜನಪದ ಕತೆಯನ್ನು ಜಗಲಿ, ಅರಳಿಕಟ್ಟೆ, ಮನೆ, ಹೊಲ, ಹಗಲು ರಾತ್ರಿ ಎಂಬ ಭೇದವಿಲ್ಲದೆ ಎಲ್ಲಿ ಬೇಕಾದರೂ ಹೇಳಬಹುದು.

ದೇವತೆಗಳು, ದೆವ್ವಗಳು, ರಾಜ–ರಾಣಿಯರು, ಮನುಷ್ಯರು, ಪ್ರಾಣಿ, ಪಕ್ಷಿಗಳು ಅವುಗಳೆಲ್ಲ ಪಾತ್ರದಾರಿಗಳಾಗಿ ಕಾಣಿಸಿಕೊಳ್ಳಬಹುದು. ಇವುಗಳಿಗೆ ದೇಶ ಕಾಲದ ಬಂಧವಿಲ್ಲ. ಪಾತ್ರಗಳಿಗೆ ಹೆಸರುಗಳೇ ಇರುವುದಿಲ್ಲ. ಅವೆಲ್ಲವೂ ಕಾಲ್ಪನಿಕ. ತೋಚಿದ ಹೆಸರು, ತೋಚಿದ ಸ್ಥಳ, ಕಾಲವನ್ನೂ ಕತೆಗಳಲ್ಲಿ ಹೇಳವುದು ರೂಢಿ. ಜಾನಪದ ಕತೆಗಳು ಗದ್ಯ ರೂಪದಲ್ಲಿ ದೊರೆಯುವುದು ಹೆಚ್ಚು. ಜನಪದ ಕತೆಗಳು ಮನುಷ್ಯನಿಗೆ ಸತ್ಯ, ವಿಶ್ವಾಸ, ಸ್ನೇಹ, ಪ್ರಾಮಾಣಿಕತೆ, ದೈವಭಕ್ತಿ, ಶೌರ್ಯ ಮುಂತಾದ ಮೌಲ್ಯಗಳನ್ನು ತಂದುಕೊಡುತ್ತವೆ.

ಜನಪದರು ತಮ್ಮ ಬುಡಕಟ್ಟು ದೈವವಾದ ಕ್ಯಾತಪ್ಪನ ಕಥೆಯನ್ನು ಈ ರೀತಿ ನಿರೂಪಿಸುತ್ತಾರೆ. ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕು ವೈ.ಎನ್.ಹೊಸಕೋಟೆ ಹೋಬಳಿ ವ್ಯಾಪ್ತಿ ಬೆಸ್ತರಹಳ್ಳಿ ಗ್ರಾಮದ ಬೊಮ್ಮಣ್ಣ, ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಕಲ್ಯಾಣದುರ್ಗ ತಾಲ್ಲೂಕು ಕಲ್ಯಾಣಪುರ ಗ್ರಾಮದ ಹೇಮಾರೆಡ್ಡಿ ಮತ್ತು ಭೀಮಾರೆಡ್ಡಿ ಎಂಬ ಇಬ್ಬರು ಅಣ್ಣ ತಮ್ಮಂದಿರುಗಳ ಮನೆಯಲ್ಲಿ ದನ ಕಾಯಲು ಜೀತದಾಳು ಆಗಿ ಇದ್ದ. ಹೇಮಾರೆಡ್ಡಿ ವ್ಯವಸಾಯ ಮಾಡುವಾಗ ನೇಗಿಲ ಬಾಯಿಗೆ(ಕುಳಕ್ಕೆ) ಒಂದು ದುಂಡನೆಯ ಲಿಂಗ ಸಿಕ್ಕಿಕೊಂಡಿತಂತೆ. ರೆಡ್ಡಿಗಳು ಅದನ್ನು ಮನೆಗೆ ತೆಗೆದುಕೊಂಡು ಹೋಗಿ ನವಣೆ ಕಾಳಿನ ಗೆರ್ಸೆಯಲ್ಲಿ ಇಟ್ಟರಂತೆ. ಆ ಗೆರ್ಸೆಯ ಪಕ್ಕದಲ್ಲಿಯೇ ಬೊಮ್ಮಣ್ಣ ದಿನಾಲು ರಾತ್ರಿ ಕುಳಿತು ಊಟ ಮಾಡುತ್ತಿದ್ದನಂತೆ. ಒಂದು ದಿನ ಗೆರ್ಸೆಯಲ್ಲಿದ್ದ ಲಿಂಗವು ಖಂಡ ತಿನ್ನುವ, ಹೆಂಡ ಕುಡಿಯುವ ಮನೆಯಲ್ಲಿ ನಾವು ಇರಬಾರದು ಈ ಮನೆ ಬಿಟ್ಟು ಹೋಗೋಣ ಎಂದು ಬೊಮ್ಮಣ್ಣನಿಗೆ ಹೇಳಿತಂತೆ.

ಶ್ರಾವಣ ಮಾಸದ ಸೋಮವಾರ ನಾಗರ ಪಂಚಮಿಯ ದಿನ ಹಾವಿಗೆ ಹಾಲೆರೆಯಲೆಂದು ರೆಡ್ಡಿ ಮನೆಯವರೆಲ್ಲರೂ ಹೋದರು. ಹೋಗುವ ಮುನ್ನ ಹೇಮಾರೆಡ್ಡಿ ಆವು ನಿನ್ನಾವು, ಗೋವು ನಿನ್ನಾವು ಮನೆಯಲ್ಲಿ ಅಡುಗೆ ಮಾಡಿಟ್ಟಿದ್ದೇವೆ. ಊಟ ಮಾಡಿ ಮನೆಯನ್ನು ಜೋಪಾನವಾಗಿ ನೋಡಿಕೊಳ್ಳಬೇಕೆಂದು ಹೇಳಿ ಹೋದರು. ಆಗ ನವಣೆ ಕಾಳಿನ ಗೆರ್ಸೆಯಲ್ಲಿದ್ದ ಲಿಂಗವು ಕೆಂಜೆಡೆ (ಕೆಂಪಾದ\ಉದ್ದನೆ) ಬಿಳಿ ಗಡ್ಡದ ವೃದ್ಧನ ವೇಷದಲ್ಲಿ ಗೆರ್ಸೆಯಿಂದ ಎದ್ದು ಬಂದು ಮನೆಯಲ್ಲಿ ಯಾರೂ ಇಲ್ಲ, ಇದು ಒಳ್ಳೆಯ ದಿನ ಗೋವುಗಳನ್ನು ಹೊಡೆದುಕೊಂಡು ಹೋಗೋಣ ಎಂದು ಹೇಳಿತಂತೆ. ಆಗ ಬೊಮ್ಮಣ್ಣ, ಸ್ವಾಮಿ ಊಟಕ್ಕೆ ಇಟ್ಟಿದ್ದಾರೆ. ಮಲಗಲಿಕ್ಕೆ ಕಂಬಳಿ ಕೊಟ್ಟಿದ್ದಾರೆ ನಾನು ಉಂಡ ಮನೆಗೆ ಎರಡು ಬಗೆಯುವುದಿಲ್ಲ ಎಂದು ವೃದ್ಧನ ವೇಷದಲ್ಲಿದ್ದ ದೇವರ ಹತ್ತಿರ ಹೇಳಿದನಂತೆ. ಆಗ ದೇವರು ಹೀಗೆ ನುಡಿಯಿತಂತೆ; ಉಣ್ಣಾಕೆ ಇಟ್ಟಿರಲಿ, ಕಂಬಳಿ ಕೊಟ್ಟಿರಲಿ ಉಂಡ ಮನೆಗೆ ಎರಡು ಬಗೆದರೆ ನಮ್ಮ ಕೆಲಸ ಆಗುತ್ತದೆ ಎಂದು ಬೊಮ್ಮಣ್ಣನಿಗೆ ಹೇಳಿತಂತೆ. ಇದರಿಂದ ಬೊಮ್ಮಣ್ಣನ ಮನಸ್ಸು

ಬದಲಾಗಿ ಮುಂದಕ್ಕೆ ಯಾರಿಲ್ಲ ಹಿಂದಕ್ಕೆ ಯಾರಿಲ್ಲ ನಾನು ಹೋಗುವುದು ಹೇಗೆ ಎಂದು ಚಿಂತಿಸುವಾಗ ಹಿಂದಕ್ಕೆ ನಾನಿದ್ದೇನೆ, ಮುಂದಕ್ಕೆ ನೀನು ನಡೆ ದನಗಳನ್ನು ಹೊಡೆದುಕೊಂಡು ಹೋಗು ಎಂದು ದೇವರು ಹೇಳಿತಂತೆ.

ಆಗ ಇಬ್ಬರು ದನಗಳನ್ನು ಹೊಡೆದುಕೊಂಡು ಚಳ್ಳಕೆರೆ ತಾಲ್ಲೂಕಿನ ಮತ್ಸಮುದ್ರ ಗ್ರಾಮದ ತೊರೆಯ ದಡಕ್ಕೆ ಬಂದರಂತೆ. ಅಲ್ಲಿ ತೊರೆ ತುಂಬಿ ಹರಿಯುತ್ತಿತ್ತಂತೆ. ಆಗ ಬೊಮ್ಮಣ್ಣ ತೊರೆಯನ್ನು ದಾಟುವುದು ಹೇಗೆ ಎಂದು ದೇವರನ್ನು ಕೇಳಿದಾಗ, ಗಂಗಮ್ಮನಿಗೆ ಎಲೆ ಅಡಿಕೆ ಬಿಡುವುದರೊಂದಿಗೆ ಮೊದಲ ಪೂಜೆ ಮಾಡು ಅದು ದಾರಿ ಬಿಡುತ್ತದೆ ಎಂದು ದೇವರು ಹೇಳಿಕೊಟ್ಟಿತಂತೆ. ಆಗ ಗಂಗಮ್ಮ ಎರಡೂ ಭಾಗ(ಹಿಬ್ಭಾಗ)ವಾಗಿ ದಾರಿ ಬಿಟ್ಟುಕೊಟ್ಟಿತಂತೆ. ಆಗ ಇಬ್ಬರು ಹೋಗಿ ಆಕಡೆಯ ದಡದಲ್ಲಿ ದನಗಳನ್ನು ಮೇಯಿಸುತ್ತಿದ್ದರಂತೆ. ಅಷ್ಟರಲ್ಲಿ ನಾಗರಕ್ಕೆ ಹಾಲೆರೆಯಲು ಹೋದ ರೆಡ್ಡಿಗಳು ತಮ್ಮ ಮನೆಗೆ ಹೋಗಿ ನೋಡಿದಾಗ ಅಲ್ಲಿ ಬೊಮ್ಮಣ್ಣ ಇಲ್ಲ, ದನಗಳೂ ಇಲ್ಲ. ಇದರಿಂದ ಗಾಬರಿಗೊಂಡ ರೆಡ್ಡಿಗಳು ಅವಸರದಿಂದ ದನಗಳನ್ನು ಹುಡುಕುತ್ತ ಪುಲಸ್ಮಾವಡಿ(ಪಿ.ಮಹಾದೇವಪುರ) ಹತ್ತಿರ ಬಂದು ಇಲ್ಲಿ ಯಾರಾದರೂ ಒಬ್ಬ ಹುಡುಗ ಗೋವುಗಳನ್ನು ಹೊಡೆದುಕೊಂಡು ಹೋದನಾ ಎಂದು ಕೇಳಿದರಂತೆ. ಆಗ ಅಲ್ಲೊಬ್ಬ ವ್ಯಕ್ತಿ ಅರಮನೆಯಂತ ಬೆಳ್ಳಿಗಾವುಗಳ ಹಿಂಡು ಹೊಡೆದುಕೊಂಡು ಇಬ್ಬರು ಹೋದರೆಂದು ಹೇಳಿದರಂತೆ.

ಅಲ್ಲಿಂದ ತೊರೆ ದಡಕ್ಕೆ ಬಂದು ನೋಡಿದಾಗ ಆಕಡೆ ದಡದಲ್ಲಿ ಗೋವುಗಳ ಹಿಂಡು ಮೇಯುತ್ತಿದ್ದವು. ಆಗ ತೊರೆ ತುಂಬಿ ಹರಿಯುತ್ತಿತ್ತು. ಅಷ್ಟರಲ್ಲಿ ಕೆಂಜೆಡಿಸ್ವಾಮಿ ದಡದಲ್ಲಿ ಮೇಯಿಸುತ್ತಿದ್ದ ದನಗಳನ್ನು ಅಂಡವನ್ನು ಗುಂಡವನ್ನಾಗಿ ಮಾಡಿ, ಬೋಡಗಳನ್ನು ಬೊಕ್ಕಗಳನ್ನಾಗಿ ಮಾಡಿ ಬಿಟ್ಟಿದ್ದನು. ಅಂಡ, ಗುಂಡ,ಬೋಡ ಬೊಕ್ಕ ರೂಪದ ಗೋವುಗಳನ್ನು ನೋಡಿದ ರೆಡ್ಡಿಗಳು ಈ ದನಗಳು ನಮ್ಮವಲ್ಲ. ಗೋವುಗಳ ಕಾಯುವ ಕಿಲಾರಿಗಳು ನಮ್ಮವರಲ್ಲ ಮತ್ತು ತೊರೆ ದಾಟಲು ಸಾಧ್ಯವಿಲ್ಲ ಎಂದು ಅಲ್ಲಿಂದ ಹಿಂದಕ್ಕೆ ಹೋದರು. ತೊರೆ ಈಚೆ ದಡದಲ್ಲಿದ್ದ ಬೊಮ್ಮಣ್ಣ ಮತ್ತು ಕ್ಯಾತೇಲಿಂಗ ದೇವರು ಮೇಯುತ್ತಿದ್ದ ದನಗಳನ್ನು ಹೊಡೆದುಕೊಂಡು ಪುರ್ಲೆಹಳ್ಳಿ ಗ್ರಾಮದ ವಸತಿ ದಿಬ್ಬದ ಹಟ್ಟಿಗೆ ಬಂದು ನೀರಿನ ಚಲುಮೆ ತೆಗೆದು ನೀರು ಮಾಡಿ ತಾವು ಕುಡಿದು ನಂತರ ದನಕರುಗಳಿಗೆ ಕುಡಿಸಿ ಆದಿನ ರಾತ್ರಿ ಅಲ್ಲಿಯೇ ಉಳಿದುಕೊಂಡರು. ಅಲ್ಲಿ ನಿತ್ಯ ಗೋವುಗಳನ್ನು ಕಾದುಕೊಂಡು ಹಾಲು ಮೊಸರು ಕುಡಿಯುತ್ತ ಕಾಲ ಕಳೆಯುತ್ತಿದ್ದರು.

ವಸತಿ ದಿಬ್ಬದ ಹಟ್ಟಿಯಲ್ಲಿ ಒಂದು ದಿನ ಬೊಮ್ಮಣ್ಣ, ಸ್ವಾಮಿ ನಿನಗೆ ವಯಸ್ಸಾಯ್ತು, ನನಗೆ ಪ್ರಾಯ ಬಂತು ಮುಂದೆ ನನ್ನಗತಿ ಏನೆಂದು ಕೇಳಿದನು. ಆಗ ಕೇತಪ್ಪ

ದೇವರು ಬೊಮ್ಮಣ್ಣನನ್ನು ಕರೆದುಕೊಂಡು ಮತ್ಸಮುದ್ರದ ತೊರೆಗೆ ಹೋದಾಗ ಅದೇ ಸಮಯಕ್ಕೆ ಅಲ್ಲಿನ ಹನುಮಂತರಾಯ ದೇವರ ಪೂಜಾರಿ ತೊರೆಯಲ್ಲಿ ಚಿಲುಮೆ ತೋಡಿ ವಾರದ ನೀರನ್ನು ಬಿಂದಿಗೆಯಲ್ಲಿ ಬಗ್ಗಿ ತುಂಬುವಾಗ ಆ ನೀರಿನಲ್ಲಿ ಕ್ಯಾತಪ್ಪ ಗಡ್ಡದಾರಿ ವೇಷದಲ್ಲಿ ಕಾಣಿಸಿಕೊಂಡ. ಆಗ ಪೂಜಾರಿ ಗಡ್ಡದಾರಿ ವೇಷದವನನ್ನು ನೀವು ಯಾರೆಂದು ಕೇಳಿದಾಗ, ವೇಷದಾರಿಯು ಹೀಗೆ ಹೇಳಿದನಂತೆ, ನೀನು ಪುರ್ಲೆಹಳ್ಳಿ ಬಳಿಯ ವಸತಿ ದಿನ್ನೆಗೆ ಬಾ ಎಂದು. ಆಗ ಪೂಜಾರಿಯು ದೇವರ ಪೂಜೆ ಮುಗಿಸಿಕೊಂಡು ಬೊಮ್ಮಣ್ಣ ಮತ್ತು ದೇವರು ನೆಲೆಗೊಂಡಿದ್ದ ವಸತಿ ದಿನ್ನೆಗೆ ಬಂದನಂತೆ. ಆಗ ದೇವರು ನೀನು ನನಗೆ ಪೂಜಾರಿಯಾಗಿ ಇರು. ಬೊಮ್ಮಣ್ಣ ಗೌಡನಾಗಿ ಅಧಿಕಾರ ಮಾಡಲಿ ಎಂದು ಹೇಳಿತಂತೆ. ಹೀಗೆ ಪೂಜಾರಿಯು ನಿತ್ಯ ದೇವರ ಪೂಜೆ ಕೆಲಸ ಕಾರ್ಯಗಳನ್ನು ಮಾಡಿಕೊಂಡಿದ್ದನು. ಕೆಲ ದಿನಗಳ ನಂತರ ಪೂಜಾರಿ ವಡ್ಡ(ಬೋವಿ)ಸಮುದಾಯದ ಓರ್ವ ಯುವತಿಯನ್ನು ಕೂಡಿಕೆ ಮಾಡಿಕೊಂಡಿ(ಅನೈತಿಕ ಸಂಪರ್ಕ ಹೊಂದಿ)ದ್ದರಿಂದ ಆಕೆ ಗರ್ಭಿಣಿಯಾಗಿ ವಸತಿ ದಿಬ್ಬದಲ್ಲಿ ವಾಸವಿದ್ದ ಪೂಜಾರಿಯ ಜೊತೆಗೆ ಸೇರಿಕೊಂಡು ಜೀವನ ಸಂಗಾತಿಯಾದಳು. ಕೆಲ ದಿನಗಳ ನಂತರ ಆಕೆಗೆ ಗಂಡು ಮಗು ಹೆರಿಗೆಯಾಯಿತು. ಹೆರಿಗೆಯಾದ ಐದು ದಿನಗಳಲ್ಲಿ ಆ ಬಾಣಂತಿ ಮರಣ ಹೊಂದಿದಳಂತೆ. ಅಲ್ಲಿಂದ ಆ ಗಂಡು ಮಗುವಿನ ಆರೈಕೆ ಮತ್ತು ಪೋಷಣೆ ಪೂಜಾರಿ ಮೇಲೆ ಬಿತ್ತು. ಆತ ದಿನಾಲು ಮಗುವಿಗೆ ಹಸುವಿನ ಹಾಲನ್ನು ಕುಡಿಸುತ್ತಾ ಆ ಮಗುವನ್ನು ಬೆಳೆಸತೊಡಗಿದನು.

ಕಾಲಕ್ರಮೇಣ ಆತ್ತ ನಿಡುಗಲ್ಲು ದೊರೆ ಬೊಮ್ಮಣ್ಣ ಮತ್ತು ಪೂಜಾರಿಗೆ ಹುಲ್ಲುಬನ್ನಿ (ತೆರಿಗೆ) ತರಲು ಅಲ್ಲಿಂದ ಆಳು ಕಳುಹಿಸಿದನು. ಆಳು ಬಂದು ವಸತಿ ದಿಬ್ಬದಲ್ಲಿದ್ದ ದನಗಾಹಿಗಳಿಬ್ಬರಿಗೆ ತೆರಿಗೆ ವಿಷಯ ತಿಳಿಸಿದನು. ದೊರೆಯ ಆಜ್ಞೆಯಂತೆ ಬೊಮ್ಮಣ್ಣ ಮತ್ತು ಪೂಜಾರಿ ಇಬ್ಬರೂ ಹುಲ್ಲುಬನ್ನಿ ತೆಗೆದುಕೊಂಡು ಹೋಗುವಾಗ ವಡ್ಡರ ಯುವತಿಯ ಹೊಟ್ಟೆಯಲ್ಲಿ ಜನಿಸಿದ್ದ ಆ ಹುಡುಗ ಅವರನ್ನು ಹಿಂಬಾಲಿಸಿ ನಡೆದನು. ನೀನು ಹಿಂದಕ್ಕೆ ಹೋಗು ಬರಬೇಡ ಎಂದು ಹುಡುಗನಿಗೆ ಪೂಜಾರಿ ತಿಳಿಸಿದರೂ ಕೇಳದ ಆ ಹುಡುಗ ಸೊಂಟದಲ್ಲಿರುವ ಉಡುದಟ್ಟಿಯಲ್ಲಿ ಒಂದು ಚಾಕುವನ್ನು ಇಟ್ಟುಕೊಂಡು ಹಠ ಮಾಡಿ ಅವರ ಹಿಂದೆಯೇ ಹೋದನಂತೆ. ನೆಡಗಲ್ಲು ಗ್ರಾಮದಲ್ಲಿ ಪಾಳೆಗಾರರ ವಂಶದ ದೊರೆ ಒಂದು ಕೋಣವನ್ನು ಗೌರಸಂದ್ರದ ಮಾರಮ್ಮನಿಗೆ ಬಿಟ್ಟಿದ್ದರಂತೆ. ಆ ಕೋಣ ಕೊಬ್ಬಿ ದಾರಿಹೋಕರನ್ನು ಇರಿಯುತ್ತಿತ್ತಂತೆ. ಹೀಗಿರುವಾಗ ಗ್ರಾಮದ ಜನರೆಲ್ಲಾ ದೊರೆ ಬಳಿಗೆ ದೂರು ಹೇಳಿದರಂತೆ. ಆಗ ದೊರೆ ಕೋಣವನ್ನು ಹೊಡೆದವರಿಗೆ ಹೊಲಗದ್ದೆ, ಮಾನ್ಯೇವು, ಜಹಗೀರ್ ಹಾಕಿಸಿ ಕೊಡುತ್ತೇನೆಂದು ಟಾಂ,

ಟಾಂ ಹೊಡೆಸಿದನಂತೆ. ಆಗ ಬೊಮ್ಮಣ್ಣ ಮತ್ತು ಪೂಜಾರಿ ಮತ್ತು ಆ ಹುಡುಗ ಹುಲ್ಲುಬನ್ನಿ ತೆಗೆದುಕೊಂಡು ನಿಡಗಲ್ಲು ಗ್ರಾಮಕ್ಕೆ ಹೋಗುತ್ತಿರುವಾಗ ಆ ಕೋಣ ದಾರಿಯಲ್ಲಿ ಇತ್ತಂತೆ. ಅದನ್ನು ಕಂಡು ಹೆದರಿದ ಬೊಮ್ಮಣ್ಣ ಮತ್ತು ಪೂಜಾರಿ ತಲಾ ಒಂದೊಂದು ಮರ ಹತ್ತಿ ಕುಳಿತರಂತೆ. ಆಗ ಹುಡುಗ ಕೋಣವನ್ನು ಗದರಿಸಲಾಗಿ ಕೋಣವು ಆ ಹುಡುಗನನ್ನು ಇರಿಯಲಿಕ್ಕೆ ಬಂದಿತಂತೆ ಆಗ ಆ ಹುಡುಗ ತನ್ನ ಸೊಂಟದಲ್ಲಿದ್ದ ಬಾಕನ್ನು ತೆಗೆದುಕೊಂಡು ಕೋಣನ ಎದೆಗೆ ಹಾಕಿ ಸೀಳಿದನಂತೆ. ಇಂತಹ ಸುದ್ದಿ ತಿಳಿದು ಆ ಊರಿನಲ್ಲಿ ಜನ ಜಾತ್ರೆ ಸೇರಿತಂತೆ. ಅದನ್ನು ನೋಡಿ ಗಾಬರಿಗೊಂಡು ಭಲೆ! ಈ ಹುಡುಗ ಯಾರೆಂದು ಮಾತನಾಡುತ್ತಾ ದೊರೆಗೆ ತಿಳಿಸಿದರಂತೆ. ಆಗ ದೊರೆ ಅವನನ್ನು ಕರೆಯಿಸಿ "ನಿನಗೆ ನಾನು ನುಡಿದಂತೆ ಹೊಲಗದ್ದೆ, ಮಾನ್ಯೇವು ಕೊಡುತ್ತೇನೆಂದು, ಯಾವುದು ಬೇಕು ಹೇಳು ಎಂದು ಕೇಳಿದಾಗ ಪೂಜಾರಿ ಆ ಹುಡುಗನಿಗೆ ಕಿವಿಯಲ್ಲಿ ಈ ರೀತಿ ತಿಳಿಸಿದನಂತೆ: ಕುಲದಲ್ಲಿ ಕುಲ ಕೊಡಬೇಕು, ಗೌಡಿಕೆಯಲ್ಲಿ ಭಾಗ ಕೊಡಬೇಕು, ಅಣ್ಣ ತಮ್ಮನಾಗಿ ನಡೆದುಕೊಳ್ಳಬೇಕು, ಬೊಮ್ಮಣ್ಣ ಮದುವೆ ಆದ ಹತಿರ್ಗ್ತರ ನನಗೂ ಮದುವೆ ಮಾಡಬೇಕು ಅಂತ ಹೇಳಿದನಂತೆ."[೭೭] ಅದರಂತೆ ದೊರೆಯು ಬೊಮ್ಮಣ್ಣನಿಗೆ ಇದರಂತೆ ನಡೆದುಕೊಳ್ಳಲು ಆಜ್ಞೆ ಮಾಡಿದನಂತೆ. ಹುಡುಗ ಕೋಣವನ್ನು ಹೊಡೆದಿದ್ದರಿಂದ ಅವನಿಗೆ ಕೋಣನ ತಪ್ಪಣ್ಣ(ತಮ್ಮಣ್ಣ)ಗೌಡ ಎಂದು, ಬೊಮ್ಮಣ್ಣನಿಗೆ ಬೊಮ್ಮನಗೌಡ ಎಂದು ಹೆಸರು ಸೇರಿಸಿಕೊಂಡರಂತೆ.

ಅಲ್ಲಿಂದ ವಸತಿ ದಿನ್ನೆಗೆ ಹಿಂದಿರುಗಿ ಬಂದು ಬೊಮ್ಮಣ್ಣ, ಪೂಜಾರಿ ಮತ್ತು ತಮ್ಮಣ್ಣ ಈ ಮೂರು ಜನ ವಸತಿ ದಿನ್ನೆಯಲ್ಲಿದ್ದ ದೇವರನ್ನು ಹೊತ್ತುಕೊಂಡು ಮತ್ಸಮುದ್ರದ ಹತ್ತಿರ ಇರುವ ಹೊಳೆಯಲ್ಲಿ ಗಂಗಾ ಪೂಜೆ ಮಾಡಿಕೊಂಡು ಚನ್ನಮ್ಮನಾಗತಿಹಳ್ಳಿಗೆ ಬಂದು ಅಲ್ಲಿಂದ ಬೊಮ್ಮನಗೌಡ ಖ್ಯಾತ್ಯಾಯಿನಿ ವ್ರತ ಮಾಡುತ್ತ ಕಾಲ ಕಳೆಯುತ್ತಿದ್ದನು. ಈ ದೇವರು ಮೊದಲಿಗೆ ಲಿಂಗದ ರೂಪದಲ್ಲಿ ಸಿಕ್ಕಿದ್ದರಿಂದ ಇದನ್ನು ಲಿಂಗಣ್ಣ ಎಂದು ಕರೆದರು. ನಂತರ ಕೆಂಪು ಗಡ್ಡದಾರಿ ವೇಷದಲ್ಲಿ ಕಾಣಿಸಿಕೊಂಡಿದ್ದರಿಂದ ಕೆಂಜೆಡಿ ಎಂದು ಕರೆದರು. ದೊಡ್ಡ ಗಾತ್ರದ ಲಿಂಗದಲ್ಲಿ ಕಂಡಿದ್ದರಿಂದ ಮಹಾಲಿಂಗ ಎಂದು ಕರೆದುಕೊಂಡರು. ಅಲ್ಲಿಂದ ಇಲ್ಲಿಯವರೆಗೆ ಈ ದೇವರು ಪೂಜೆ ಮಾಡುತ್ತ ಬಂದಿರುವ ವಂಶದವರನ್ನು ದೇವರನ್ನು ಹೊರುವ ಅಥವಾ ದೇವರೋರ ಗೊಲ್ಲರು ಎಂದು ಕರೆಯಲಾಯಿತು.

ಕ್ಯಾತೆ ದೇವರಿಗೆ ಭಕ್ತರು ಆಂಧ್ರ ಪ್ರದೇಶದ ಕಲ್ಯಾಣದುರ್ಗ, ರಾಯದುರ್ಗ, ಕೂಡ್ಲಿಗೆ, ಬಳ್ಳಾರಿ, ಶಿರಾ, ತುಮಕೂರು, ಮೈಸೂರು, ದಾವಣಗೆರೆ, ಮೊಳಕಾಲ್ಮೂರು, ಚನ್ನಗಿರಿ, ಹರಿಹರ, ಹೊಸದುರ್ಗ, ಹೊಳಲ್ಕೆರೆ, ಹಿರಿಯೂರು ಮುಂತಾದ ಭಾಗದಿಂದ

ಬರುತ್ತಾರೆ ಎಂದು ಹದಿಮೂರು ಗುಡಿಕಟ್ಟಿನ ಗೌಡ ಕ್ಯಾತಗೊಂಡನಹಳ್ಳಿ ಗ್ರಾಮದ ಗೌಡ ಕೆಂಜೆಡಿಯಪ್ಪ ಹೇಳುತ್ತಾರೆ.

**ಅಡಿ ಟಿಪ್ಪಣಿ**

೧. ರಾಜಪ್ಪ ದಳವಾಯಿ, ಕನ್ನಡದಲ್ಲಿ ಸಂಸ್ಕೃತಿ ನಿರ್ವಚನ, ಸಿ.ವಿ.ಜಿ.ಇಂಡಿಯಾ ಬೆಂಗಳೂರು. ಪುಟ ೧೨೪.

೨. ವಿಲ್ಯಂ ಮಾಡ್ತ, ಜನಪದ ಸಾಹಿತ್ಯ, ಶೈಲಿ, ಭಾಷೆ ವೈಜ್ಞಾನಿ ವಿವೇಚನೆ, (ಜೀ.ಶಂ.ಪ ಮತ್ತು ವಿಲಿಯಂ ಮಾಡ್ತ(ಸಂ) ಕರ್ನಾಟಕ ಜನಪದ ) ೧೯೯೮ ಪುಟ ೧೫೪.

೩. ಸ್ವಾಮಿ ಬಿ.ಎಸ್, ಜಾನಪದ ಸೌರಭ, ಪುಟ ೮.

೪. ಕೃಷ್ಣಮೂರ್ತಿ ಹನೂರು, ಕತ್ತಲ ದಾರಿ ದೂರ,ಕಸಾಪ ಬೆಂಗಳೂರು ??ಟ ೨.

೫. ಅಂಬಳಿಕೆಹಿರಿಯಣ್ಣ, (ಕಾಡುಗೊಲ್ಲರಜನಪದ ಗೀತೆಗಳು,) ಕೃಷ್ಣಮೂರ್ತಿಹನೂರು (ಜನಪದ ವೀರಗೀತೆಗಳು,) ಮತ್ತು ಮೇತ್ರಿ.ಕೆ.ಎಂ, (ಕೃಷ್ಣಗೊಲ್ಲರ–ಕಾವ್ಯ) ಅವರುಗಳು ಸಂಗ್ರಹಿಸಿರುವ ಜನಪದ ಕಾವ್ಯಗಳಲ್ಲಿ ಕೆಲವನ್ನು ಬಳಸಿಕೊಂಡಿದ್ದೇನೆ.

೬. ಕೃಷ್ಣಮೂರ್ತಿ ಹನೂರು ಜನಪದ ವೀರಗೀತೆಗಳು .ಪುಟ ೨೪೩.

೭. ಮಲ್ಲಿಕಾರ್ಜುನ.ಕೆ.ಎಂ ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ. ಪುಟ ೧೩೨.

೮. ಅದೇ ಪು ೧೩೨.

೯. ಲಕ್ಷ್ಮಣ್ ತಲಗಾವಿ–ಚಿತ್ರದುರ್ಗದ ರಾಜಾ ಬಿಚ್ಚುಗತ್ತಿ ಭರಮಣ್ಣನಾಯಕ, ಪುಟ ೭೫.

೧೦. ಅದೇ. ಪುಟ ೭೬.

೧೧. ಮೀರಾಸಾಬಿಹಳ್ಳಿ ಶಿವಣ್ಣ.ಪಿ.ಬಿ, ಕಾಡುಗೊಲ್ಲರ ಸಂಸ್ಕೃತಿ. ಪುಟ ೬೫.

೧೨. ಲಕ್ಷ್ಮಣ್ ತಲಗಾವಿ, ಚಿತ್ರದುರ್ಗದ ರಾಜಾ ಬಿಚ್ಚುಗತ್ತಿ ಭರಮಣ್ಣನಾಯಕ, ಪುಟ ೭೭

೧೩. ಗೌಡ ಕೆಂಜೆಡೆಯಪ್ಪ, ೮೦ ವರ್ಷ, ಪಟ್ಟದ ಪೂಜಾರಿ ಕೆ.ತಿಪ್ಪೇಸ್ವಾಮಿ, ಕ್ಯಾತಗೊಂಡನಹಳ್ಳಿ ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೧೪. ವಿರೂಪಾಕ್ಷಪ್ಪ.ಜಿ. ಅಪ್ರಕಟಿತ ಲೇಖನ

೧೫. ಕೆಂಪೆಗೌಡ.ಕೆ ಜನಪದ ಭಾಷಾ ವಿಜ್ಞಾನ,ಪುಟ ೨೪.

೧೬. ಚಕ್ಕೆರೆ ಶಿವಶಂಕರ್, ಜಾನಪದ ತಿಳಿವಳಿಕೆ, ಪುಟ ೧೮೭.

೧೭. ತೀ.ನಂ.ಶಂಕರನಾರಾಯಣ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಪುಟ.

೧೮. ಲಿಂಗಯ್ಯ .ಡಿ, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪುಟ ೩೪.

೧೯. ಲಕ್ಷ್ಮೀದೇವಿ.ಎಲ್. ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು. ಪುಟ ೧೦.

೨೦. ರಾಮದಾಸರೆಡ್ಡಿ ಎಸ್.ಜಿ, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ. ಪುಟ ೭೯.

೨೧. ಕಿಕ್ಕೇರಿ ನಾರಾಯಣ, ಬುಡಕಟ್ಟು ಸಂಸ್ಕೃತಿ.(ಸಂ) ಪುಟ ೧೨.

೨೨. ನಾಗಭೂಷಣಸ್ವಾಮಿ.ಓ.ಎಲ್., ವಿಮರ್ಶೆಯ ಪರಿಭಾಷೆ ಪುಟ ೩೬೧.

******

## ಅಧ್ಯಾಯ : ಐದು

# ಕ್ಯಾತಪ್ಪದೈವದ ಬಗೆಗಿ ಕಾರ್ಯಾತ್ಮಕ ಪ್ರಕಾರಗಳ ಆಧಾರಗಳು

೫.೧. ನಂಬಿಕೆ,

೫.೨. ಆಚರಣೆ

೫.೩. ಸಂಪ್ರದಾಯ

೫.೪. ಸಾಮಾಜಿಕ ಸಂದರ್ಭ

೫.೫. ಧಾರ್ಮಿಕ ತಾರ್ಕಿಕತೆ

೫.೬. ಸಾಂಸ್ಕೃತಿಕತೆಯ ಸಾರ್ವತ್ರೀಕತೆ

# ಅಧ್ಯಾಯ ೫

# ಕ್ಯಾತಪ್ಪದೈವದ ಬಗೆಗಿನ ಕಾರ್ಯತ್ಮಕ ಪ್ರಕಾರಗಳ ಆಧಾರಗಳು

## ೫.೧ ನಂಬಿಕೆ–ಆಚರಣೆ

"ಪೂರ್ವದಿಂದಲೂ ಮನುಷ್ಯ ತನ್ನ ಬದುಕಿನ ಶ್ರೇಯಸ್ಸಿಗಾಗಿ, ರೋಗ ನಿವಾರಣೆಗಾಗಿ ದಿನಿತ್ಯದ ಕಾರ್ಯಚಟವಟಿಕೆಗಳು ಸುಗಮವಾಗಿ ನಡೆಯುವಂತೆ ತನಗೆ ಸಂಬಂಧವಿದ್ದ ಅಗೋಚರ ಶಕ್ತಿಯ ಆರಾಧನೆಗಾಗಿ ಪೂಜಾ ವಿಧಿ–ವಿಧಾನಗಳು, ಜಾತ್ರೆ, ಉತ್ಸವ, ಹಬ್ಬ–ಹರಿದಿನ, ನಂಬಿಕೆ ಹಾಗೂ ಆಚರಣೆಗಳನ್ನು ಆಚರಿಸುತ್ತಾ ಬಂದನು. ನಂಬಿಕೆ ಹಾಗೂ ಆಚರಣೆಗಳು ಮನುಷ್ಯ ಸಮಾಜದ ಸ್ವಾಥ್ಯ ಕಾಪಾಡುವ ಸಾಧನಗಳಲ್ಲದೆ, ಕುಲ ಸಂಕೇತ, ಕುಲದೇವರ ಆರಾಧನೆಗಾಗಿಯೇ ರೂಪುಗೊಂಡವುಗಳಾಗಿವೆ."[೧] ನಂಬಿಕೆಗಳು ಜಾನಪದದ ಒಂದು ಪ್ರಕಾರ, ಇಂದು ಅಧ್ಯಯನ ದೃಷ್ಟಿಯಿಂದ ಜಾನಪದವನ್ನು ಸಾಹಿತ್ಯಿಕ, ಭಾಷಿಕ, ಕ್ರಿಯಾತ್ಮಕ ಮತ್ತು ವೈಜ್ಞಾನಿಕ ಬಗೆಯಲ್ಲಿ ಅಧ್ಯಯನ ಮಾಡಲಾಗುತ್ತಿದೆ. 'ನಂಬಿಕೆ' ಎಂದರೆ ಒಂದು ಹೇಳಿಕೆ. ವಸ್ತು ಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ. ನಂಬಿಕೆಗಳು ಆದಿವಾಸಿಗಳಲ್ಲಿ ಅಥವಾ ಬುಡಕಟ್ಟುಗಳಲ್ಲಿ ಮಾತ್ರವಲ್ಲ, ಅವು ನಾಗರಿಕ ಸಮುದಾಯಗಳಲ್ಲಿಯೂ ಹೆಚ್ಚು ಕಂಡುಬರುತ್ತವೆ. ನಂಬಿಕೆಗಳಿಗೂ ಸಂಪ್ರದಾಯಗಳಿಗೂ ನಿಕಟ ಸಂಬಂಧವಿದ್ದು ಅವು ಒಂದಕ್ಕೊಂದು ಪರಸ್ಪರ ಪೂರಕವಾಗಿರುತ್ತವೆ. ಅವುಗಳ ಮೂಲ ಬೇರುಗಳು ಸಮುದಾಯದ ಸಂಸ್ಕೃತಿಗಳಲ್ಲಿ

ಆಳವಾಗಿದ್ದು ಜನ ಜೀವನಕ್ಕೆ ಮಾರ್ಗದರ್ಶನ ನೀಡುವ ಪ್ರಮುಖ ಶಕ್ತಿಗಳಾಗಿ ಬೆಳೆದಿವೆ.

ಜನರ ಬದುಕು ಮತ್ತು ನಂಬಿಕೆಗಳಿಗೆ ಇರುವ ಸಂಬಂಧ ತೀರ ಹತ್ತಿರವಾಗಿದೆ. ಈ ದೃಷ್ಟಿಯಿಂದ ಜನಪದ ನಂಬಿಕೆಗಳು ಜನತೆಯ ಆಂತರಿಕ ಮನೋಭಾವ, ಸಂಸ್ಕೃತಿ, ಸಂಪ್ರದಾಯಗಳನ್ನು ಪರಿಚಯಿಸುವ ಪ್ರಮುಖ ಸಾಧನಗಳಾಗುತ್ತವೆ. "ಜನಪದರ ನಂಬಿಕೆಗಳಲ್ಲಿ ಹಲವು ಮೂಢನಂಬಿಕೆಗಳಿವೆ. ಇವು ಸಾಮೂಹಿಕ ಅಭ್ಯಾಸಗಳಾಗಿದ್ದು ಇವುಗಳಿಗೆ ವಿವೇಚನೆಯ ಆಧಾರವಾಗಲಿ, ಋಣಭಾವವಾಗಲಿ ಇರುವುದಿಲ್ಲ. 'ವರ್ಜಿಲ್ ಹೇಳುವಂತೆ ಮೂಢನಂಬಿಕೆ ಒಂದು ಆಧಾರಿತ ಪದ್ಧತಿ ಅಥವಾ ಈ ನಂಬಿಕೆ ಸಮಾಜದಲ್ಲಿನ ವ್ಯಕ್ತಿಯನ್ನು ಒಪ್ಪುವಂತೆ ಮಾಡುತ್ತದೆ."[೨] ಮಾಂತ್ರಿಕ ವಿಷಯ ಹಾಗೂ ಅಗೋಚರ ಶಕ್ತಿಗಳಲ್ಲಿ ನಂಬಿಕೆ ಇಡುವಂತೆ ಮಾಡುವುದಲ್ಲದೆ, ಜನರನ್ನು ಸತತ ಭಯ, ಭೂತದ ಭೀತಿ ಉಂಟುಮಾಡುವ ಶಕ್ತಿ ಮೂಢನಂಬಿಕೆಯಾಗಿದೆ. ಬುಡಕಟ್ಟು ಸಮುದಾಯಗಳ ಕೆಲವು ನಂಬಿಕೆಗಳು ವೈಜ್ಞಾನಿಕ ಸತ್ಯ, ಸಾಮಾನ್ಯಜ್ಞಾನ, ಪೌರಾಣಿಕ, ಐತಿಹ್ಯ ಅಂಶಗಳು ಮತ್ತು ಚರಿತ್ರೆಯ ಕಥನಾಂಶಗಳನ್ನು ಒಳಗೊಂಡಿರುತ್ತವೆ. ಈ ನಂಬಿಕೆಗಳು ಮಾನವನ ನಿತ್ಯ ಬದುಕಿನ ಹಿನ್ನೆಲೆಯಲ್ಲಿ ರೂಪುಗೊಂಡು ಅವನ ಎಲ್ಲ ಕಾರ್ಯಕ್ಷೇತ್ರಗಳನ್ನು ಆವರಿಸಿಕೊಂಡಿರುತ್ತವೆ.

ನಂಬಿಕೆ ಮತ್ತು ಆಚರಣೆಗಳು ನಿತ್ಯ ಬದುಕಿನ ಎರಡು ಮುಖಗಳು. ನಂಬಿಕೆ ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡಿದರೆ, ಆಚರಣೆಗಳು ಕ್ರಿಯೆಯ ಮೂಲಕ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತವೆ. ಕ್ರಿಯೆ ಮತ್ತು ಭಾವನೆ ಎರಡನ್ನೂ ಒಳಗೊಂಡಿರುತ್ತದೆ. ಪ್ರಯಾಣಕ್ಕೆ ಹೋಗುವಾಗ ಖಾಲಿಕೊಡ, ಕಟ್ಟಿಗೆ ಹೊರೆ, ವಿಧವೆ, ಕೆಳಜಾತಿಯವರು ಎದುರಿಗೆ ಬಂದರೆ ಅದು ಅಶುಭ ಎಂಬ ಭಾವನೆ ಮೂಡಿಸಿಕೊಂಡು ಆ ದಿನದ ಪ್ರಯಾಣ ರದ್ದುಮಾಡಿ ಮನೆಗೆ ಹಿಂದಿರುಗುವುದು ಅದು ಕ್ರಿಯೆ ಆಗುತ್ತದೆ. ವಿಜ್ಞಾನಗಳ ನಡುವೆ ಬಾಳುತ್ತಿರುವ ಮನುಷ್ಯ ತನ್ನ ಜೀವನದ ಮೇಲೆ ಅತ್ಯಂತ ಪ್ರಭಾವ ಹಾಗೂ ಪರಿಣಾಮ ಬೀರುವ ನಂಬಿಕೆ, ಆಚರಣೆ, ಸಂಪ್ರದಾಯಗಳುನ್ನು ಕುರಿತು ಈ ಪ್ರಸ್ತುತ ಸಂದರ್ಭದಲ್ಲಿ ಚರ್ಚಿಸುವ ಅಗತ್ಯವಿದೆ. ಜನಪದ ಪರಂಪರೆಯಿಂದ ಬೆಳೆದುಬಂದ ನಂಬಿಕೆಗಳು ಬದುಕಿನಲ್ಲಿ ಬೆರೆತುಕೊಂಡು ಜನತೆಯ ಬದುಕನ್ನು ನಿಯಂತ್ರಿಸಿ, ನಿರ್ದೇಶಿಸುವ ವಿಶಿಷ್ಟ ಶಕ್ತಿಯಾಗಿರುವುದಲ್ಲದೆ, ಇವುಗಳು ಮನುಷ್ಯನಿಗೆ ವಜ್ರಕವಚವಾಗಿವೆ ಎಂದೆನಿಸುತ್ತವೆ. ಏಕೆಂದರೆ ಸಂಸ್ಕೃತಿಗೆ ಸಂಬಂಧಿಸಿದ ಎಲ್ಲ ಬಗೆಯ ಜ್ಞಾನವೂ ನಂಬಿಕೆಗಳ ಆಧಾರದ ಮೇಲೆ ಹುಟ್ಟಿ ಬೆಳವಣಿಗೆ ಹೊಂದುತ್ತವೆ. ವರ್ತಮಾನದೊಂದಿಗೆ ಭೂತ ಭವಿಷ್ಯತ್ ಕಾಲಗಳನ್ನು ಕಟ್ಟಿಕೊಡುತ್ತದೆ. ಅಲ್ಲದೆ,

ಮನುಷ್ಯನ ದೈನಂದಿನ ಬದುಕಿಗೆ ಹಿನ್ನಲೆಯಾಗಿ ಮುಂದೊದಗುವ ಸಂದರ್ಭಗಳಿಗೆ ಪೂರಕವಾಗಿ ಪ್ರಸ್ತುತ ಸಂದರ್ಭದಲ್ಲಿ ಹಲವು ಕಾರಣಗಳನ್ನು ಅವಲಂಬಿಸಿರುತ್ತದೆ. ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಹಲವು ವಲಯಗಳಿಗೆ ಅದು ಸಂಬಂಧಿಸಿರುತ್ತದೆ.

"ಜನಪದ ನಂಬಿಕೆಗಳ ಉಗಮ ಮಾನವನ ಹುಟ್ಟಿನೊಂದಿಗೆ ಆಯಿತು. ಮಾನವ ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಭಾಷೆಯನ್ನು ಮಾಧ್ಯಮವನ್ನಾಗಿ ಮಾಡಿಕೊಂಡಾಗಲೇ ಭಾಷೆಯ ಜೊತೆಯಲ್ಲಿಯೇ ನಂಬಿಕೆಗಳು ಹುಟ್ಟಿದವು. ನಂಬಿಕೆಗಳ ಬಗ್ಗೆ ಒಬ್ಬೊಬ್ಬ ವಿದ್ವಾಂಸರು ಒಂದೊಂದು ವ್ಯಾಖ್ಯಾನ ನೀಡಿದ್ದಾರೆ. ಗಾರ್ಡಿನರ್–'ಭಾವ ಜೀವಿಯ ವರದ ಹಸ್ತ'ಎಂದೂ, ಹಕ್ಸಲಿ– 'ರೂಪ ಬದಲಾಗಿಯೂ ಸ್ವರೂಪ ಉಳಿಯುತ್ತದೆ' ಎಂದೂ ಹ್ಯೂಮ್ಸ್– 'ವಿಶಿಷ್ಟ ಭಾವನೆ' ಎಂದೂ, ಹ್ಯಾಮಿಲ್ಟನ್– 'ಮಾನಸಿಕ ಸ್ಥಿತಿಯನ್ನು ಸೂಚಿಸುವುದು' ಎಂದೂ, ಪ್ರಸಿದ್ಧ ಮಾನವ ಶಾಸ್ತ್ರಜ್ಞ ಬಗೇಹಾಟ್– 'ಒಂದು ವಿಧವಾದ ಮಾನಸಿಕ ಅನುಭವ'ಇದು ಭಾವನಾತ್ಮಕವಾಗುತ್ತದೆ, ಅನೇಕ ಮಾನಸಿಕ ಅಂಶಗಳನ್ನು ಅವಲಂಬಿಸಿರುತ್ತದೆ, ಇದಕ್ಕೆ ತನ್ನದೇ ಆದ ಸ್ಪಷ್ಟವಾದ ಒಂದು ಸ್ವರೂಪವಿದೆ' ಎಂದೂ, ಜಾಮ್ಸ್‌ವಿಲ್–'ನಂಬಿಕೆಯೂ ವಾಸ್ತವಿಕ ಆಧಾರದ ಮೇಲೆ ನಿಂತಿದೆ."[೩] ಎಂದೂ, ಬಾಲ್ಡ್‌ವಿನ–'ಒಂದು ವಸ್ತುನಿಷ್ಟವಾದ ತೀರ್ಪು' ಎಂದು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. 'ನಂಬಿಕೆ ಮಾನಸಿಕ ಸ್ಥಿತಿಯ ಒಂದು ಪದರಾದರೆ, ಸಂಪ್ರದಾಯವು ಜನಾಂಗದ ಜೀವನ ಕ್ರಮವಾಗಿರುತ್ತದೆ'. ನಂಬಿಕೆ ಕ್ರಮೇಣ ಸಾಂಸ್ಕೃತಿಕ ಆವರಣಕ್ಕೆ ಬಿದ್ದು ಸಾಮಾಜಿಕ ಚೌಕಟ್ಟನ್ನು ಪಡೆದು ಕ್ರಿಯಾಶೀಲವಾಗಿ ಆಚರಣೆಗಳಿಗೆ ಒಗ್ಗುತ್ತದೆ ಎನ್ನುತ್ತಾರೆ ಡಿ.ಶ್ರೀರಾಮ ಇಟ್ಟಣ್ಣರವರು. ಬಾಗ್ಸ್ ಇದನ್ನು ಸಾಹಿತ್ಯೇತರ ಗುಂಪಿಗೆ ಸೇರಿಸುತ್ತಾನೆ. ನಂಬಿಕೆ ಪರಂಪರೆಯಿಂದ ಬಂದುದು. ಈ ಪರಂಪರೆ ಹೇಗೆ ಹುಟ್ಟಿತು ಎಂಬುವುದನ್ನು ಹೇಳುವುದು ಕಷ್ಟ. ಜನಪದರಲ್ಲಿರುವ ಮೂಢನಂಬಿಕೆ, ನಂಬಿಕೆಗಳನ್ನು ಧಾರ್ಮಿಕ, ಸಾಂಸ್ಕೃತಿಕ ಮತ್ತು ವೈಯಕ್ತಿಕ ಎಂದು ವಿಭಜಿಸುವುದು ಸೂಕ್ತ ಎನ್ನುತ್ತಾನೆ. ಈ ವಿದ್ವಾಂಸರುಗಳು ನೀಡಿರುವ ವ್ಯಾಖ್ಯಾನಗಳನ್ನು ಗಮನಿಸಿದಾಗ ಜನಪದ ನಂಬಿಕೆಗಳ ಉಗಮ ಮುಖ್ಯವಾಗಿ ಧಾರ್ಮಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕವೆಂದು ಗುರುತಿಸಬಹುದು.

ಹಿಂದಿನವರು ನಡೆಸಿಕೊಂಡು ಬಂದ ಸಂಪ್ರದಾಯವು ಇಂದು ನಂಬಿಕೆಯಾಗಿ ಮುಂದುವರಿವುದು. ಉದಾಹರಣೆಗೆ ಕಾಲು ಬೇರೆಯವರಿಗೆ ತಾಗಿದಾಗ ನಮಸ್ಕರಿಸುವುದು, ಬರಿ ತೊಟ್ಟಿಲು ತೂಗಿದರೆ ಮಗುವಿಗೆ ಹೊಟ್ಟೆ ನೋವು ಬರುತ್ತೆ ಎಂಬುದು, ವಿಧವೆ ಮಂಗಳ ಕಾರ್ಯದಲ್ಲಿ ಭಾಗವಹಿಸಬಾರದು ಎಂಬುದು, ಮೊರವನ್ನು, ಕೊಳಗವನ್ನು,

ಒಲೆ ಮುಂತಾದುವನ್ನು ಕಾಲಿನಿಂದ ಒದೆಯಬಾರದು ಎಂಬಂತಹ ನಂಬಿಕೆಗಳನ್ನು ಕಾಣಬಹುದಾಗಿದೆ. ಇಂತಹವುಗಳು ಆಚರಣೆಗೆ ಬಂದು ಪರಂಪರೆಯ ಮುದ್ರೆಯನ್ನು ಪಡೆದಾಗ ಅದು ವ್ಯಷ್ಟಿ ಸ್ವರೂಪವನ್ನು ದಾಟಿ ಸಮಷ್ಟಿ ರೂಪವನ್ನು ಪಡೆದುಕೊಂಡು ಸಾಮೂಹಿಕ ವ್ಯವಹಾರದಲ್ಲಿ ಸ್ಥಾನ ಪಡೆದುಕೊಳ್ಳುತ್ತವೆ. ಸಂಪ್ರದಾಯಗಳಲ್ಲಿ ಭಾವುಕ ಸಂಪ್ರದಾಯಗಳು, ಭೌತಿಕ ಸಂಪ್ರದಾಯಗಳು, ತಾಂತ್ರಿಕ ಸಂಪ್ರದಾಯಗಳು ಕಂಡುಬರುತ್ತವೆ. ಹಬ್ಬ ಹರಿದಿನಗಳು ಬರೀ ಮನರಂಜನೆ ಅಲ್ಲ, ಅವು ಧಾರ್ಮಿಕ ಪಡಿಯಚ್ಚು. ಈ ನಂಬಿಕೆಯೇ ಭಾವುಕ ಸಂಪ್ರದಾಯಗಳ ಬೆನ್ನಲುಬು ಎನ್ನಬಹುದು.

ಕೂಸು ಹುಟ್ಟಿತೆಂದರೆ ಸೂತಕ, ನಾಮಕರಣ, ದೀಕ್ಷೆಯಂತಹ ಆಚರಣೆಗಳು, ಮರಣವಾದಾಗ ಮಣ್ಣು ಮಾಡುವ, ಸುಡುವ ಹಲವು ರೀತಿಯ ಸಂಸ್ಕಾರಗಳು. ವ್ಯವಸಾಯಕ್ಕೆ ಯೋಗ್ಯ ಕಾಲ ನಿರ್ಣಯ ಮತ್ತು ಬೇಟೆಯ ತಂತ್ರಗಳು ಇತ್ಯಾದಿಗಳನ್ನು ಭೌತಿಕ ಸಂಪ್ರದಾಯವೆಂದು ಗುರುತಿಸುವುದು. ಇವೆಲ್ಲಾ ಒಂದು ರೀತಿಯ ಜನಪದ ನಂಬಿಕೆಗಳು ಎನ್ನಬಹುದು. ಮಾಟ–ಮಂತ್ರ, ಯಂತ್ರ–ತಂತ್ರ ಇವು ಪವಾಡದ ಉಪಕರಣಗಳು, ಇವುಗಳ ಉಚ್ಚಾರ ಬಳಕೆಯಿಂದ ಅದೃಷ್ಟದ ಫಲವಿದೆ ಎನ್ನುವ ನಂಬಿಕೆಗಳು ಸಮಾಜದಲ್ಲಿ ಕಂಡುಬರುತ್ತವೆ. ಅಥರ್ವ ವೇದದ ಮುಖ್ಯ ವಸ್ತು ಮಾಟ, ತಂತ್ರ, ಯಂತ್ರ ಇವುಗಳು ಬೇರೆ, ಬೇರೆ ಎನಿಸಿದರೂ ಅವುಗಳ ಕಾರ್ಯವಿಧಾನ ಒಂದೇ ಆಗಿದ್ದರೂ ಮಂತ್ರಗಳು ತಂತ್ರದ ರೂಪದಲ್ಲಿ ಕೊನೆಗೊಳ್ಳುತ್ತವೆ. ಒಂದೊಂದು ಮಂತ್ರಕ್ಕೂ ಒಂದೊಂದು ಅಧಿದೇವತೆ ಉಂಟು. ವಾಯು ಮಂತ್ರದಿಂದ ಗಾಳಿ, ವರುಣ ಮಂತ್ರದಿಂದ ನೀರು, ಅಗ್ನಿ ಮಂತ್ರದಿಂದ ಬೆಂಕಿ ಇತ್ಯಾದಿ.

ತಂತ್ರ ವಿದ್ಯೆ ಎನ್ನುವುದು ಒಂದು ಶಾಸ್ತ್ರ. ಧ್ಯಾನದ ಏಕಾಗ್ರತೆಯಿಂದ ಶಕ್ತಿ ಜಾಗೃತವಾಗುತ್ತದೆ. ತಂತ್ರ ಮತ್ತು ಮಂತ್ರಗಳನ್ನು ವೈಜ್ಞಾನಿಕ ರೂಪದಲ್ಲಿ ನಮ್ಮ ಸಂಸ್ಕೃತಿ ಸ್ವೀಕರಿಸಿದೆ. ಮಂತ್ರವು ಲೋಕ ಕಲ್ಯಾಣಕ್ಕಾಗಿ ಹುಟ್ಟಿಕೊಂಡಿದೆ. ಮಂತ್ರ ಎಂಬುದು ವಿಶಿಷ್ಟವಾದ ಧ್ವನಿ ಸಂಕೇತಗಳ ಕ್ರಮಬದ್ಧವಾದ ಉಚ್ಚಾರಣ ಕ್ರಿಯೆಯಾಗಿದೆ. ಈ ಮಂತ್ರಗಳ ಸರಳೀಕೃತ ರೂಪವೇ ತಂತ್ರ. ಯಂತ್ರವೂ ಸಹ ತಂತ್ರದ ಪರಿಷ್ಕೃತ ರೂಪವಾಗಿದೆ. ಮಂತ್ರದಲ್ಲಿ ಧ್ವನಿ ಸಾಧನೆ (ಜಪ) ಪ್ರಧಾನವಾಗಿರುತ್ತದೆ. ತಂತ್ರದಲ್ಲಿ ಧ್ವನಿ ಸಾಧನೆಯ ಜೊತೆಗೆ ಭೌತಿಕ ವಸ್ತುಗಳ ಪ್ರಯೋಗವಾಗುತ್ತದೆ. ಮಂತ್ರ, ತಂತ್ರಗಳ ಸಂಯುಕ್ತ ರೂಪದ ಹೊಸ ಆವಿಷ್ಕಾರ ಫಲವಾಗಿ ಯಂತ್ರ ಹುಟ್ಟಿಕೊಂಡಿತು. ಮೋಹಿನಿ, ಪುರ್ನಜನ್ಮ, ಪರಕಾಯ ಪ್ರವೇಶ, ವಶೀಕರಣ, ಪ್ರೇತಾತ್ಮ, ಯೋಗ, ಗ್ರಹಗಳ ಪ್ರಭಾವ, ಚಮತ್ಕಾರ, ಭೂತ, ಪ್ರೇತ, ದೆವ್ವ, ಮೈಮೇಲೆ ದೇವರು ಬರುವುದು, ಶಕುನಗಳು, ಜೋತಿಷ್ಯಶಾಸ್ತ್ರ, ನಾಡಿಗ್ರಂಥ ಮುಂತಾದವುಗಳನ್ನು ನಂಬುವವರೂ ಇದ್ದಾರೆ. ನಂಬದವರೂ

ಇದ್ದಾರೆ. ವಿಜ್ಞಾನ ತೆರೆದಿಟ್ಟ ಪುಸ್ತಕವಾದರೆ, ಮಂತ್ರ, ತಂತ್ರ ಮುಂತಾದುವೆಲ್ಲ ಇನ್ನು ಗೌಪ್ಯವಾಗಿಯೇ ಉಳಿದಿವೆ. ಧಾರ್ಮಿಕ ನಂಬಿಕೆಗಳು ಭಯದಿಂದ ಹುಟ್ಟಿದವು. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷ ಭಯ ಈ ವರ್ಗದ ನಂಬಿಕೆಗಳ ಹುಟ್ಟಿಗೆ ಮುಖ್ಯ ಕಾರಣವಾಗಿರುತ್ತವೆ. ಭೂತಾರಾಧನೆ, ದೈವಾರಾಧನೆ, ಪಿತೃಪೂಜೆ ಹಾಗೂ ದೇವತೆಗಳ ಆರಾಧನೆ, ಕುಲದೇವತಾ ಪದ್ಧತಿ ಇತ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಚಾಲ್ತಿಯಲ್ಲಿವೆ. ಜನಪದ ಕಾರ್ಯಚಟವಟಿಕೆಗಳಿಗೆ ತಕ್ಕಂತೆ ಈ ನಂಬಿಕೆಗಳು ರೂಪ ತಾಳುತ್ತವೆ.

"ವ್ಯಕ್ತಿಯ ಮನೋಭಾವಕ್ಕೆ ಒಪ್ಪಿಗೆಯಾಗುವ ವಿಷಯ ಒಂದು ಬಗೆಯ ಆತ್ಮ ವಿಶ್ಲೇಷಣೆಗೆ ಬುದ್ಧಿಪೂರ್ವಕವಾದ ಕ್ರಿಯೆ."[೪] ವ್ಯಕ್ತಿಗಳ ಅನುಭವಗಳು ವಾಸ್ತವಿಕ ಮೌಲ್ಯಗಳ ಇಲ್ಲವೆ ಧ್ಯೇಯಧೋರಣೆಗಳ ಒಂದು ಮಾನಸಿಕ ಸ್ಥಿತಿ. ನಂಬಿಕೆ ಪರಂಪರಗತವಾಗಿ ಶ್ರದ್ಧಾಮೂಲವಾದ ಸಾಮಾಜಿಕ ಸಮೀಕ್ಷೆಯಿಂದ ಪುನರಾವರ್ತಿತವಾಗಿ ಒಪ್ಪಿತವಾಗಿಯೂ ಭಾವ ಪ್ರಧಾನವಾದುದು. ಭೂತ, ವರ್ತಮಾನ ಅಥವಾ ಭವಿಷ್ಯತ್‌ಕಾಲದ ಒಪ್ಪಿತ ಫಲಿತಾಂಶಗಳನ್ನು ಸೂಚಿವ ಕಲ್ಪನೆ ಇದು. ಜನಜೀವನದಲ್ಲಿ ನಂಬಿಕೆಯದ್ದು ಪ್ರಮುಖ ಪಾತ್ರವಿರುತ್ತದೆ. ವೈಯಕ್ತಿಕ ನಂಬಿಕೆಗಳಲ್ಲಿ, ಧಾರ್ಮಿಕ ಹಾಗೂ ಸಾಂಸ್ಕೃತಿಕ ನಂಬಿಕೆಗಳು ಸಂಸ್ಕಾರ ಹೊಂದಿ ಒಬ್ಬ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಸಾರ್ವತ್ರಿಕವಾದರೂ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಬಹುದು. ಒಬ್ಬನಿಗೆ ಮಂಗಳವಾರ ಶುಭದಿನವಾದರೆ, ಮತ್ತೊಬ್ಬನಿಗೆ ಆ ದಿನ ಅಶುಭ ದಿನವಾಗಲೂ ಬಹುದು. ಒಂದಂಕಿ ಅದೃಷ್ಟದ ಸಂಖ್ಯೆಯಾದರೆ ಇನ್ನೊಬ್ಬನಿಗೆ ದುರಾದೃಷ್ಟದ ಸಂಖ್ಯೆಯಾಗಬಹುದು. ಈ ಬಗೆಯ ನಂಬಿಕೆಗಳಲ್ಲಿ ಬಾಳಿನ ಅನುಭವ ಹಾಗೂ ಮಾನಸಿಕ ಅನುಭವಗಳ ಮಿಳಿತವನ್ನು ಕಾಣಬಹುದು. ನಂಬಿಕೆಗಳು ಸಾಮಾಜಿಕವಾಗಿ ಮನುಷ್ಯ ಏನನ್ನು ಏಕೆ–ಹೇಗೆ– ಎಲ್ಲಿಯವರೆಗೆ ಪಾಲಿಸಬೇಕು ಎಂಬುವುದನ್ನು ತಿಳಿಸುತ್ತವೆ. ಕೆಲವನ್ನು ಮಾಡಬಾರದೆಂಬ ಸಾಮಾಜಿಕ ನಿರ್ಬಂಧವಿರುತ್ತದೆ. ಇದು ನಿಷೇಧವೆನಿಸುತ್ತದೆ. ಇಂಥ ನಿರ್ಬಂಧಕ್ಕೆ ಆಧಾರವಾಗಿ ಮತ್ತೆ ಕೆಲವು ನಂಬಿಕೆಗಳುಂಟಾಗಿರುತ್ತವೆ. ಹೀಗೆ ಮನುಷ್ಯನ ಬದುಕಿನ ಎಲ್ಲ ವಲಯಗಳು ನಂಬಿಕೆಗಳಿಂದ ಆವೃತ್ತವಾಗಿರುತ್ತವೆ. ನಿರಂತರವಾದ ಪರಂಪರೆಯಲ್ಲಿ ಅಂದಂದಿನ ಬದುಕಿಗೆ ಹಿಂದಣ ಬದುಕಿನ ನೆಲೆಗಳು ಮುಂದೆ ಆಶಿಸುವ ಆಶಿಸಬಾರದ ಪರಿಭಾವನೆಗಳೆಲ್ಲವೂ ನಂಬಿಕೆ– ನಿಷೇಧಗಳಾಗಿರುತ್ತವೆ. ಮತ್ತು ವೈಯಕ್ತಿಕ ನಂಬಿಕೆಗಳು ಕೆಲವೊಮ್ಮೆ ವ್ಯಕ್ತಿಯ ಯಶಸ್ಸಿಗೆ ಮಾರಕವಾಗುತ್ತವೆ.

ಪ್ರಯಾಣ ಮಾಡುವಾಗ ಖಾಲಿಕೊಡ, ಕಟ್ಟಿಗೆಹೊರೆ, ಶವಯಾತ್ರೆ, ವಿಕಲಾಂಗರು ಹಾಗೂ ವಿಧವೆಯರು ಎದುರಾದರೆ ಆ ದಿನ ತನ್ನ ಪ್ರಯಾಣವನ್ನೇ ನಿಲ್ಲಿಸಿ ಬಿಡುವವರೂ ಇದ್ದಾರೆ. ಒಳ್ಳೆ ಕಾರ್ಯಗಳಿಗೆ ಹೋಗುವಾಗಲೂ ಶುಭ ಶಕುನಗಳನ್ನು

ಗಮನಿಸುವವರೂ ಇದ್ದಾರೆ. ದೇವರು ತನ್ನ ರೋಗವನ್ನು ನಿವಾರಣೆ ಮಾಡುತ್ತಾನೆಂದು ನಂಬಿ, ವೈದ್ಯರ ಹತ್ತಿರ ಹೋಗದೆ ಇರುವವರೂ ಇದ್ದಾರೆ. ಇದರಿಂದ ಪ್ರಾಣವನ್ನು ಕಳೆದುಕೊಳ್ಳಬಹುದು. ಹೀಗೆ ನಂಬಿಕೆಗಳನ್ನು ಮಾನುಷ-ಅತಿ ಮಾನುಷ ಎಂದು ಎರಡು ರೀತಿಯಾಗಿ ಕಾಣಬಹುದು. ಮಾನುಷ ನಂಬಿಕೆಗಳು-ಉದಾಹರಣೆಗೆ ಹಬ್ಬಗಳು, ನಿದ್ರೆ, ಕನಸು, ಕಾಲ, ಹುಟ್ಟು, ಸಾವು, ಮದುವೆ, ಬಾಣಂತಿ, ಬಸುರಿ, ಹಾಗೂ ಪ್ರಮಾಣ ಇವುಗಳಿಗೆ ಸಂಬಂಧಿಸಿದವುಗಳು.

**ಅತಿಮಾನುಷ ನಂಬಿಕೆಗಳು**

ದೇವರು, ದೈವ, ಧರ್ಮ, ದೆವ್ವಗಳು, ಯಾತ್ರೆ, ತೀರ್ಥಕ್ಷೇತ್ರ ಇವು ಮನುಷ್ಯನ ಶಕ್ತಿಗೆ ಮೀರಿದ ನಂಬಿಕೆಗಳು ಎಂದರ್ಥ. ದೇವರ ಮೇಲಿನ ಹೂ ಬಲಕ್ಕೆ ಬಿದ್ದರೆ ಒಳ್ಳೆಯದು. ಎಡಕ್ಕೆ ಬಿದ್ದರೆ ಕೆಟ್ಟದ್ದು. ಕಳಸಕ್ಕೆ ತುಂಬಿದ ಕೊಡದ ನೀರನ್ನು ಹಾಕಿ ಪೂಜಿಸಬೇಕು. ಚಪ್ಪಲಿಯನ್ನು ತಲೆಯಡಿಯಲ್ಲಿ ಮಡಗಿಕೊಂಡು ಮಲಗಿದರೆ ದೆವ್ವಗಳು ಹತ್ತಿರ ಬರುವುದಿಲ್ಲ. ತೀರ್ಥಕ್ಷೇತ್ರದಲ್ಲಿ ಯಾರಾದರೂ ಸತ್ತರೆ ಅಲ್ಲಿಯೇ ಅಂತ್ಯ ಸಂಸ್ಕಾರ ಮಾಡಿದರೆ ಅವರು ಸ್ವರ್ಗಕ್ಕೆ ಹೋಗುವರು ಎಂಬ ನಂಬಿಕೆಗಳು ಅತಿಮಾನುಷ ಗುಂಪಿಗೆ ಸೇರುತ್ತವೆ. ನಂಬಿಕೆಗಳು ತಪ್ಪುಗ್ರಹಿಕೆ, ಅಜ್ಞಾನ, ಅಂಧ ವಿಶ್ವಾಸಗಳಿಂದಲೂ ಹುಟ್ಟಿರಬಹುದು. ನಂಬಿಕೆಗಳಲ್ಲಿ ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆಗಳೆರಡು ಕಂಡು ಬರುತ್ತವೆ. ಇವುಗಳ ಮೂಲ ಆಶಯ ಒಂದೇ ಆಗಿದ್ದು, ಕೆಲವೊಮ್ಮೆ ರೂಪ ಮಾತ್ರ ಬೇರೆಯಾಗಿರುತ್ತದೆ. ಕೆರೆಗೆ ಬಲಿಕೊಟ್ಟರೆ ಏರಿ ಭದ್ರವಾಗಿ ನಿಲ್ಲುತ್ತದೆ. ನರಬಲಿಕೊಟ್ಟರೆ ಐಶ್ವರ್ಯ ಮತ್ತು ದೇವರ ದಯಗಳಿಸಬಹುದು. ಮನೆ ಭದ್ರವಾಗಿ ನಿಲ್ಲಬೇಕಾದರೆ ತಳಹದಿಗೆ ಮಕ್ಕಳ ಬಲಿಕೊಡಬೇಕೆಂದೂ ಇಂತಹ ನಂಬಿಕೆಗಳು ಪ್ರಪಂಚದೆಲ್ಲೆಡೆ ಇರುವಂತೆ ಕನಾಟಕದಲ್ಲೂ ಇದ್ದವೆಂಬುವುದಕ್ಕೆ ಜನಪದ ಸಾಹಿತ್ಯದಲ್ಲಿ ಪುರಾವೆಗಳು ದೊರೆಯುತ್ತವೆ. ಕನಾಟಕದಲ್ಲಿ ನಂಬಿಕೆಗಳನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ವೈಜ್ಞಾನಿಕ, ಅವೈಜ್ಞಾನಿಕ ಎಂದು ವಿಭಜನೆ ಮಾಡಬಹುದು. ಎಲ್ಲ ನಂಬಿಕೆಗಳಲ್ಲೂ ವೈಜ್ಞಾನಿಕ ಅಂಶಗಳು ದೊರೆಯುವುದಿಲ್ಲ.

**ವೈಜ್ಞಾನಿಕ ನಂಬಿಕೆಗಳು**

ಸತ್ಯವನ್ನೊಳಗೊಂಡ ನಂಬಿಕೆಗಳು ಬಹಳಷ್ಟಿವೆ. ಉದಾಹರಣೆಗೆ ಊಟಕ್ಕೆ ಕುಳಿತಾಗ ತಟ್ಟೆ ಅಥವಾ ಎಲೆಯ ಸುತ್ತಲೂ ನೀರನ್ನು ಚಿಮುಕಿಸಬೇಕು ಎಂಬ ನಂಬಿಕೆಯು, ನೆಲವನ್ನು ನೀರಿನಿಂದ ಸಾರಿಸಿ ಅದರ ಮೇಲೆ ಎಲೆ ಹಾಸಿ ಊಟ ಮಾಡಬೇಕು ಎನ್ನುವ ಕ್ರಮವು ಸಣ್ಣ ಕ್ರಿಮಿ ಕೀಟಗಳು ತಟ್ಟೆ(ಎಲೆ)ಯ ಬಳಿಗೆ ಹರಿದು ಬರುವುದನ್ನು

ತಡೆಗಟ್ಟುವ ವೈಜ್ಞಾನಿಕ ಮಾದಿಯನ್ನು ಹೊಂದಿದೆ. ಅಂತೆಯೇ ಊಟ ಮಾಡುವಾಗ ಸೀತ(ಸೀನು)ರೆ ನೀರು ಚಿಮುಕಿಸಿಕೊಂಡು ಊಟ ಮಾಡುವುದು, ಉಗುರುನೀರು ಹಾಕಿದರೆ ಉಗುರು ಸುತ್ತು ಬರುತ್ತದೆ ಎಂಬಲ್ಲಿ ಉಗುರು ಒಂದು ವಿಷ ವಸ್ತು ಅದರ ಸಂದುಗಳಲ್ಲಿ ಕೊಳೆನೀರು ಸೇರಿಕೊಂಡಿರುತ್ತದೆ. ಇದನ್ನು ಬೇರೆಯವರಿಗೆ ಹಾಕಿದರೆ ವಿಷ ಜಂತು ಬೇರೆಯವರಿಗೆ ಪ್ರಸರಿಸುತ್ತವೆ. ಬೇರೆಯವರ ಚಪ್ಪಲಿಯನ್ನು ಮೆಟ್ಟಬಾರದು, ಬೇರೆಯವರ ಬಟ್ಟೆ ಧರಿಸಬಾರದು, ಇವುಗಳಿಂದ ಚರ್ಮರೋಗ ತಡೆಗಟ್ಟಬಹುದು ಎಂಬ ಸತ್ಯವನ್ನು ಕಾಣುತ್ತೇವೆ. ಇಂತಹ ನಂಬಿಕೆಗಳು ಆಚರಣೆಗಳನ್ನು ರೂಪಿಸುತ್ತವೆ. ಆಚರಣೆಗಳು ನಂಬಿಕೆ ನಿಷೇಧಗಳನ್ನು ಜೀವಂತವಾಗಿಡುತ್ತವೆ. ಕೆಲವು ನಂಬಿಕೆಗಳು ಬರಬರುತ್ತ ಐತಿಹ್ಯಗಳಾಗುತ್ತವೆ.

ಕಾಳಿನರಾಶಿ ಮಾಡುವಾಗ ಜೋರಾಗಿ ಮಾತನಾಡಬಾರದು. ಏನಾದರೂ ಇನ್ನೊಬ್ಬರಿಗೆ ಹೇಳುವುದಿದ್ದರೆ ಕೈ ಸನ್ನೆ, ಬಾಯಿ ಸನ್ನೆಯ ಮುಖಾಂತರವೇ ಹೇಳಬೇಕು. ಇಲ್ಲವೆ ಪಿಸುಧ್ವನಿಯಲ್ಲಿ ಮಾತನಾಡಬೇಕು ಎಂಬ ನಂಬಿಕೆ ಈಗಲೂ ಜನಪದರಲ್ಲಿದೆ. ಕೆಲವು ನಂಬಿಕೆಗಳಲ್ಲಂತೂ ನೀತಿ ಪ್ರಧಾನವಾಗಿರುತ್ತದೆ. ಉಂಡಮನೆಗೆ ಎರಡು ಬಗೆಯಬಾರದು. ತುಂಬಿದ ಕೆರೆಗೆ ಕಲ್ಲು ಎಸೆಯಬಾರದು. ಹಸಿದವನಿಗೆ ಅನ್ನ ಹಾಕಿದರೆ ಪುಣ್ಯ ಬರುತ್ತದೆ ಮುಂತಾದ ನಂಬಿಕೆಗಳು ಮಾನವೀಯತೆಯನ್ನು ಪ್ರತಿನಿಧಿಸುವ ಅಂಶಗಳಾಗಿವೆ. “ನಂಬಿಕೆಯಿಂದ ಮಾನವನಿಗೆ ಉಪಕಾರವಾಗುವ ಸಂದರ್ಭಗಳಿದ್ದಾಗ್ಯೂ ಮುಗ್ಧ ಜನತೆ ಬಹಳಷ್ಟು ಸಲ ಮೂಢನಂಬಿಕೆಗಳಿಂದ ತಮ್ಮ ಸಂಪತ್ತನ್ನು ನಾಶ ಮಾಡಿಕೊಂಡಿದ್ದಾರೆ. ಇಂದು ಯಾವ ನಂಬಿಕೆ ಎಷ್ಟು ಮೌಲ್ಯದ್ದು ಎಂದು ಪ್ರಮಾಣಿಸಿ ನೋಡುವ ವೈಚಾರಿಕತೆಯ ಅಗತ್ಯವಿದೆ. ನಂಬಿಕೆಗಳನ್ನು ವೈಚಾರಿಕ ಹಿನ್ನೆಲೆಯಲ್ಲಿ ವೈಜ್ಞಾನಿಕವಾಗಿ ಒರೆ ಹಚ್ಚುವ ಪ್ರಯತ್ನಗಳು ನಡೆದಿವೆ. ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಹಲವಾರು ನಂಬಿಕೆಗಳು ಆಚರಣೆಗಳಾಗಿ ಪರಿವರ್ತಿತವಾಗಿವೆ. ಅವುಗಳನ್ನು ಆಚರಿಸುವ ಪೂರ್ವದಲ್ಲಿ ಅವುಗಳಿಗೆ ನಂಬಿಕೆಯಿಂದ ಹರಕೆ ಹೊರುತ್ತಾರೆ. ಈ ಹರಕೆಗಳು ಧಾರ್ಮಿಕ, ಸಾಂಸ್ಕೃತಿ ವಲಯದಲ್ಲಿ ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ ಆಚರಿಸುವ ವಿಧಾಗಳನ್ನು ಜನಪದರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ.”[೫]

ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಜಾಗದಲ್ಲಿ, ಪೂಜೆ ಪುರಸ್ಕಾರಗಳನ್ನು ಕ್ರಮಬದ್ಧವಾಗಿ ನಡೆಸುವ ವಿಧಿ ವಿಧಾನವೇ ಆಚರಣೆ ಎಂದು ಕರೆಯುತ್ತೇವೆ. ಅದು ಪರಂಪರೆಯ ಮೇಲಿನ ಶ್ರದ್ದೆಯಿಂದ, ಪ್ರಜ್ಞೆಯಿಂದ ದೈವ ಭಯದಿಂದ ನಡೆಯುತ್ತದೆ. ಅದು ಕೇವಲ ಪೂಜೆ ಆಗಿರದೆ ಅವರ ಬದುಕಿನ ಒಂದು ಅಂಗವಾಗಿ ಮುಂದುವರೆಯುತ್ತದೆ. ತಲೆ ತಲಾಂತರದಿಂದ ಭೂಮಿ ಜೊತೆಗಿನ ಸಂಪರ್ಕದಿಂದ ಉಂಟಾದ ಅನುಭವಗಳು

ಆಚರಣೆಗಳ ಮೂಲಕ ಮುಂದಿನ ತಲೆಮಾರಿಗೆ ವರ್ಗಾಯಿಸಲ್ಪಡುತ್ತವೆ. ಆಚರಣೆಗಳಲ್ಲಿ, ದೈವಿಕ ಪರಿಕಲ್ಪನೆ, ಪ್ರಕೃತಿ ಆರಾಧನೆ, ಸಾಮೂಹಿಕತ್ವ, ಅಸಮಾನ್ಯ ಆಚರಣೆಗಳನ್ನು ಕಾಣಬಹುದು. ಜನಪದರ ಆಚರಣೆ ಮತ್ತು ನಂಬಿಕೆಗಳು ಐತಿಹ್ಯಗಳಾಗಿ ರೂಪುಗೊಳ್ಳುತ್ತವೆ.

ಯಾವುದೇ ಐತಿಹ್ಯ ಉಳಿಯಬೇಕಾದರೆ ಅದು ನಡೆದಿದೆ ಎಂಬುವುದಾಗಿ ವಕ್ತೃ ಮತ್ತು ಶ್ರೋತೃ ನಂಬಿಕೆಯನ್ನು ಇಡಬೇಕಾಗುತ್ತದೆಯೆಂಬುದು ಒಂದೆಡೆಯಾದರೆ ಕೆಲವು ನಂಬಿಕೆ ನಿಷೇಧಗಳು ಏಕೆ ಉಳಿದಿವೆ. ಇವುಗಳನ್ನು ಮೀರಿದ ಸಂದರ್ಭದ ಪರಿಣಾಮಗಳೇನು ಎಂಬುದನ್ನು ಐತಿಹ್ಯಗಳು ತಿಳಿಸುತ್ತವೆ. ಅಲ್ಲದೆ, ನಂಬಿಕೆ–ನಿಷೇಧಗಳನ್ನು ಪಾಲಿಸುವುದರಿಂದ ಉಂಟಾಗುವ ಅಥವಾ ಒದಗುವ ಪ್ರತಿಫಲವನ್ನು ನಿದರ್ಶನಾತ್ಮಕವಾಗಿ ನಿರೂಪಿಸುತ್ತವೆ. ಎಲ್ಲ ಸಮುದಾಯಗಳು ನಂಬಿಕೆಗಳನ್ನು ಒಳಗೊಂಡಿರುತ್ತವೆ. ನಿಷೇಧಗಳನ್ನು ಪಾಲಿಸುತ್ತವೆ. ಅಧ್ಯಯನದ ದೃಷ್ಟಿಯಿಂದ ಸ್ಥಳ–ವ್ಯಕ್ತಿ–ಸಮುದಾಯ ಘಟನಾ ಸಂಬಂಧಿ ಆಚರಣೆ–ನಂಬಿಕೆಗಳ ಐತಿಹ್ಯಗಳು ಕಟ್ಟಿಕೊಡುವ ಸಂಸ್ಕೃತಿಯ ಆಯಾಮಗಳು ಗಮನಾರ್ಹವಾಗಿವೆ. ಆಚರಣೆಗಳು ಜನಪದರ ಬದುಕಿನ ಅವಿಭಾಜ್ಯ ಅಂಗಗಳು. ಹುಟ್ಟು, ವಿವಾಹ, ಸಾವಿಗೆ ಸಂಬಂಧಿಸಿದ ಆಚರಣೆಗಳು ಇವು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಹಾಗೂ ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿರುತ್ತವೆ. ಕಾಲಕ್ಕೆ ತಕ್ಕಂತೆ ಬದಲಾವಣೆಗೊಳ್ಳುತ್ತಾ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದ ವಿಶಿಷ್ಟ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹಗಳು, ನಂಬಿಕೆ, ಸಂಪ್ರದಾಯದ ಸೃಷ್ಟಿಗೆ ಕಾರಣವಾಗಿದೆ ಎನ್ನಬಹುದು. ಸಂಪ್ರದಾಯ ಆಚರಣೆಗಳು ಪರಂಪರೆಯಿಂದ ಪರಂಪರೆಗೆ ವಂಶವಾಹಿನಿಯಂತೆ ಸಾಗಿಬರುತ್ತವೆ.

### ೫.೩ ಸಂಪ್ರದಾಯ

ಭಯದ ಮನಸ್ಸಿನಿಂದ ದೇವರು, ಧರ್ಮಗಳು ರೂಪುಗೊಂಡ ಹಿನ್ನೆಲೆಯಲ್ಲಿಯೇ ನಂಬಿಕೆ, ಆಚರಣೆ, ಹರಕೆ ಹಾಗೂ ಸಂಪ್ರದಾಯಗಳು ಬಳಕೆಗೆ ಬಂದವು. ನಂಬಿಕೆಗಳು, ನಂಬಿಕೆಗಳಿಂದ ಆಚರಣೆಗಳು, ಆಚರಣೆಗಳಿಂದ ಸಂಪ್ರದಾಯಗಳು ಇವು ಒಂದಕ್ಕಿಂತ ಇನ್ನೊಂದು ಆಶ್ಚರ್ಯ ಪಡುವಂಥವುಗಳು. ಏಕೆಂದರೆ ಯಾವುದೇ ಒಂದು ಜನಾಂಗದ ಜೀವನ ರೂಪಿಸುವಲ್ಲಿ ಆಯಾ ಸಮುದಾಯಗಳು ರೂಪಿಸಿಕೊಂಡು ಬಂದಿರುವ ನಂಬಿಕೆ ಸಂಪ್ರದಾಯಗಳು ಪ್ರಧಾನ ಪಾತ್ರವಹಿಸುತ್ತವೆ. ಆದಿ ಮಾನವನಿಂದ ಹಿಡಿದು ಇಂದಿನವರೆಗೂ ಪರಂಪರಗತವಾಗಿ ರೂಢಿಸಿಕೊಂಡು ಬಂದಿರುವ ವಿಶಿಷ್ಟ ಉಪಾಸನಾ ಪದ್ಧತಿಗಳೇ ಸಂಪ್ರದಾಯವೆನಿಸುತ್ತವೆ. ಒಂದು ಸಾಮಾಜಿಕ ವರ್ಗ ಪರಂಪರಾಗತವಾಗಿ ಅನುಸರಿಸುತ್ತಾ ಬಂದಿರುವ ಕ್ರಿಯಾವಿನ್ಯಾಸವನ್ನು ಸಂಪ್ರದಾಯ ಎನ್ನಬಹುದು. ಯಾವುದೇ ಒಂದು ನಡವಳಿಕೆಯು ರೂಢಿಗತವಾಗಿ ಸಮಾಜದಲ್ಲಿ ಸ್ಥಾಪನೆಯಾದಾಗ ಅದು

ಸಂಪ್ರದಾಯ ಎನಿಸಿಕೊಳ್ಳುತ್ತದೆ. ಈ ಸಂಪ್ರದಾಯ ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುತ್ತಿರುತ್ತದೆ. ಸಾಮಾನ್ಯವಾಗಿ ಪರಂಪರೆಯಿಂದ ಬಂದ ಪದ್ಧತಿ ಮತ್ತು ಆಚರಣೆಗಳ ಒಟ್ಟು ಮೊತ್ತವೇ ಸಂಪ್ರದಾಯ. "ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ. ದೇವರು-ಧರ್ಮ ಜೀವಂತವಾಗಿರುವುದು ಸಂಪ್ರದಾಯ ಮತ್ತು ಆಚರಣೆಗಳಿಂದ. ಅವು ಮನುಷ್ಯನ ಜೀವನದುದ್ದಕ್ಕೂ ಚಾಚಿಕೊಂಡಿವೆ. ಮನುಷ್ಯ ಅಪ್ರಜ್ಞಪೂರ್ವಕವಾಗಿ ಹಿಂದಿನಿಂದಲೂ ಒಪ್ಪಿಕೊಂಡು ಬಂದಿರುವುದನ್ನು ಸಂಪ್ರದಾಯ ಎಂದು ಕರೆಯಬಹುದು."[೬] ಅಸ್ಥಿತ್ವವಿಲ್ಲದೆ ವ್ಯಕ್ತಿಯ ಕ್ರಿಯೆ ಹಾಗೂ ಆಲೋಚನೆಗಳು ರೂಪುಗೊಳ್ಳುವುದಿಲ್ಲ. ಮಾನವನು ತನ್ನ ನಿತ್ಯದ ಎಲ್ಲಾ ಹಂತಗಳಲ್ಲೂ ಒಂದಲ್ಲ ಒಂದು ರೀತಿಯಾಗಿ ಸಂಪ್ರದಾಯಕ್ಕೆ ಶರಣಾಗುತ್ತಾನೆ. ಅದಕ್ಕೆ ಆತುಕೊಂಡೇ ನಡೆಯಬೇಕಾದುದು ಅವನಿಗೆ ಅನಿವಾರ್ಯವಾಗಿರುತ್ತದೆ. ಆಚರಣೆ ಹಾಗೂ ಸಂಪ್ರಾಯಗಳು ಒಟ್ಟಾಗಿಯೇ ಮನುಷ್ಯನ ಬದುಕಿನ ಉದ್ದಕ್ಕೂ ಚಾಚಿಕೊಂಡಿರುತ್ತವೆ. ಸಂಪ್ರದಾಯವು ಮಾನವನ ಜೀವನದ ಸರ್ವಕ್ಷೇತ್ರಗಳಲ್ಲಿಯೂ ಆವರಿಸಿಕೊಂಡಿದೆ. ಸಂಪ್ರದಾಯದ ಅಸ್ತಿತ್ವವಿಲ್ಲದೆ ವ್ಯಕ್ತಿಯ ಕ್ರಿಯೆ ಅಥವಾ ಆಲೋಚನೆಗಳು ರೂಪುಗೊಳ್ಳುವುದಿಲ್ಲ. ಮಾನವ ತನ್ನ ನಿತ್ಯ ಜೀವನದ ಎಲ್ಲಾ ಹಂತಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಸಂಪ್ರದಾಯಕ್ಕೆ ಶರಣಾಗಿ ಅದಕ್ಕೆ ಆತುಕೊಂಡೇ ನಡೆಯಬೇಕಾದುದು ಅವನಿಗೆ ಅನಿವಾರ್ಯವಾಗಿರುತ್ತದೆ.

ಸಂಪ್ರದಾಯಗಳು ಕೇವಲ ಮೌಢ್ಯ-ಕಂದಚಾರಗಳನ್ನು ಬಿತ್ತುವುದಿಲ್ಲ. ಅವುಗಳು ಸಾಮಾಜಿಕ ಜನ ಜೀವನದೊಡನೆ ನಿಕಟ ಸಂಬಂಧವನ್ನು ಇರಿಸಿಕೊಂಡಿರುತ್ತವೆ. "ಸಂಪ್ರದಾಯಗಳು ಕೇವಲ ಕಂದಾಚಾರಗಳಲ್ಲ. ಅವು ಸಾಮಾಜಿಕ ಜೀವನದೊಡನೆ ನಿಕಟ ಸಂಬಂಧವನ್ನು ಹೊಂದಿವೆ. ಯಾವುದೇ ಸಮಾಜ-ಸಂಸ್ಕೃತಿ ಬೆಳೆದು ಬಂದ ರೀತಿಯನ್ನು ತಿಳಿದುಕೊಳ್ಳಲು ಸಂಪ್ರದಾಯಗಳು ಸಹಕಾರಿಯಾಗಿವೆ. ಬುಡಕಟ್ಟು ಸಮುದಾಯಗಳಲ್ಲಿ, ಗ್ರಾಮೀಣ ಪ್ರದೇಶದಲ್ಲಿ ಸಂಪ್ರದಾಯಗಳು ಪ್ರಬಲವಾಗಿರುತ್ತವೆ. ಅವುಗಳ ಹಿಡಿತದಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ನಂಬಿಕೆಗಳೇ ಸಂಪ್ರದಾಯಗಳ ಮೂಲ. ನಂಬಿಕೆಗಳು ಸಂಪ್ರದಾಯಗಳಾಗಿ ರೂಪುಗೊಳ್ಳುತ್ತವೆ. ಅವು ಸಂಸ್ಕೃತಿಯನ್ನು ಪೋಷಿಸುವಲ್ಲಿ ಮತ್ತು ಮಾನವ ಜೀವನವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ."[೭] ಸಮಾಜವನ್ನು ಒಂದುಗೂಡಿಸುವ, ತಿದ್ದುವ ಹಾಗೂ ವ್ಯಕ್ತಿಗಳನ್ನು ನಿಯಂತ್ರಿಸುವ ಸಾಮರ್ಥ್ಯವನ್ನು ಅವು ಪಡೆದಿರುತ್ತವೆ. ಆದ್ದರಿಂದ ಸಂಪ್ರದಾಯವನ್ನು ಸಮಾಜ ತನ್ನ ಅನುಕೂಲಕ್ಕೆ ತಕ್ಕಂತೆ ಆಚರಿಸುತ್ತಾ ಬಂದಿದೆ.

ಕ್ಯಾತಪ್ಪ ದೈವಗಳ ಹಬ್ಬ, ಉತ್ಸವ ಮತ್ತು ಆಚರಣೆ, ಸಂಪ್ರದಾಯಗಳು ವಿಶಿಷ್ಟ ರೀತಿಯಲ್ಲಿ ಕಂಡು ಬರುತ್ತವೆ. ಜನಪದರು ತಮ್ಮ ಬದುಕಿನಲ್ಲಿ ತಾವು ಕಟ್ಟಿಕೊಂಡ

ಹರಕೆಗಳನ್ನು ತೀರಿಸಲು ಇರುವ ಸುಸಂದರ್ಭಗಳೆಂದರೆ ದೈವಗಳ ಹಬ್ಬ, ಉತ್ಸವಗಳು. ಹರಕೆ, ಕಾಣಿಕೆ, ಮೀಸಲು ಒಪ್ಪಿಸುವಿಕೆ, ಸೇವೆ ಸಲ್ಲಿಸುವಿಕೆ ಇತ್ಯಾದಿ ಆಚರಣೆಗಳನ್ನು ಈ ಸಂದರ್ಭದಲ್ಲಿ ಕಾಣಬಹುದಾಗಿದೆ. ಆಚರಣೆಗಳು ಕಡ್ಡಾಯವಾದರೆ, ಹರಕೆಗಳು ಭಕ್ತರ ವೈಯಕ್ತಿಕ ವಿಷಯವಾಗುತ್ತದೆ. ಜನಪದರ ಹರಕೆಗಳೆಲ್ಲವೂ ಬಹಳ ಸಲ ಆಚರಣೆಯ ರೂಪದಲ್ಲಿ ನಡೆಯುತ್ತವೆ. ರಾಜ್ಯದಲ್ಲಿ ವ್ಯವಸಾಯ ಮತ್ತು ಪಶುಪಾಲನ ಸಂಸ್ಕೃತಿಯನ್ನು ಜನಪದರು ಹೆಚ್ಚು ಅವಲಂಬಿಸಿರುವುದರಿಂದ ಬೇರೆ ಬೇರೆ ರಾಜ್ಯಗಳಲ್ಲಿ ಕಾಣದ ವಿಶಿಷ್ಟ ಆಚರಣೆಗಳು ಕೇತಪ್ಪನ ಜಾತ್ರೆ ಹಾಗೂ ಉತ್ಸವಗಳಲ್ಲಿ ಕಂಡು ಬರುತ್ತವೆ.ಇಲ್ಲಿರುವ ಕೆಲವು ಆಚರಣೆಗಳು ಬೇರೆ ರಾಜ್ಯಗಳಲ್ಲೂ ಸಮಾನಾಂತರವಾಗಿ ಕಂಡು ಬರುತ್ತವೆ. ಅವುಗಳ ಅಧ್ಯಯನ ಪ್ರಸ್ತುತವೆನಿಸುತ್ತದೆ.

ಹರಕೆ ಜನಪದ ಆಚರಣೆಗಳಲ್ಲಿ ಇದು ಒಂದು. ಕೆಟ್ಟದ್ದು ಬಾರದಿರಲಿ, ಒಳ್ಳೆಯದು ಬರಲಿ ಎಂದು ತಮಗೆ ಇಷ್ಟವಾದ ದೇವರುಗಳಲ್ಲಿ ಬೇಡಿಕೊಳ್ಳುವುದೇ ಹರಕೆ. "ಪ್ರಕೃತಿಯ ಅನಂತ ಶಕ್ತಿಯನ್ನು ಒಲಿಸಿಕೊಳ್ಳಲು ಅಥವಾ ಪ್ರಸನ್ನಗೊಳಿಸಲು ಜನಪದರು ನಡೆಸುತ್ತಾ ಬಂದ ಹಲವು ಬಗೆಯ ಆಚರಣೆಗಳಲ್ಲಿ ಇದು ಒಂದು."[೮] ನಿತ್ಯದ ಪ್ರಾರ್ಥನೆಗಿಂತ ಭಿನ್ನವಾಗಿದ್ದು ಇದು ವ್ಯಕ್ತಿಗತವಾಗಿರುತ್ತದೆ. ಹರಕೆಯಲ್ಲಿ ವ್ಯಕ್ತಿಗತವಾದ ಅಂಶ ಭಾಗಶಃ ಇದ್ದರೂ ಸಾರ್ವತ್ರಿಕ ಹಾಗೂ ಸಾಮೂಹಿಕ ಇಲ್ಲವೆ ಕೌಟುಂಬಿಕ ಹಿತ ಪ್ರಧಾನವಾಗಿರುತ್ತದೆ ಎನ್ನಬಹುದು.



**ಭಕ್ತರು ಸೆಳೆ ನೀರನ್ನು ಹಾಕಿಸಿಕೊಳ್ಳುತ್ತಿರುವ ಚಿತ್ರ**

ಪ್ರತಿಯೊಂದು ಮನೆಗೂ ಒಂದೊಂದು ಬೆಡಗಿಗೂ, ಕುಲ–ಬಳ್ಳಿಗಳಿಗೂ ಮನೆದೇವರುಗಳು, ವಾರದ ದೇವರು, ಅಮವಾಸೆ ದೇವರುಗಳಿರುತ್ತವೆ. ಮನೆಯಲ್ಲಿ ಯಾರಿಗಾದರೂ ಕೇಡುಂಟಾದರೆ ಅಥವಾ ಕಾಯಿಲೆಯಲ್ಲಿ ನರಳುತ್ತಿದ್ದರೆ ತಮ್ಮ ದೇವರಿಗೆ ಹರಕೆ ಹೊತ್ತದ್ದರಿಂದ ನಿವಾರಣೆಯಾಯಿತೆಂದು ದೇವರಿಗೆ ಬಲಿಕೊಡುವ, ಅಭಿಷೇಕ ಮಾಡಿಸುವ, ವಾರದಪೂಜೆ ಮಾಡಿಸುವ, ಹಿಟ್ಟಿನಾರತಿ, ಓಕುಳಿ, ಧೂಪದಾರತಿ, ನವಣೆ ನೈವೇದ್ಯ, ತುಪ್ಪದ ದೀಪ, ಹೊಳೆ ಪೂಜೆ, ಹುತ್ತದ ಪೂಜೆ, ಬಸವನಪೂಜೆ, ಮರದ ಪೂಜೆ, ದೇವರಿಗೆ ಕಂಚು, ಬೆಳ್ಳಿ, ತಾಮ್ರ ಮತ್ತು ಹಿತ್ತಾಳೆ ಇತರೆ ಲೋಹಗಳಿಂದ ಮುಖವಾಡ, ಛತ್ರಿ, ಕಿರೀಟ, ಕಣ್ಣು, ಬಾಯಿಬೀಗ, ತೊಟ್ಟಿಲು, ಲಿಂಗ, ನಾಗರ ಹೆಡೆ ಮಾಡಿಸಿ ಕಾಣಿಕೆ ಕೊಡುವ, ದಿಂಡುರುಳು ಸೇವೆ, ಉಪವಾಸ, ತೀರ್ಥಯಾತ್ರೆ, ಅನ್ನದಾಸೋಹ, ಪರವು ಮಾಡಿಸುವ ಹರಕೆಗಳನ್ನು ತಮ್ಮ ಶಕ್ತ್ಯಾನುಸಾರ ಮನೆಯ ಯಜಮಾನ ಇಲ್ಲವೆ, ಯಜಮಾನಿ ರೋಗಿಗಳ ಪರವಾಗಿ ಮಾಡಿಕೊಂಡ ಹರಕೆಯನ್ನು ತಪ್ಪದೇ ತೀರಿಸುತ್ತಾರೆ. 'ಮ್ಮ ಮಾತಿಗೆ ಪ್ರಮಾಣ ಎಂಬ ಅರ್ಥದಲ್ಲಿ ಶುಭವಾದ ಒಂದು ತುಂಡು ಬಿಳಿಯ ಬಟ್ಟೆಯನ್ನು ತುಂಬಿದ ಕೊಡದಲ್ಲಿ ಒದ್ದೆಮಾಡಿ ಅದಕ್ಕೆ ಅರಿಷಿಣಹಚ್ಚಿ ಅದರಲ್ಲಿ ಅಕ್ಕಿಕಾಳುಗಳನ್ನು ಮತ್ತು ನಾಣ್ಯವನ್ನು (ಸಾಮಾನ್ಯವಾಗಿ ಐವತ್ತುಪೈಸೆ, ಅಥವಾ ರೂಪಾಯಿ ಬಿಡಿಗಾಸುಗಳನ್ನು) ಕಟ್ಟಿ ಅದನ್ನು ಮನೆಯಲ್ಲಿನ ನೆಲುವಿನ ಕಾಲಿಗೆ ಕಟ್ಟುತ್ತಾರೆ. ಅಥವಾ ಮನೆಯ ಮುಂದಿನ ಸೂರಿಗೆ (ಗಳಕ್ಕೆ) ಕಟ್ಟುವುದುಂಟು. ಇದನ್ನು ಮುಡುಪು ಕಟ್ಟುವುದು ಎನ್ನುತ್ತಾರೆ. "ಹರಕೆ ಕಟ್ಟಿಕೊಂಡ ವ್ಯಕ್ತಿಯ ಕಷ್ಟಗಳು ನಿವಾರಣೆಯಾದಾಗ ದೇವರ ವಾರ, ಹಬ್ಬ, ಜಾತ್ರೆ, ಉತ್ಸವಗಳ ದಿನ ಹರಕೆ ತೀರಿಸುತ್ತಾರೆ. ಹರಕೆಯಲ್ಲಿ ವೈಯಕ್ತಿಕ ಹರಕೆ, ಕೌಟುಂಬಿಕ ಹರಕೆ ಹಾಗೂ ಸಾಮೂಹಿಕ ಹರಕೆಗಳು ಕಂಡುಬರುತ್ತವೆ.೯" ವೈಯಕ್ತಿಕ ಕುಂದು ಕೊರತೆಗಳ ನಿವಾರಣೆಗಾಗಿ ಮಾಡಿಕೊಳ್ಳುವುದು ವೈಯಕ್ತಿಕ ಹರಕೆ ಎನಿಸಿಕೊಳ್ಳುತ್ತದೆ. ಕುಟುಂಬದಲ್ಲಿ ಸುಖ,ಶಾಂತಿ, ನೆಮ್ಮದಿ ಹಾಗೂ ಆರೋಗ್ಯ ವೃದ್ಧಿಗೊಂಡು ಮನೆಯ ವಾತಾವರಣ ಉತ್ತಮವಾಗಲೆಂದು ಯಜಮಾನ ಮಾಡಿಕೊಂಡ ಹರಕೆ ತೀರಿಸುವುದು ಕೌಟುಂಬಿಕ ಹರಕೆಯಾದರೆ, ಸಾಮೂಹಿಕ ಅಥವಾ ಊರ ಹರಕೆ– ಗ್ರಾಮದ ಜನರಿಗೆ ತೊಂದರೆ ಉಂಟಾದಾಗ ಎಲ್ಲರೂ ಗ್ರಾಮದ ದೇವರುಗಳಿಗೆ ಹಬ್ಬ, ಹೊಳೆಪೂಜೆ, ಜಾತ್ರೆ ಮಾಡುವುದರ ಮೂಲಕ ಹರಕೆ ತೀರಿಸುವುದಾಗಿದೆ.

**ಚಾಟಿ ಬೆತ್ತ**

ದೇವರ ಆಚರಣೆ ಹಾಗೂ ಉತ್ಸವ ಸಂದರ್ಭದಲ್ಲಿ ಅಲಗು ಕಟ್ಟಿಸಿಕೊಂಡ ಹಾಗೂ ಪೆಟ್ಟಿಗೆ ದೇವರುಗಳನ್ನು ಹೊತ್ತಂತ ಈರಗಾರು ಸಾಮಾನ್ಯವಾಗಿ ಬಲಗೈಲಿ

ಬಿದಿರಿನ ಬೆತ್ತ ಹಿಡಿದು ನಿಂತಿರುತ್ತಾರೆ. ಕೆಲವರು ತ್ರಿಶೂಲ ಅಥವಾ ಚಾಟಿ ಹಿಡಿದು ನಿಂತು ಹರಕೆ ತೀರಿಸುತ್ತಾರೆ. ರೋಗಪೀಡಿತ ಜನರಿಗೆ ದಿಂಡುರುಳು ಸೇವೆ ಮಾಡಿಸಿ ಅವರ ತಲೆ ಮೇಲೆ ನಿಂಬೆಹಣ್ಣು ಕೊಯ್ದಾಕಿ ಮುಖಕ್ಕೆ ನೀರು ಚಿಮುಕಿಸಿ ಪೂಜಾರಿಗಳು ಚಾಟಿಯಿಂದ ಹೊಡೆಯುತ್ತಾರೆ. ಅಲ್ಲದೆ ತಾವುಗಳು ಸಹ ಮೈ,ಕೈಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ತುಮಕೂರು ಜಿಲ್ಲೆಯ ತುಪ್ಪದಕೋಣದ ಗೊಲ್ಲರಹಟ್ಟಿಯಲ್ಲಿ ದೀಪಾವಳಿ ಮತ್ತು ಶಿವರಾತ್ರಿ ಸಂದರ್ಭದಲ್ಲಿ ಜಡೆಗೊಂಡೇಶ್ವರನ ಜಾತ್ರೆ ಉತ್ಸವ ನಡೆಯುತ್ತದೆ. ಈ ಜಾತ್ರೆಯಲ್ಲಿ ಈರಗಾರರು ಮೈಗೆ ಚಾಟಿ ಹೊಡೆದುಕೊಂಡು ಭಕ್ತಿ ಪ್ರದರ್ಶಿಸುವ ವಿಶೇಷ ಆಚರಣೆ ಇಲ್ಲಿನ ಕೇತಪ್ಪನ ಭಕ್ತರಲ್ಲಿ ಕಾಣಬಹುದಾಗಿದೆ.

**ಚಾಟಿ**

ಇದು ವಿಶಿಷ್ಟ ರೀತಿಯಿಂದ ಕೂಡಿರುವ ನಾಲ್ಕೈದು ಅಡಿ ಉದ್ದದ ಸೆಣಬು ಅಥವಾ ಪುಂಡಿ ನಾರಿನಿಂದ ಕೂಡಿರುವ ಮಿಣಿಯ ರೀತಿಯ ದಪ್ಪನಾದ ಹಗ್ಗ. ಮೇಲ್ ತುದಿ ಜಡೆಕುಚ್ಚಿನ ಆಕಾರದ ದಪ್ಪ ಗಾತ್ರದಾಗಿದ್ದು ಕೆಳ ತುದಿ ಬಾರಿಕೋಲಿನ ಸೆಳೆಯ ರೀತಿಯಲ್ಲಿ ಹೆಣೆಸಿರುತ್ತಾರೆ. ಇದು ತಮ್ಮ ದೇವರ ಹೆಸರಿನಲ್ಲಿ ತಯಾರಿಸಿಕೊಂಡು ಅದಕ್ಕೆ ಅರಿಷಿಣ, ಕುಂಕುಮ ಹಚ್ಚಿ ವಿಶೇಷ ಸಂದರ್ಭಗಳಲ್ಲಿ ಪೂಜಿಸುತ್ತಾರೆ. ದೇವರ ಆಚರಣೆಯ ಸಂದರ್ಭದಲ್ಲಿ ಇದನ್ನು ಬಳಸುತ್ತಾರೆ. ಸುಮಾರು ಎರಡು ಮೂರು ಅಡಿ ಉದ್ದದ ಬಿದಿರು ಕೋಲಿನಿಂದ ತಯಾರಿಸಿ ಅದನ್ನು ಪೆಟ್ಟಿಗೆ ದೇವರ ಬಳಿ ಇಟ್ಟಿರುತ್ತಾರೆ. ಧಾರ್ಮಿಕವಾದ ಹಬ್ಬ ಹರಿದಿನ, ಜಾತ್ರೆ, ಉತ್ಸವಗಳಲ್ಲಿ ಭಕ್ತರಿಗೆ ದೇವರು(ಮೈಮೇಲೆ) ಆವೇಶ ಬಂದಾಗ ಗಾಳಿ(ದೆವ್ವ) ಬಿಡಿಸುವಾಗ, ರೋಗ–ರುಜಿನ ನಿವಾರಣೆ ಮಾಡಲು ಭವನಾಶಿ ನೀರು ಹಾಕುವಾಗ ಸ್ವತಹಃ ಚಾಟಿಯಿಂದ ಬಾರಿಸುವ ಅಥವಾ ಬಾರಿಸಿಕೊಳ್ಳುವ ಆಚರಣೆಗಳು ಕಂಡು ಬರುತ್ತವೆ.

ಗ್ರಾಮದಲ್ಲಿ ಜನ–ಜಾನುವಾರುಗಳಿಗೆ ರೋಗ ರುಜಿನ ಕಾಣಿಸಿಕೊಂಡ ಸಂದರ್ಭದಲ್ಲಿ ಪೂಜಾರಿಯೂ ಚಾಟಿಯಿಂದ ಬಾರಿಸಿಕೊಳ್ಳುತ್ತಾ ಗ್ರಾಮಕ್ಕೆ ಬಂದೊದಗಿದ ಆಪತ್ತುಗಳು ನಿವಾರಣೆಯಾಗಬೇಕಾದರೆ ದೇವರಿಗೆ ಗಂಗಾಪೂಜೆ, ಅನ್ನದಾಸೋಹ, ಕುರಿಬಲಿ ಕೊಡಬೇಕೆಂದು ಗ್ರಾಮಸ್ಥರಿಗೆ ಸೂಚನೆ ಕೊಡುವುದುಂಟು. ಮೈಲಾರಲಿಂಗನ ಗೊರವರು, ಮಾರಿಜಾತ್ರೆಯಲ್ಲಿ ಮ್ಯಾಸಬೇಡರ ಪೋತರಾಜರು, ಕಾಡುಗೊಲ್ಲರ ಈರಗಾರರು ತಮ್ಮ ದೈವಗಳ ಹಬ್ಬ, ಜಾತ್ರೆ ಹಾಗೂ ಆಚರಣೆಗಳಲ್ಲಿ ಆರ್ಭಟಿಸುತ್ತಾ ಬರೀ ಮೈಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಪೂಜಾರಿಯು ಮಳೆ, ಬೆಳೆ, ಪಶುಸಂಪತ್ತು, ರೋಗ ರುಜನ ಇತ್ಯಾದಿಗಳ ಕುರಿತು ಭವಿಷ್ಯವನ್ನು ನುಡಿಯುತ್ತಾನೆ. ಅದನ್ನು ಆಲಿಸಿ, ಆಚರಿಸಲು ಜನರು ಸೇರಿರುತ್ತಾರೆ. ಆ ಭಕ್ತ ಪೂಜಾರಿಯು ಸತ್ತ

ತರುವಾಯ ಆತನನ್ನು ದೇವರಾಗಿ ಪೂಜಿಸುತ್ತಾ ಆತನ ಹೆಸರಿನಲ್ಲಿ ಗುಡಿ(ಗುಬ್ಬ) ನಿರ್ಮಾಣಮಾಡಿ ಆರಾಧಿಸುವುದು ಕಂಡುಬರುತ್ತದೆ.

**ಮುಳ್ಳಿನ ಸೇವೆ**

ಜನಪದರ ಬದುಕಿನಲ್ಲಿ ವಿಶಿಷ್ಟವಾದ ಪದ್ಧತಿ ಎಂದರೆ ಮುಳ್ಳು ಗದ್ದಿಗೆ ಸೇವೆ ಹಾಗೂ ಕಳ್ಳೆಮುಳ್ಳಿನ ರಾಶಿಯನ್ನು ಬರಿಗಾಲಲ್ಲಿ ಹತ್ತಿ ಕಳಸ ಕೀಳುವುದು. ಮುಳ್ಳು ಗದ್ದಿಗೆ ಸೇವೆಯನ್ನು ಮುಳ್ಳಾವಿಗೆ ಸೇವೆ ಎಂತಲೂ ಕರೆಯುಲಾಗುತ್ತಿದೆ. ದೇವರಲ್ಲಿ ಭಕ್ತಿಯುಳ್ಳವರು ಬರೀ ಮೈಯಲ್ಲಿ ಮುಳ್ಳಿನ ಮೇಲೆ ಮಲಗುವುದು, ನಡೆಯುವುದು ಇಲ್ಲಿನ ವಿಶೇಷತೆ. ಒಂದು ನಿಗದಿತ ಸ್ಥಳದಲ್ಲಿ ಹದಿನೆಂಟು ಇಪ್ಪತ್ತು ಅಡಿ ಎತ್ತರದ ಗುಡಿ ನಿರ್ಮಾಣ ಮಾಡಿ ಅದರೊಳಗೆ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪಿಸಿ ಗುಡಿ ಸುತ್ತಲೂ ಕಾರೆ, ಕವಳಿ, ಬಾರೆ, ಬಂದ್ರೆ ಹಾಗೂ ತುಗ್ಗಲಿ ಮೋರುಗಳನ್ನು ಕಟ್ಟಿ ಗುಡಿಯ ತುದಿಗೆ ಐದು ಕಳಸಗಳನ್ನು ಇಟ್ಟಿರುತ್ತಾರೆ. ಈ ಕಳಸ ಕೀಳುವ ಪದ್ಧತಿ ಕಾಡುಗೊಲ್ಲ ಸಮುದಾಯದ ಕ್ಯಾತಪ್ಪನ ಆಚರಣೆಯಲ್ಲಿ ಮಾತ್ರ ಕಂಡು ಬರುತ್ತದೆ. ಹಿಂದೆ ಜುಂಜಪ್ಪನ ಗುಡಿ ಇದ್ದಂತಹ ಹಟ್ಟಿಗಳಲ್ಲಿ ದೇವರ ಪೌಳಿ ಸುತ್ತಲೂ ಕಳ್ಳೆ ಮುಳ್ಳಿನ ಬೇಲಿ ಹಾಕುವ ಸಂಪ್ರದಾಯ ಹೇರಳವಾಗಿತ್ತು. ದೇವರನ್ನು ಗಂಗಾದೇವಿ ಪೂಜೆಗೆ ಹಾಗೂ ಎತ್ತಪ್ಪನ ಗುಡ್ಡಕ್ಕೆ ಕೊಂಡಯ್ಯುವಾಗ ಜುಂಜಪ್ಪನ ಪೂಜಾರಿಗಳು ಗುಡಿಯಿಂದ ಹೊರ ಬರುವಾಗ ಕಳ್ಳೆ ಮುಳ್ಳನ್ನು ತುಳಿದುಕೊಂಡಬರುವ, ಅಲ್ಲದೆ ಮುಳ್ಳಿನ ಮೇಲೆ ಮಲಗುವ ಮತ್ತು ನಡೆಯುವ ಪದ್ಧತಿ ಇತ್ತು. ಆದರೆ ಇಂದು ಕಳ್ಳೆ ಗುಡಿ ಬದಲಿಗೆ ಸೀಮೆಂಟ್ ಗುಡಿ ನಿರ್ಮಾಣ ಆಗಿದ್ದರಿಂದ ಕಳ್ಳೆ ಮೇಲೆ ಮಲಗುವ-ನಡೆಯುವ ಪ್ರಮೇಯವೇ ಇಲ್ಲದಾಗಿದೆ. ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಕಂಚಿಪುರ ದೇವರಿಗೆ ಹರಕೆ ಹೊತ್ತುಕೊಂಡವರು ಆ ದೇವಸ್ಥಾನದ ಸುತ್ತ ನೆಲದ ಮೇಲೆ ಮೂರು ಸುತ್ತು ಉರುಳು ಸೇವೆ ಮಾಡುತ್ತಾರೆ. ಇದೇ ಸಂದರ್ಭದಲ್ಲಿ 'ಮುಳ್ಳಾವುಗೆ ಸೇವೆಯ ಕಾರ್ಯವೂ ನಡೆಯುತ್ತದೆ.' ಕಂಚಿದೇವರನ್ನು ಹೊತ್ತ ಪೂಜಾರಿ ಮುಳ್ಳಾವುಗೆಯನ್ನು ತುಳಿದರೂ ಕಾಲಲ್ಲಿ ರಕ್ತ ಬಾರದಿರಲು ಕಾರಣ ಆತನು ದೇವರ ಮೇಲಿಟ್ಟಿರುವ ನಂಬಿಕೆಯೆಂದು ಭಕ್ತ ಜನರಿಗೆ ಗೌರವ ಹೆಚ್ಚುವುದು. ಈ ಆಚರಣೆಯು ಹರಿಹರ ತಾಲ್ಲೂಕಿನ ಉಕ್ಕಡಗಾತ್ರಿಯಲ್ಲಿ ಈಗಲೂ ಕಂಡುಬರುತ್ತದೆ.

ತಿಪಟೂರು ತಾಲ್ಲೂಕಿನ ದಸರಿಘಟ್ಟದ "ಚೌಡೇಶ್ವರಿ ಸನ್ನಿಧಿಯಲ್ಲಿ ವಿಜಯ ದಶಮಿಯ ದಿನದಂದು ಸ್ವಾಮಿಜಿಗಳ ಸಮ್ಮುಖದಲ್ಲಿ ಮುಳ್ಳಿನ ಗದ್ದಿಗೆ ಉತ್ಸವ ನಡೆಯುತ್ತದೆ. ನಾಲ್ಕು ಟ್ರ್ಯಾಕ್ಟರ್ ಕಾರೆ ಮುಳ್ಳುಗಳನ್ನು ಕಾಡಿನಿಂದ ಕಡಿಸಿ,ತರಿಸಿ ದೇವಾಲಯದ ಆವರಣದೊಳಗೆ ರಾಶಿ ಹಾಕುತ್ತಾರೆ. ಮುಳ್ಳಿನ ರಾಶಿಗೆ ಪೂಜೆ ಮಾಡಿ,

ಅಮ್ಮನಿಗೂ ಪೂಜೆ ಸಲ್ಲಿಸುತ್ತಾರೆ."[೧೦] ಉತ್ಸವಮೂರ್ತಿಯನ್ನು ಹೊತ್ತವರ ಮೇಲೆ ದೇವಿ ಮೈದುಂಬಿ ಬರುತ್ತದೆ. ಅವರು ಆವೇಶಭರಿತರಾಗಿ ಏಳೆಂಟು ಜನರು ಉತ್ಸವ ಮೂರ್ತಿಯನ್ನು ಹೊತ್ತುಕೊಂಡೇ ಮುಳ್ಳಿನ ರಾಶಿಯನ್ನು ಏರುತ್ತಾರೆ. ಕೆಳಗಿಳಿದು ಬಂದ ಮೇಲೆ ಸ್ವಾಮಿಜಿಗಳು ಅವರ ಕೊರಳಿಗೆ ಹೂವಿನ ಮಾಲೆ ಹಾಕುತ್ತಾರೆ. ಮತ್ತೇ ಮುಳ್ಳಿನ ರಾಶಿಯನ್ನು ಏರುತ್ತಾರೆ. ಹೀಗೆ ಆರೇಳು ಸಲ ಏರುತ್ತಾರೆ. ಅಷ್ಟು ಬಾರಿಯೂ ಸ್ವಾಮಿಜಿಗಳು ಹಾರ ಹಾಕುತ್ತಾರೆ. ದೇವಿಯು ಸ್ವಾಮಿಗಳ ಪಕ್ಕದಲ್ಲಿ ಬಂದು ಕುಳಿತಾಗ ಭಕ್ತಾಧಿಗಳು ಮುಳ್ಳಿನ ರಾಸಿಯನ್ನು ಏರಿ ನಿಲ್ಲುತ್ತಾರೆ.

**ವಿಧಿ–ನಿಷೇಧಗಳು**

"ಪ್ರತಿಯೊಂದು ದೇವಾನು, ದೇವತೆಗೂ ಅದರದೇ ಆದ ವಿಧಿ–ನಿಷೇಧಗಳು, ಆಚರಣೆಗಳು ಇದ್ದೇ ಇರುತ್ತವೆಯೆಂದರೆ ಅತಿಯಶಯೋಕ್ತಿಯಾಗುವುದಿಲ್ಲ. ಆ ದೇವ, ದೇವತೆಗಳು ಪ್ರಸಿದ್ಧಿ ಪಡೆದಂತೆಲ್ಲ ಅವುಗಳಿಗೆ ಮತ್ತಷ್ಟು ವಿಧಿ–ನಿಷೇಧಗಳು ಸೇರಿಕೊಳ್ಳುತ್ತಾ ಹೋಗುತ್ತವೆ. ಕೆಲವು ಮೂಢನಂಬಿಕೆಗಳು, ಕೆಲವು ವ್ಯವಹಾರಿ ಮತ್ತೇ ಕೆಲವು ವಾಸ್ತವವಾಗಿರುತ್ತವೆ. ಇಂತಹವು ಜಾತಿ, ಮತಗಳ ಕಡೆಯಿಂದಲೋ ಬಂದು ಸೇರಿಕೊಳ್ಳುತ್ತವೆ."[೧೧] ಹೀಗೆ ಕಾಡುಗೊಲ್ಲ ಬುಡಕಟ್ಟು ಸಮುದಾಯದ ಲಿಂಗದ ದೈವಗಳಲ್ಲಿ ಪ್ರಮುಖವಾದ ದೈವ ಕೇತಪ್ಪ. ಮಧ್ಯಕರ್ನಾಟಕದ ಈ ದೇವರ ವ್ಯಾಪ್ತಿ ವಿಸ್ತೃತತೆ ಪಡೆದುಕೊಂಡಿದೆ. ಈ ದೇವರ ವಿಧಿ ನಿಷೇಧಗಳಲ್ಲಿ ನವಣೆ–ಹುರುಳಿ ವ್ರತದ ಆಚರಣೆ ಪ್ರಮುಖವಾದುದು.

ದೇವರ ಜಾತ್ರೆ, ಉತ್ಸವಗಳಲ್ಲಿ ಹಬ್ಬ ಹರಿದಿನಗಳಲ್ಲಿ ಪೂಜೆ, ಪುರಸ್ಕಾರ–ಆಚರಣೆಗಳ ಸಂದರ್ಭದಲ್ಲಿ ಹರಿಜನರು ತಂದ ಚರ್ಮದ ಚಪ್ಪಲಿಯನ್ನು ದೇವರ ಪೂಜಾರಿ ಧರಿಸುತ್ತಾನೆ. ಉರುಮೆ ಬಡಿಯುವ ಚಲವಾದಿಗಳಿಗೆ ಹಟ್ಟಿ ಪ್ರವೇಶ ಮಾಡಿಕೊಳ್ಳುತ್ತಾರೆ. ಕೇತಪ್ಪ ಲಿಂಗದ ದೇವರು ಶಿವನ ಸ್ವರೂಪಿ, ಉರಿಗಣ್ಣು ಬಿಟ್ಟು ನಮ್ಮನ್ನು ಸುಟ್ಟು ಬಿಡುತ್ತಾನೆ ಎಂಬ ಭಯ ಜನರಲ್ಲಿದೆ. ಆದ್ದರಿಂದ ಈ ದೇವರಿಗೆ ಮಾಂಸಾಹಾರ ನಿಷಿದ್ಧ. ಸೂತಕದ ದಿನಗಳಲ್ಲಿ ದೇವರಿಗೆ ಪೂಜೆ ನಿಷಿದ್ಧ. ಕೆಟ್ಟ, ಹೆತ್ತ, ಹೊತ್ತ ಸೂತಕಗಳ ದಿನಗಳಲ್ಲಿ ಮನೆಯವರು ಪೂಜಾಕಾರ್ಯಗಳಲ್ಲಿ ಪಾಲ್ಗೊಳ್ಳುವುದಿಲ್ಲ. ಹುಟ್ಟು, ಸಾವು ಹಾಗೂ ಮೈ ನರೆದರೆ ಇಂತಿಷ್ಟು ದಿನ ಮಹಿಳೆಯರನ್ನು ಊರ ಹೊರಗೆ ಹಾಕಿ ಅವರಿಗೆ ನಿಷಿದ್ಧ ಹೇರಲಾಗುತ್ತದೆ. ಸೂತಕ ಅಳಿದ ಮೇಲೆ ದೇವರಿಗೆ ವಿಶೇಷ ಪೂಜೆ ಸಲ್ಲಿಸಿ ಹಟ್ಟಿ ಪ್ರವೇಶ ಮಾಡಿಸಿಕೊಳ್ಳುತ್ತಾರೆ. ಹೀಗೆ ದೇವರ ಬಗೆಗಿನ ವಿಧಿ–ನಿಷೇಧಗಳು ಮತ್ತು ಆಚರಣೆಗಳು ಸೌಮ್ಯ ರೂಪದವಾಗಿವೆ.

**ಮಣೇವು**

ಕೇತಪ್ಪ ಜಾತ್ರೆಯಂದು ವಸತಿ ದಿಬ್ಬದ ಅಕ್ಕಮ್ಮಗಳ ದೇವಸ್ಥಾನದ ಮುಂಭಾಗದಲ್ಲಿ ಮಣೇವಿನ ಆಟ ನಡೆಯುತ್ತದೆ. ಈ ಆಟವು ಸಾಂಪ್ರದಾಯಿಕವಾಗಿ ಉಳಿದು ಬಂದಿದೆ. ಹಬ್ಬ-ದೇವರ ಉತ್ಸವಗಳಲ್ಲಿ ಕಾಡುಗೊಲ್ಲರು ಕರಿಕಂಬಳಿ ಅಥವಾ ನಡೆಮುಡಿ ಸೀರೆ ಹಾಸಿ ಅದರ ಮೇಲೆ ಸುಲಿದಬಾಳೆಹಣ್ಣು, ಕಾಯಿಚೂರು, ಬೆಲ್ಲ ಹಾಗೂ ಮಂಡಕ್ಕಿಯನ್ನು ಕಲಸಿ ಇಷ್ಟಿಷ್ಟು ಕುಪ್ಪೆ ಇಡುತ್ತಾರೆ. ಮಧ್ಯೆ ದಾಸಯ್ಯ ಗರುಡಕಂಬವನ್ನು ಹಿಡಿದುಕೊಂಡು ಕುಳಿತಿರುತ್ತಾನೆ. ಉರುಮೆ ವಾದ್ಯಗಳು ಮೊಳಗುತ್ತಿರುತ್ತವೆ. ಭಕ್ತರು ಕುಣಿಯುತ್ತಿರುತ್ತಾರೆ. ಕುಣಿಯುವಾಗ ಕೇಕೆ, ಶಿಳ್ಳು ಹೊಡೆಯುವ ಮೂಲಕ ಜೋರಾಗಿ ಧ್ವನಿ ಮಾಡುತ್ತಿರುತ್ತಾರೆ. ಹದಿನೈದು ಇಪ್ಪತ್ತು ನಿಮಿಷ ಆದ ನಂತರ ಎಲ್ಲರೂ ಒಟ್ಟಿಗೆ ಬಗ್ಗಿ ಬಾಯಿಹಾಕಿ ಬೆಲ್ಲ ಕಾಯಿಚೂರುಗಳನ್ನು ತಿನ್ನುತ್ತಾರೆ. ಇದು ಒಂದು ರೀತಿಯ ಗುಂಪಿನ ಆಟ ಎನ್ನಬಹುದು. ಮಣೇವುಗಳಲ್ಲಿ ಸಾದ ಮಣೇವು, ಅಡ್ಡ ಮಣೇವು, ಕತ್ತರಿ ಮಣೇವು, ಗೌಡರ ಮಣೇವು ಮುಂತಾದ ಪ್ರಕಾರಗಳನ್ನು ನೋಡಬಹುದು. ಸಾಮಾನ್ಯವಾಗಿ ಕಾಡುಗೊಲ್ಲರ ಎಲ್ಲಾ ಹಟ್ಟಿಗಳಲ್ಲಿ ನಡೆಯುವ ಹಬ್ಬ-ಹರಿದಿನ ಹಾಗೂ ಜಾತ್ರೆ, ಉತ್ಸವಗಳಲ್ಲಿ ಈ ಮಣೇವಿನ ಆಟ ನಡದೇ ನಡೆಯುತ್ತದೆ. ಕಾಡುಗೊಲ್ಲ ಸಮುದಾಯದಲ್ಲಿ ಈ ಆಟವಿಲ್ಲದೆ ಯಾವುದೇ ಹಬ್ಬ ಹರಿದಿನಗಳು ಜರುಗುವುದಿಲ್ಲ.



**ಭಕ್ತರು ಮಣೇವು ಕುಣಿತ ಚಿತ್ರ**

ಜಾತ್ರೆಗಳು ಪ್ರಾರಂಭದಲ್ಲಿ ಪ್ರಸಿದ್ಧ ಪುಣ್ಯ ಕ್ಷೇತ್ರಗಳಲ್ಲಿ ನಡೆಯುತ್ತಿದ್ದು ನಂತರ ಸ್ಥಳೀಯವಾದುವೆಂಬ ಅಭಿಪ್ರಾಯವಿದೆ. ಏಕೆಂದರೆ "ಪಾಪ ಪರಿಹಾರಕ್ಕಾಗಿ ದೇಶದ

ಮೂಲೆಗಳಿಂದ ಜನ ಅಂಥ ಕ್ಷೇತ್ರದಲ್ಲಿ ಅಪಾರ ಸಂಖ್ಯೆಯಲ್ಲಿ ಸೇರುತ್ತಿದ್ದರು."೧೨ ಅನಂತರ ಕೆಲವು ಹಳ್ಳಿಗಳಲ್ಲಿ ನಿಯತ ಅಥವಾ ಅನಿಯತ ಕಾಲಗಳಲ್ಲಿ ಅದ್ಧೂರಿಯಿಂದ ಜರುಗುತ್ತಿದ್ದ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರ ಜೊತೆಗೆ ಶ್ರದ್ಧಾವಂತ ಭಕ್ತರೂ ಬರಲಾರಂಭಿಸಿದರು. ದೇವರು ಪ್ರಭಾವಶಾಲಿಯಾಗಿದ್ದರಂತೂ ಜನರ ಗದ್ದಲ ಅಧಿಕವಾಗುತ್ತಿತ್ತು. ಒಂದು ದಿನದ ಹಬ್ಬ ಮೂರ್ನಾಕು ಹೆಚ್ಚು ದಿನಗಳಿಗೆ ಹಬ್ಬುತ್ತಾ ಕುಣಿತ, ಮೆರೆತಗಳು ಕೂಡಿಕೊಂಡು, ಮದ್ದು ಪಟಾಕಿಗಳ ವೈಭವ ಆಕರ್ಷಕವಾಗಿ, ಅಂಗಡಿ ಮುಂಗಟ್ಟುಗಳು ಜಮಾಯಿಸಿ, ಜನಮರುಳಾಗಿ ಪರಿಷೆ ಸೇರಿದಾಗ ಅದು ಜಾತ್ರೆಯೆಂಬ ನಾಮಕರಣಕ್ಕೆ ಯೋಗ್ಯವಾಯಿತು. ಕೊನೆಗೆ ರೈತರ ಜೀವನಾಡಿಯಂತಿರುವ ದನಗಳ ನೆರವಿನಿಂದ ಸಂಘಟನೆಗೊಂಡಾಗ ಆ ಪದದ ಅರ್ಥ ವಿಶಾಲವಾಯಿತು. ಧಾರ್ಮಿಕ ಸ್ವರೂಪದ ಹಬ್ಬವು ಕಾಲ ಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ಕೊನೆಗೆ ವಾಣಿಜ್ಯ ರೂಪವನ್ನು ನಿರ್ಮಿಸಿಕೊಂಡಾಗ ಅದು ಜಾತ್ರೆಯಾಯಿತು ಎಂದು ತಿಳಿಯಬಹುದು.

ಜಾತ್ರೆಗಳು ದ್ರಾವಿಡರ ಸಾಂಸ್ಕೃತಿಕ ವೈಶಿಷ್ಟ್ಯಗಳಲ್ಲೊಂದಾಗಿದೆ. ಜನಪದರಲ್ಲಿ ಹಬ್ಬಗಳು, ಕುಲದೇವತೆಗಳ ಆರಾಧನೆಗಳು ಕೌಟುಂಬಿಕ ಮಟ್ಟಕ್ಕೆ ಸೀಮಿತವಾಗಿರುತ್ತವೆ. ಹಬ್ಬಗಳು ಜನಪದರಿಗೆ ಕಡ್ಡಾಯ. ಆದರೆ ಜಾತ್ರೆಗಳು ಕಡ್ಡಾಯವಲ್ಲ. ಜಾತ್ರೆಗಳು ಅನಿಯಮಿತವಾಗಿ ಮುಂದೂಡುವ ಅವಕಾಶವಿರುತ್ತವೆ. ಹಬ್ಬಗಳನ್ನು ಪ್ರತಿ ವರ್ಷ ಆಚರಿಸಲೇಬೇಕಾಗಿದೆ. ಆ ಮೂಲಕ ಇಷ್ಟ ದೇವತೆಗೆ ಹರಕೆಗಳನ್ನು ಕಟ್ಟಿ ತೀರಿಸುವ, ಮಾನಸಿಕವಾಗಿ ತೃಪ್ತಿಗೊಳಿಸುವ ಸುಖ-ಸಮೃದ್ಧಿ ಶಾಂತಿಯನ್ನು ಪಡೆಯುವ ಮತ್ತು ಬಂಧುತ್ವವನ್ನು ಗಟ್ಟಿಗೊಳಿಸುವ ಸಾಮೀಪ್ಯವನ್ನು ಒದಗಿಸುತ್ತದೆ. ಸ್ತ್ರೀ-ಪುರುಷರು ಸಂತೃಪ್ತಿಯಿಂದ ಕೂಡಿ ನಲಿದು ಈ ಆಚರಣೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ಹೀಗೆ ಆಚರಣೆಗಳಲ್ಲಿ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ, ಹಾಗೂ ಮನಃಶಾಸ್ತ್ರೀಯ ಮತ್ತು ವೈಜ್ಞಾನಿಕ ಅಂಶಗಳನ್ನು ಗುರುತಿಸಬಹುದು.

**ಪಶುಪಾಲಕ ವಲಸೆಗಾರರ ಆಚರಣೆಗಳು**

ಕ್ಯಾತಪ್ಪನ ಹಬ್ಬ-ಜಾತ್ರೆಗಳಲ್ಲಿ ನಡೆಸುವಂತಹ ಸಂಪ್ರದಾಯ ಮತ್ತು ಆಚರಣೆಗಳು ಮೂಲತಃ ಪಶುಪಾಲಕ "ವಲಸೆಗಾರರ ಆಚರಣೆಗಳಾಗಿವೆ. ಪಶುಪಾಲಕರು ಮೂಲತಃ ಪಿತೃಪ್ರಧಾನ ದೇವತೆಗಳ ಆರಾಧಕರಾಗಿದ್ದರು. ಇವರು ಕಾಲದ ಬದಲಾವಣೆಯಲ್ಲಿ ಸಿಕ್ಕಿ ಸಂಪ್ರದಾಯಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ದ್ರಾವಿಡ ಸಂಸ್ಕೃತಿ ಪರಂಪರೆಯಲ್ಲಿ ಹೊಲೆಮಾದಿಗರು ಕೃಷಿ ಮೂಲ ಸಂಸ್ಕೃತಿಯಿಂದ ಹುಟ್ಟಿದಂತೆ ಹಬ್ಬ ಹರಿದಿನಗಳ ಆಚರಣೆಗಳು ವಲಸೆಗಾರರಿಗೆ ವರ್ಗಾವಣೆಗೊಂಡಿವೆ. ೧೩"

ಈ ವಲಸೆಗಾರರ ಅನೇಕ ಸಂಪ್ರದಾಯ ಮತ್ತು ಆಚರಣೆ, ನಂಬಿಕೆಗಳ ನಿರೂಪಣೆಗಳೇ ಜಾತ್ರೆಗಳಾಗಿವೆ. ವಲಸೆಗಾರರಾದ ಕಾಡುಗೊಲ್ಲರು, ಮ್ಯಾಸಬೇಡರು ಪುರುಷ ದೇವರುಗಳ ಆರಾಧನೆಯ ಜೊತೆಗೆ ಮಾತೃದೇವತೆಗಳನ್ನು ಆರಾಧಿಸುತ್ತಾರೆ. ಈ ಹಬ್ಬಗಳು ಸಮುದಾಯದ ಆಚರಣೆಯಾಗಿದ್ದು ಇದು ಕುಲದೇವರುಗಳ ಆರಾಧನೆಯಾಗಿದೆ. ಕಾಡುಗೊಲ್ಲರು ಸ್ತ್ರೀ ದೇವತೆಗಳಾದ ಗೌರಸಂದ್ರದ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮ, ಕರಿಯೋಬೇನಹಳ್ಳಿ ಮಾರಮ್ಮ, ಯರಬಳ್ಳಿ ಮಾರಮ್ಮ, ವಡ್ನಹಳ್ಳಿ ಮಾರಕ್ಕ ಮುಂತಾದ ದೈವಗಳ ಆರಾಧಕರಾಗಿದ್ದಾರೆ. ಇವರನ್ನು ದೈವಗಳ ಸಹಾಯಕಿಯರಾಗಿ, ಮಾತೃ ದೇವತೆಯ ಸ್ಥಾನದಲ್ಲಿಟ್ಟಿದ್ದು; ಶಕ್ತಿ ದೇವತೆ, ಶಾಂತಿ ದೇವತೆ ಎಂದು ನಂಬಿಕೊಂಡಿದ್ದಾರೆ. ಪುರುಷ ಮತ್ತು ಸ್ತ್ರೀ ದೇವತೆಗಳನ್ನು ಸಹೋದರ–ಸಹೋದರಿಯರೆಂತಲೂ ಕರೆಯುತ್ತಾರೆ. ಈ ತರಹದ ಆಚರಣೆಗಳನ್ನು ಕೃಷಿಕರ ಮತ್ತು ಪಶುಪಾಲಕ ವಲಸೆಗಾರರ ಸಮ್ಮಿಲನವೆಂದೇ ಹೇಳಬಹುದು. ಪಶುಪಾಲಕರು ಮೂಲತಃ ವಲಸೆಗಾರರು. 'ಪಶುಪಾಲನೆ' ಅಲೆಮಾರಿತನ, ಪುರುಷ ಪ್ರಾಬಲ್ಯವನ್ನು ಮೆರೆಯುವಂತಹ ಪರಂಪರೆಯ ಅಡಿಯಲ್ಲಿ ಸಾಗಿ ಬಂದತಂಹ ಬುಡಕಟ್ಟುಗಳೇ ಕಾಡುಗೊಲ್ಲ ಮತ್ತು ಮ್ಯಾಸಬೇಡರು.

ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಪ್ರಮುಖರು. ಅವರ ಜನಪದ ವೀರಕಾವ್ಯಗಳು ಈಗ ಅವನ್ನು ಸಾರುತ್ತವೆ. ಕಾಡುಗೊಲ್ಲರ ಜುಂಜಪ್ಪ, ಎತ್ತಪ್ಪ ಇವರು ಆ ಸಮುದಾಯದ ಪ್ರಥಮ ಪಶುಪಾಲಕರು. ಈ ಜಿಲ್ಲೆಯ ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರಗಳಲ್ಲೊಂದಾದ ಚನ್ನಮ್ಮನಾಗತಿಹಳ್ಳಿ ಬಳಿ ಇರುವ ವಸತಿದಿಬ್ಬದಲ್ಲಿ ದನಕರುಗಳನ್ನು ಬೀಡು ಬಿಟ್ಟುಕೊಂಡಿದ್ದು, ಪೂರ್ವದ ಆಂಧ್ರಪ್ರದೇಶದ ಕಲ್ಯಾಣಪುರಿ ಎಂಬ ಪ್ರದೇಶದ ರೆಡ್ಡಿಗರ ಮನೆಯೊಂದರಲ್ಲಿ ವಾಸವಾಗಿದ್ದರೆಂದೂ ಒಮ್ಮೆ ವಲಸೆ ಹೊರಟು ವಸತಿದಿಬ್ಬದ ಹೊನ್ನಬಂಡೆಗೆ ಬಂದುದಾಗಿಯೂ, ಅಲ್ಲಿ ನೆಲಸಲು ಚಿತ್ರದುರ್ಗದ ಪಾಳೇಗಾರರ ಅಪ್ಪಣೆಪಡೆದು ವಸತಿ ದಿಬ್ಬದ ಕುರುಚಲು ಗಿಡಗಳ ಕಾಡಿನ ಮಧ್ಯೆ ದನಕರುಗಳ ಗೂಡು ನಿರ್ಮಾಣದ ಜೊತೆಗೆ ಹಟ್ಟಿ ನಿರ್ಮಾಣ ಮಾಡಿಕೊಂಡು ನೆಲೆಸಿದ್ದರು ಎಂದು ಐತಿಹ್ಯಗಳಿಂದ ತಿಳಿದು ಬರುತ್ತದೆ.

ಬುಡಕಟ್ಟಿಗೆ ವಿಶೇಷವಾಗಿ ಶ್ರಮಿಸಿದ, ಸಾಂಸ್ಕೃತಿಕ ವೀರರು, ಪೂಜಾರಿಗಳು, ದಳವಾಯಿಗಳು, ಗೌಡರುಗಳು ಇವರು ಸತ್ತ ನಂತರ ದೈವಿಕ ಪುರುಷರಾಗಿ ರೂಪುಗೊಳ್ಳುತ್ತಾರೆ. ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಅಧ್ಯಯನಗಳು ಈ ಬಗ್ಗೆ ಪ್ರತಿಪಾದಿಸುತ್ತವೆ. ಈರಗಾರರು, ವೀರರು ಮತ್ತು ಪೂಜಾರಿಗಳು ಬಳಸುತ್ತಿದ್ದ ವಸ್ತುಗಳನ್ನು ಅವರ ಸಾವಿನ ನಂತರ ಗದ್ದುಗೆಯ ಮೇಲಿಟ್ಟು ಪೂಜಿಸುತ್ತಾರೆ. ಮೂಲತಃ ಕ್ಯಾತಪ್ಪ ಪಶುಪಾಲಕ ಪುರುಷ, ವೀರ, ವಲಸೆಗಾರರ ದೈವ. ಪಶುಪಾಲಕ ವಲಸೆಗಾರರು

ಪುರುಷ ದೈವಾರಾಧಕರಾಗಿದ್ದರು. ಸ್ವಯಂಭುಲಿಂಗದ ಕಲ್ಪನೆ ಇದ್ದುದು ಅವರಲ್ಲಿಯೇ. ಕ್ಯಾತಪ್ಪನ ಇಂದಿನ ಸಂಪ್ರದಾಯ-ಆಚರಣೆಗಳ ಲಕ್ಷಣಗಳು ಕೂಡ ಆತ ವಲಸೆಗಾರ ದೈವ ಎಂಬುವುದನ್ನು ಸಮರ್ಥಿಸುವಂತಿವೆ. ಈ ರೀತಿ ನೆಲೆನಿಂತು, ನಿಯಮಿತ ಕಾಲಾವಧಿಯಲ್ಲಿ ಒಂದೆಡೆ ನೋಡಿದಾಗ ಹಬ್ಬ ಮತ್ತು ಜಾತ್ರೆಯ ಆಚರಣೆ ನಡೆಸಲಿಕ್ಕೆ ಭೌಗೋಳಿಕವಾಗಿ ಪುರ್ಲೆಹಳ್ಳಿಯ ವಸತಿದಿಬ್ಬ ಪ್ರದೇಶ ತುಂಬಾ ಆಯಕಟ್ಟಿನ ಸ್ಥಳವಾಗಿದೆ. ಹಬ್ಬಗಳು ಮನುಷ್ಯರ, ಪ್ರಾಣಿಗಳ ಸಮೃದ್ಧಿಯ ಫಲವಂತಿಕೆಯನ್ನು ಆಶಿಸಿ, ಅಂದರೆ ಭೌತಿಕ ಜೀವನದ ನೆಮ್ಮದಿಯ ನೆಲೆಯಾಗಿ ಹುಟ್ಟಿಕೊಂಡಿರುವಂತಹವು. ಅವು ಕೃಷಿ ಮೂಲದ ಪ್ರಕ್ರಿಯೆಯಲ್ಲಿ ಹುಟ್ಟಿಕೊಂಡಿವೆ. ಮಾತೃ ದೇವಾತಾರಾಧನೆ, ನಾಗಪೂಜೆ, ಹೋರಿ, ಹುಲಿ, ಹಂದಿ, ಕೋಣಗಳಂತಹ ಪ್ರಾಣಿ ಪೂಜೆ, ಬೇವು, ಬೇಲಾ, ಜಂಬಿ ಈ ವೃಕ್ಷಗಳ ಪೂಜೆಗಳು ದ್ರಾವಿಡ ಸಂಸ್ಕೃತಿಗೆ ಸೇರಿರುವಂಥವು. ಅಂದರೆ ನಿಜವಾದ ಕೃಷಿ ತತ್ವವನ್ನು ಕಂಡುಹಿಡಿದ ನಂತರವೂ ಹಳೆಯ ಮಾಂತ್ರಿಕ, ಹೊಸ ಆಕಾರಗಳನ್ನು ತಾಳಿ ಹಬ್ಬಗಳ ರೂಪದಲ್ಲಿ ಮುಂದುವರಿದವು. ಹಬ್ಬ ಹರಿದಿನಗಳು ಕಾಯಕದ ನೆಲೆಯಲ್ಲಿ ಸಾರ್ವತ್ರಿಕವಾಗುವ ಲಕ್ಷಣವನ್ನು ಪಡೆದಿವೆ. ಕೃಷಿಕರಾಗಿ ನೆಲೆಯೂರಿನಿಂತ ಜನಕ್ಕೆ ಕುಟುಂಬದ ಜೀವನವೇ ಸಾರ್ವತ್ರಿಕತೆ ಪಡೆದುಕೊಂಡಿತು. ಮೊದಲ ಕೃಷಿಕರು ದಲಿತರಾದ್ದರಿಂದ ಹಬ್ಬಗಳು ಅವರ ಕುಲ ಕುಟುಂಬದಲ್ಲಿ ಜನಿಸಿದವು. ಅಂದರೆ ಹಬ್ಬಗಳು ಮುಖ್ಯವಾಗಿ ಪ್ರತಿ ಜನಪದರ ಕುಲದೇವತೆಯ ಆರಾಧನೆಯಾಗಿದ್ದು ಅದು ಕೌಟುಂಬಿಕ ವಲಯಕ್ಕೆ ಸೀಮಿತವಾಗಿರುವಂಥದ್ದು. ಜಾತ್ರೆಗಳ ತಾತ್ಕಾಲಿಕತೆ, ಸಾಮೂಹಿಕವಾಗಿ ಸೇರುವಿಕೆಗಳು ವಲಸೆಗಾರರ ಸ್ವಭಾವಕ್ಕೆ ಅನುಗುಣವಾಗಿಯೇ ಇವೆ.

"ಜಾತ್ರೆ ಪ್ರತ್ಯೇಕ ಒಂದು ಕೋಮಿಗೆ ಅಥವಾ ಪ್ರದೇಶಕ್ಕೆ ಸೀಮಿತವಾಗಿದ್ದರೆ, ಹಬ್ಬ ನಾಡಿನಾದ್ಯಂತ ಒಂದೇ ಸಲಕ್ಕೆ ಆಚರಿಸಲ್ಪಡುವುದು."[೧೪] ಬಹುತೇಕವಾಗಿ ಎಲ್ಲ ಹಬ್ಬಗಳ ಆಶಯಗಳು ಒಂದಿಲ್ಲೊಂದು ರೀತಿಯಿಂದ ಕೃಷಿಗೆ ಸಂಬಂಧಿಸಿವೆ. ಮಾನವ ಜೀವನ ಮತ್ತು ಕೃಷಿಗೆ ಅಗತ್ಯವಾದ ಪ್ರಾಣಿಜೀವಿಗಳು ಈ ರಂಗಕ್ಕೆ ಪ್ರವೇಶಿಸುತ್ತವೆ. ಹಳ್ಳಿಯಲ್ಲಿ ವರ್ಷದ ಅವಧಿಯಲ್ಲಿ ಹಬ್ಬಗಳು ಹೆಚ್ಚು ಕಂಡುಬರುತ್ತವೆಯೇ ಹೊರತು ಜಾತ್ರೆಗಳಲ್ಲ. ಇದರರ್ಥ ನೆಲೆನಿಂತ ಕೃಷಿ ವಿಧಾನಕ್ಕೆ ಬೇರೆ ಬೇರೆ ಸಂದರ್ಭಗಳಲ್ಲಿ ಅಂದರೆ ಉಳುವುದು, ಬೀಜ ಬಿತ್ತುವುದು, ಬೆಳೆಯುವುದು, ಕೊಯ್ಯುವುದು, ಸುಗ್ಗಿಯಂತಹ ಬೇರೆ ಬೇರೆ ಕೃಷಿ ಸಂದರ್ಭಗಳಲ್ಲಿ ಹಬ್ಬಗಳನ್ನು ಆಚರಿಸುವುದು ಅಗತ್ಯವಿರುತ್ತದೆ. ವರ್ಷದಲ್ಲಿ ಪ್ರತಿಯೊಂದು ವ್ಯವಸಾಯದ ಕೆಲಸ ಕಾರ್ಯಗಳು ಕಾಲಕ್ಕೆ ತಕ್ಕಂತೆ ಆರಂಬಿಸಲ್ಪಡುತ್ತವೆ. ಬೇಸಾಯವನ್ನು ವರ್ಷದ ಪ್ರಾರಂಭದ ದಿನವಾದ ಯುಗಾದಿಯಂದು ಆರಂಬಿಸಿದರೆ, ಎತ್ತುಗಳ ಪೂಜೆ ಬಸವನ ಹಬ್ಬದಂದು ನಡೆಯುತ್ತದೆ. ಹೊಡೆ

ಹೊಡೆದ ಬೆಳೆಗಳ ವಿಜಯವನ್ನು ಮಹಾನವಮಿಯಲ್ಲೂ ಕಂಡುಕೊಳ್ಳುತ್ತಾನೆ. ನೇಗಿಲು ದನಕರುಗಳನ್ನು ಹಟ್ಟಿ ಹಬ್ಬದಲ್ಲಿ ಪೂಜಿಸಿದರೆ ದವಸ ಧಾನ್ಯಗಳು ಮನೆಗೆಬಂದ ಸಂದರ್ಭವನ್ನು ದೀಪ ಹಚ್ಚುವುದರ ಮೂಲಕ ಕಾರ್ತಿಕ ಆಚರಣೆ ಮಾಡುತ್ತಾರೆ. ಮಾಘ ಮಾಸದಲ್ಲಿ ಎಲೆಗಳೆಲ್ಲ ಉದುರುತ್ತಿದ್ದರೆ ಅದು ಶೂನ್ಯಮಾಸ ಎಂದು ಭೂಮಿತಾಯಿಗೆ ಪುನಃ ಫಲವಂತಿಕೆ ಬರಲೆಂದು ಸಡಗರ ಜಾತ್ರೆ ಮಾಡಿ ಕುರಿ, ಕೋಣ ಮುಂತಾದ ಪ್ರಾಣಿಗಳನ್ನು ಬಲಿಕೊಡುತ್ತಾರೆ. ಬಿಡುವಿನ ಹಂಗಾಮಿನಲ್ಲಿ ಅಂದರೆ ಶಿವರಾತ್ರಿ ಸಂದರ್ಭದಲ್ಲಿ ಕ್ಯಾತಪ್ಪನ ಜಾತ್ರೆ ಆಚರಿಸುತ್ತಾರೆ. ವರ್ಷ ಪೂರ್ತಿಯೂ ಕ್ಯಾತಪ್ಪನಿಗೆ ಪೂಜೆ ಸಲ್ಲಿಸುವ ಪದ್ಧತಿಯಿದೆ. ಕ್ಯಾತಪ್ಪನ ಪ್ರತಿ ಹಬ್ಬ, ಉತ್ಸವಗಳು ಇಂತಹ ಸಂದರ್ಭವನ್ನು ಅವಲಂಬಿಸಿಯೇ ಆಚರಿಸಲ್ಪಡುತ್ತವೆ.

ಕಾಡುಗೊಲ್ಲರ ಕ್ಯಾತಪ್ಪನ ಹಬ್ಬ ಹರಿದಿನಗಳು ಬುಡಕಟ್ಟು ಸಂಸ್ಕೃತಿಯ ಹಿನ್ನೆಲೆಯನ್ನು ಒಳಗೊಂಡಿವೆ. ಅದರಲ್ಲಿ ಹೆಚ್ಚಿನದಾಗಿ ಚಿತ್ರದುರ್ಗ, ತುಮಕೂರು ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಬುಡಕಟ್ಟು ಜನರೇ ಹೆಚ್ಚಾಗಿದ್ದಾರೆ. ಇವರು ಕೇತಪ್ಪನ ಆರಾಧಕರೂ ಆಗಿದ್ದಾರೆ. ಕ್ಯಾತಪ್ಪನಹಬ್ಬ, ಜಾತ್ರೆಗಳು ಕಾಲ ಕಾಲಕ್ಕೆ ಸರಿಯಾಗಿ ಈ ಕೆಳಗಿನಂತೆ ಆಚರಿಸಿಕೊಂಡು ಬಂದಿದ್ದಾರೆ.

- ಪ್ರತಿ ಶನಿವಾರ ಕ್ಯಾತಗೊಂಡನಹಳ್ಳಿಯಲ್ಲಿ ಕ್ಯಾತಪ್ಪನ ಹೆಸರಿನಲ್ಲಿ ತುಪ್ಪದ ಕದರಿ ನರಸಿಂಹಸ್ವಾಮಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ.
- ಸ್ವಯಂಭುಲಿಂಗದ ಆರಾಧನೆ ತಪ್ಪದೇ ನಡೆಯುತ್ತದೆ.
- ಹದಿಮೂರು ಗುಡಿಕಟ್ಟು ವ್ಯಾಪ್ತಿಯ ಪ್ರತಿ ದೇವಸ್ಥಾನದಲ್ಲಿ ಶಿವರಾತ್ರಿ ಸಂದರ್ಭದಲ್ಲಿ ಗುಗ್ಗರಿ ಹಬ್ಬವನ್ನು ಆಚರಿಸುತ್ತಾರೆ.
- ಜಾತ್ರೆಯ ೨೯ ದಿನಗಳು ಒಂದಲ್ಲ ಒಂದು ರೀತಿಯ ವಿಶಿಷ್ಟ ಆಚರಣೆ ನಡೆಯುತ್ತದೆ.

ಕರ್ನಾಟಕ ಸಂಸ್ಕೃತಿಯ ಪ್ರಾಚೀನತೆಯ ಪದರುಗಳನ್ನು ಇಲ್ಲಿಯ ಸಾಂಸ್ಕೃತಿಕ, ಧಾರ್ಮಿಕ ಆಚರಣೆ ಮತ್ತು ಆರಾಧನೆಗಳಲ್ಲಿ ಕಾಣಬಹುದು. ತಲೆತಲಾಂತರದಿಂದ ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಧಾರ್ಮಿಕ ವಿಧಿ-ವಿಧಾನಗಳೇ ಆಚರಣೆಗಳು. ಇವುಗಳ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭ ಮತ್ತು ಇವು ಹುಟ್ಟಿ ಬೆಳೆಯುತ್ತಿರುವ ಸಮುದಾಯದ ಜನರಿಗೂ ನಿಕಟವಾದ ಸಂಬಂಧವಿದೆ. ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಕಾಣುವ ಪ್ರವೃತ್ತಿಗಳನ್ನು ಶೋಧಿಸುವ ಕೆಲಸ ಇನ್ನು ಸಾಕಷ್ಟು ಆಗಬೇಕಿದೆ. ಸಮಾಜದ ಒಂದು ನಿರ್ದಿಷ್ಟ ಬುಡಕಟ್ಟು, ಸಮುದಾಯ, ಜಾತಿ, ಉಪ ಜಾತಿಯಲ್ಲಿ

ಪ್ರಚಲಿತವಿರುವ ಆಚರಣೆಗಳ ಉಗಮಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಮಹತ್ತರವಾದ ಕಾರಣಗಳು ಇರುತ್ತವೆ. ಆ ಕಾರಣಗಳು ಭಾವನಾತ್ಮಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಮುಂತಾದುವುಗಳು ಆಗಿರಬಹುದು.

**೫.೪ ಸಾಮಾಜಿಕ ಸಂದರ್ಭ**

ಮನುಷ್ಯ ಅಲೆಮಾರಿ ಸ್ಥಿತಿಯನ್ನು ಕಳೆದುಕೊಂಡು ಒಂದು ಕಡೆ ನೆಲೆ ನಿಲ್ಲಲು ಆರಂಭಿಸಿದಾಗಿನಿಂದ ಸಮಾಜ ರೂಪುಗೊಂಡಿತು ಎನ್ನಬಹುದು. ಸಾಮೂಹಿಕವಾಗಿ ಜೀವನ ನಡೆಸುವುದು ಮತ್ತು ಸಾಮಾಜಿಕ ಸಂರಚನೆಗಳಿಂದ ಒಂದೇ ಕಡೆ ನೆಲೆಸಿ ಗುಂಪುಗಳೊಂದಿಗೆ ವ್ಯವಸಾಯ ಇತ್ಯಾದಿಗಳು ಮೊದಲು ಚಾಲ್ತಿಗೆ ಬಂದು ಅನಂತರ ಹೊಸ ಆಲೋಚನೆಯಿಂದ ಸಂಶೋಧನೆಗಳಿಗೆ ಇಳಿದು ಹೆಚ್ಚು ನಾಗರಿಕನಾದಂತೆ ಸಮಾಜವೂ ಸಹ ವಿಕಾಸಗೊಂಡಿದೆ. ಮಾನವನ ನಿತ್ಯ ಜೀವನದಲ್ಲಿ ಅನೇಕ ಬಗೆಯ ಘಟನೆಗಳು ಸಂಭವಿಸುತ್ತಿದ್ದವು. ಇಂತಹ ಘಟನೆಗಳ ಹಿಂದೆ ದೈವಿಕ ಶಕ್ತಿಯ ಕೈವಾಡವಿರುತ್ತದೆಂದು ಭಾವಿಸಿಕೊಂಡಿದ್ದನು. ಇಂತಹ ದೈವಶಕ್ತಿ ಮುನಿದರೆ ಊರಿನಲ್ಲಿ ಮಳೆ ಬೆಳೆಯಾಗದೆ ವಿಕೋಪಗಳು ಸಂಭವಿಸುತ್ತವೆ. ದೈವವನ್ನು ಸಂತೃಪ್ತಿಪಡಿಸಿದರೆ ಈ ವಿಕೋಪಗಳು ದೂರವಾಗುತ್ತವೆ ಎಂದು ದೇವತೆಗೆ ಮೂರ್ತರೂಪ ಕೊಟ್ಟು ಆರಾಧಿಸಲಾರಂಬಿಸಿದನು. ಹೀಗೆ ಪ್ರಾರಂಭವಾದ ದೈವದ ಆರಾಧನೆಯು ಮುಂದೆ ಹಬ್ಬ ಹರಿದಿನ, ಉತ್ಸವ ಜಾತ್ರೆಗಳು ನಡೆಯಲು ಕಾರಣವಾದವು.

ಸಮಾಜ ಎಂದರೆ ಸಮಾನ ಪ್ರಭಾವದ ಸಾಂಘಿಕ ವ್ಯವಸ್ಥೆ. ಅದರಲ್ಲಿ ಪರಸ್ಪರ ಕೊಡುಕೊಳ್ಳುವಿಕೆ, ಬೇಕು–ಬೇಡುಗಳನ್ನು ಈ ವ್ಯವಸ್ಥೆ ಪೂರೈಸುತ್ತದೆ. ಸಮಾಜದಲ್ಲಿ ಕುಟುಂಬವು ಒಂದು ಪ್ರಮುಖ ಘಟಕವಾಗಿದ್ದು, ಕುಟುಂಬದ ಸದಸ್ಯರಲ್ಲಿ ಅರಿವು, ಸಹಕಾರ, ಹೊಂದಾಣಿಕೆಗಳು ಬೆಳೆಯಲು ಸಾಮಾಜಿಕ ವ್ಯವಸ್ಥೆ ಕಾರಣವಾಗಿದೆ. ಜಾತಿ, ಲಿಂಗ, ವಯಸ್ಸು, ವರ್ಗ ಇತ್ಯಾದಿಗಳು ಕೂಡಿಕೊಂಡು ಇವುಗಳ ಮೂಲಕ ಸಮಾಜವು ಸಹ ಸಂಕೀರ್ಣವಾದುದೆನಿಸಿದೆ. ಮನುಷ್ಯ ಸಂಘಜೀವಿಯಾದುದರಿಂದ ಈ ಭೇದಗಳು ಗೌಣವಾಗಿ, ಸಾದೃಶ್ಯಗಳು ಪ್ರಮುಖವಾಗಿ ಹೊಂದಾಣಿಕೆಯ ಬದುಕು ನಿರ್ಮಾಣಗೊಳ್ಳುತ್ತದೆ. "ಜನಪದರಲ್ಲಿ ದೈನಂದಿನ ಆಚರಣೆಗಳು ವಿರಳ. ಯಾಕೆಂದರೆ ಅವರು ಶ್ರಮಜೀವಿಗಳು. ತಮಗೆ ಅನುಕೂಲವಾದ ಸಮಯ ಅಥವಾ ವೇಳೆಯಲ್ಲಿ ಆಚರಣೆಗಳನ್ನು ಏರ್ಪಡಿಸುತ್ತಾರೆ. ಅವು ಕಾಲಬದ್ಧವಾಗಿರುತ್ತವೆ."[೧೫] ಹುಣ್ಣಿಮೆ, ಅಮಾವಾಸೆ, ಸುಗ್ಗಿ, ಜಾತ್ರೆ, ಉತ್ಸವ ಹೀಗೆ ಪ್ರತಿಯೊಂದು ಆಚರಣೆಯ ಕಾಲ ಹಾಗೂ ಸನ್ನಿವೇಶದ ಹಿನ್ನೆಲೆಯಲ್ಲಿ ಅರ್ಥಪೂರ್ಣತೆಯನ್ನು ಪಡೆದುಕೊಂಡಿರುತ್ತವೆ. ಒಂದು ಕಾಲದಲ್ಲಿನ ಮೌಲ್ಯಯುತವಾದ ಆಚರಣೆಗಳು ನಂತರದ ಸಮಯದಲ್ಲಿ ಕೀಳಾಗಿ ಕಂಡುಬರಲು ಸಾಧ್ಯವಿದೆ. ಅವು

ಜೀವಂತವಿದ್ದಷ್ಟು ಕಾಲ ಕ್ರಿಯಾಶೀಲವಾಗಿರುತ್ತವೆ. ಕಾಲಬದ್ಧ ಆಚರಣೆಗಳು ಸಾಮೂಹಿಕವಾಗಿರುತ್ತವೆ. ಕೆಲವೊಮ್ಮೆ ಸಾಮೂಹಿಕ ಹಾಗೂ ಕೌಟುಂಬಿಕ ನೆಲೆಯಲ್ಲಿ ಏಕಕಾಲದಲ್ಲಿ ಪ್ರಕಟಗೊಳ್ಳುತ್ತಿರುತ್ತವೆ. ಪ್ರತಿಯೊಂದು ಸಮುದಾಯದಿಂದಲೂ ಒಂದೊಂದು ರೀತಿಯ ಭಾಗವಹಿಸುವಿಕೆ ಇರುತ್ತದೆ. ಊರಿನ ಜನರೆಲ್ಲರೂ ಸೇರಿ ಮಾಡುವಂತಹ ಆಚರಣೆಗಳಲ್ಲಿ ಜಾತಿ, ವರ್ಗ, ಆರ್ಥಿಕ, ಸಾಮಾಜಿಕ ಅಂತರಗಳು ದೈವೀ ಆರಾಧನೆಯ ಹಿನ್ನಲೆಯಲ್ಲಿ ಪ್ರಕಟಗೊಳ್ಳುತ್ತಿರುತ್ತವೆ.

ಸಮುದಾಯವೊಂದರ ಜೀವನ ವಿಧಾನದ ಅಂಗವಾಗಿ ಹುಟ್ಟಿಕೊಂಡ ಆಚರಣೆಗಳನ್ನು ಇಂತಿಷ್ಟೆ ಎಂದು ಖಚಿತವಾಗಿ ವರ್ಗೀಕರಿಸಲು ಬರುವುದಿಲ್ಲ. ಕಾರಣ ಇವು ಮನುಷ್ಯನ ಭಾವನಾತ್ಮಕ ಜಗತ್ತಿಗೆ ಸಂಬಂಧಿಸಿದವುಗಳು. ಸಾಮಾಜಿಕ ಸಂರಚನೆ, ಆರ್ಥಿಕ ಪರಿಸ್ಥಿತಿ, ನಿಸರ್ಗ ಸಂಬಂಧ, ದೈವ ಸಂಬಂಧ, ಸಸ್ಯ ಸಂಬಂಧ, ಪ್ರಾಣಿ ಸಂಬಂಧ, ಹೀಗೆ ಬೆಳೆಯುತ್ತಲೇ ಹೋಗುತ್ತದೆ. ಆದ್ದರಿಂದ ಆಚರಣೆಗಳನ್ನು ಅವುಗಳು ಒಳಗೊಳ್ಳುವ ವಸ್ತುವನ್ನು ಗಮನದಲ್ಲಿಟ್ಟುಕೊಂಡು ವರ್ಗೀಕರಿಸಿ ಚರ್ಚಿಸುವ ಅಗತ್ಯವಿದೆ. ಈ ಆಚರಣೆಗಳು ಎಲ್ಲಾ ಜಾತಿ ಜನಾಂಗದವರ ಪ್ರೋತ್ಸಾಹ ಹಾಗೂ ಸಹಕಾರದಿಂದ ನಡೆಯುವುದರಿಂದ ಇವುಗಳನ್ನು ಗ್ರಾಮೀಣ ಜನತೆಯು ಪಾಲಿಸುತ್ತ ಬಂದಿರುವುದು ಕಂಡುಬರುತ್ತದೆ. ಆದ್ದರಿಂದ ದೈವಗಳ ಹಬ್ಬ, ಪರ್ವ ಹಾಗೂ ಜಾತ್ರಾ ಆಚರಣೆಗಳು ಕಾಲಮಾನಕ್ಕಾಗಿ ಆಚರಿಸಲ್ಪಡುತ್ತವೆ. ಜೊತೆಗೆ ಆಯಾ ಊರಿನ ದೈವಗಳ ಸಾಂಸ್ಕೃತಿಕ ಮತ್ತು ಸಾಮೂಹಿಕ ಚಹರೆಗಳನ್ನು ಪ್ರಕಟಿಸುವ ಸಂಗತಿಗಳನ್ನು ಒಳಗೊಂಡಿರುತ್ತವೆ. ಇಂಥ ಕಾಲಬದ್ಧ ಆಚರಣೆಗಳ ಹಿಂದೆ ಸಮಷ್ಟಿಪ್ರಜ್ಞೆ ಅಡಕವಾಗಿರುತ್ತದೆ. ಪರಸ್ಪರ ಭಾಗವಹಿಸುವಿಕೆ, ಗ್ರಾಮ ನೈರ್ಮಲ್ಯ ಕಾಪಾಡುವಿಕೆ, ಧಾರ್ಮಿಕ ವಾತಾವರಣ, ಸಾಮೂಹಿಕ ಪ್ರಜ್ಞೆ, ಮನರಂಜನೆಯ ಸಂದರ್ಭಗಳು ಇವೆಲ್ಲಾ ಮಾನವ ಸಂಬಂಧಗಳನ್ನು ಗಟ್ಟಿಗೊಳಿಸುವಲ್ಲಿ ಪ್ರಧಾನಪಾತ್ರವಹಿಸುತ್ತವೆ. ಈ ಉತ್ಸವ ಅಥವಾ ಜಾತ್ರೆಗಳನ್ನು ಕಾಲ ಕಾಲಕ್ಕೆ ನಡೆಸಿದರೆ ಮಳೆ-ಬೆಳೆ ಸಮೃದ್ಧವಾಗಿ, ನಾಡಿನಲ್ಲಿ ಸುಖ,ಶಾಂತಿ ನೆಲೆಸುವುದೆಂದು ಗ್ರಾಮೀಣ ಜನರು ನಂಬುತ್ತಾರೆ. ಆದ್ದರಿಂದಲೇ ಆಧುನೀಕರಣ, ಜಾಗತೀಕರಣದ ಭರಾಟೆಯ ನಡುವೆಯೂ ಜಾತ್ರೆಯಲ್ಲಿ ನಡೆಯುವ ಸಂಪ್ರದಾಯ ಮತ್ತು ಆಚರಣೆಗಳು ನಿರಂತರವಾಗಿ ನಡೆಯುತ್ತವೆ. ದೈವದ ಪ್ರಸ್ತುತೆಯ ಹಿಂದೆ ಜನಪದರ ಮನೋಭಾವಗಳು ಸಹ ಕ್ರಿಯಾಶೀಲವಾಗಿರುವುದು ಗಮನಾರ್ಹ ಸಂಗತಿಯಾಗಿದೆ.

ಬಯಲು ಸೀಮೆಯಲ್ಲಿ ಕೇತಪ್ಪನ ಜಾತ್ರೆ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಮಹತ್ವದ ಜೊತೆಗೆ ಅನೇಕ ಬಗೆಯ ಕ್ರಿಯಾಶೀಲವಾದ ಸಂಬಂಧವನ್ನು ಪಡೆದುಕೊಂಡಿದೆ. ಇದು ಕೇವಲ ಸಂಪ್ರದಾಯ, ಆಚರಣೆಯಾಗಿ ಮಾತ್ರ ಉಳಿಯದೆ ಜನೋಪಯೋಗಿ ಎಂಬ

ಅರ್ಥವನ್ನು ಪಡೆದುಕೊಂಡಿದೆ. ಚಿತ್ರದುರ್ಗ ಪಾಳೇಗಾರರ ಕಾಲದಲ್ಲಿ ಬಯಲುಸೀಮೆಯ ಪ್ರಾಂತ್ಯದಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗೆ ಅನುಕೂಲವಾಗುವಂತೆ ಜಾತ್ರೆಯನ್ನು ನಡೆಸಲಾಗುತ್ತಿತ್ತು. ಅರಸರು, ಮಾಂಡಲೀಕರು ತಮ್ಮ ಜನ ಸಮುದಾಯಗಳ ಬೆಂಬಲವನ್ನು ಪಡೆದುಕೊಳ್ಳಲು ಜಾತ್ರೆಗಳು ತುಂಬಾ ಸಹಕಾರಿ ಎಂದು ಭಾವಿಸಿದ್ದಂತೆ ತಿಳಿದು ಬರುತ್ತದೆ. ಇದು ಮಧ್ಯಕಾಲೀನ ಒಂದು ಸಾಮಾಜಿಕ ವ್ಯವಸ್ಥೆಯ ಹಿನ್ನಲೆಯಲ್ಲಿ ಜಾತ್ರೆ ಹಾಗೂ ಆಚರಣೆಗಳು ರೂಪಗೊಂಡು ಆಚರಣೆಗೊಳ್ಳುತ್ತ ಬಂದಿರುವ ಸಂಗತಿಯಾಗಿದೆ.

ಜಾತ್ರೆಯಲ್ಲಿ ಸಾಮಾಜಿಕವಾಗಿ ಜಾತಿ ಶ್ರೇಣಿಯನ್ನಾಧರಿಸಿ ಕೆಲಸ ಕಾರ್ಯಗಳು ಹಂಚಿಕೆಯಾಗಿರುತ್ತವೆ. ಜಾತಿ ಆಧಾರಿತವಾಗಿರುವ ಜನಪದ ಸಮಾಜದಲ್ಲಿ ಅಧಿಕಾರಸ್ಥ ಸ್ಥಾನವನ್ನು ಪಡೆದಿರುವ ಕೆಲವರು ಸಾಮಾಜಿಕ ವ್ಯವಸ್ಥೆಯ ತುದಿಯಲ್ಲಿ ನಿಂತಿರುತ್ತಾರೆ. ಆಡಳಿತದಲ್ಲಿ ಸಲಹೆ, ಸೂಚನೆಗಳನ್ನು ನೀಡುವ ಮಂತ್ರಿಯ ಸ್ಥಾನದಲ್ಲಿ ಬ್ರಾಹ್ಮಣರು ಇದ್ದು, ಆಡಳಿತದ ದೃಷ್ಟಿಯಿಂದ ಮೇಲುಸ್ತರದ ಎರಡನೆಯ ಸ್ಥಾನದಲ್ಲಿದ್ದಂತೆ ಕಂಡುಬರುತ್ತಾರೆ. ಆದರೆ ಆಂತರ್ಯದಲ್ಲಿ ಆಡಳಿತದ ನಿಯಂತ್ರಕರು ಇವರೇ ಆಗಿರುವ ಹಿನ್ನಲೆಯಲ್ಲಿ ಪುರೋಹಿತರೆ ಮೇಲ್ದರ್ಜೆಗೆ ಬಂದು ನಿಲ್ಲುತ್ತಾರೆ. ಮೇಲ್ವರ್ಗದವರೆ ಸಾಮಾನ್ಯವಾಗಿ ಎಲ್ಲ ದೇವರುಗಳ ಪೂಜಾರಿಗಳಾಗಿರುತ್ತಾರೆ. ಬಯಲು ಸೀಮೆಯಲ್ಲಿ ಕಂಡುಬರುವ ಇತರೆ ಜಾತಿಯವರಾದ ಅಯ್ಯಗಳು, ತಳವಾರರು, ಮಾದಿಗರು, ಮಡಿವಾಳರು, ಉಪ್ಪಾರರು ಇನ್ನು ಮುಂತಾದ ಶೂದ್ರವರ್ಗದವರು ಮತ್ತು ಪಂಚಮ ವರ್ಗದ ಹೊಲೆಯರು ದೈವದ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಇವರುಗಳು ಪೂಜಾಕಾರ್ಯವನ್ನು ಹೊರತುಪಡಿಸಿ ಇತರೆ ಜಾತ್ರಾ ಆಚರಣೆಯ ಹೊರ ಭಾಗದಲ್ಲಿ ನಡೆಯುವ ಅಗತ್ಯವಾದ ಕೆಲಸ ಕಾರ್ಯಗಳನ್ನು ಪೂರೈಸುತ್ತಾರೆ. ಆದ್ದರಿಂದ ಜಾತ್ರೆಯು ಒಂದು ಸಾಮೂಹಿಕ ಆಚರಣೆಯಾಗಿ ಅರ್ಥಪಡೆದುಕೊಂಡಿದೆ. ದೈವಗಳ ಆಚರಣೆ ಮತ್ತು ಸಮಾಜಕ್ಕೆ ನಿಕಟವಾದ ಸಂಬಂಧವಿದೆ. ಅನೇಕ ಆಚರಣೆ, ನಂಬಿಕೆ ಮತ್ತು ಸಂಪ್ರದಾಯಗಳೆಲ್ಲವೂ ಸಮಾಜದ ಕ್ಷೇಮಕ್ಕಾಗಿ, ಬಂಧು-ಬಳಗದವರನ್ನು ಹತ್ತಿರ ತರುವುದಕ್ಕಾಗಿ ನಡೆಯುತ್ತಿರುತ್ತವೆ.

**ಕ್ಯಾತಪ್ಪನ ಆಯಗಾರರು**

ಜನಪದರ ಜೀವನ ಸುವ್ಯವಸ್ಥೆಯಿಂದ ಸಾಗುತ್ತಾ ಪೂರ್ವದಿಂದಲೂ ಪರಂಪರಾತ್ಮಕವಾಗಿ ಹಲವಾರು ಕಟ್ಟು ಕಟ್ಟಳೆಗಳನ್ನು, ನೀತಿ-ನಿಯಮಗಳನ್ನು ಸೃಷ್ಟಿಸಿಕೊಂಡು ಬಂದಿದ್ದಾರೆ. ಅವುಗಳು ಸಾಮಾಜಿಕವಾಗಿ, ಆರ್ಥಿಕವಾಗಿ ನೆರವು ನೀಡುವುದೇ ಅಲ್ಲದೆ ನೆಮ್ಮದಿ ನೆಲೆಸುವಂತೆ ಮಾಡುತ್ತಿದ್ದವು. ಜೀವನಾವಶ್ಯಕತೆಗಳು, ಜೀವನ ವಿಧಿ-ವಿಧಾನಗಳು ಎಲ್ಲ ಹಳ್ಳಿಗಳಲ್ಲಿಯೂ ಒಂದೇ ರೀತಿಯಾಗಿರುವಂಥದ್ದು, ಊರಿನ ಸೇವಾ ಕಾರ್ಯಗಳಿಗೆ

ನೆರವಾಗುವಂತ ಮಣೆಗಾರ, ತಳವಾರ, ಶ್ಯಾನುಬೋಗ, ಪೂಜಾರಿ, ಪಾಟೇಲ ಮೊದಲಾದವರು ಇವರೆಲ್ಲರನ್ನು ಆಯಗಾರರೆಂದು ಕರೆಯುತ್ತಾರೆ.

**ಹೆಳವರು**



**ಕ್ಯಾತಪ್ಪನ ವಕ್ಕಲಿನ ಹೆಳವರು**

ದೇವರಿಗೆ ಘಂಟೆ ಸೇವೆಯನ್ನು ಅರ್ಪಿಸುತ್ತಾರೆ. ಹೆಳವರನ್ನು ಹೆಳ ಮಗ ಮನೆ ಮಗ ಎಂದು ಕರೆಯುತ್ತಾರೆ.

**ಮಡಿವಾಳ**

ಸಾಮಾಜಿಕ, ಧಾರ್ಮಿಕ ಸೇವೆಯಲ್ಲಿ ಮಡಿವಾಳ(ಅಗಸ)ನ ಕೆಲಸ ಪ್ರಮುಖವಾದುದು. ಗ್ರಾಮದೇವರ ಹರಕೆ, ಜಾತ್ರೆ, ಉತ್ಸವಗಳಲ್ಲಿ ದೇವರು ಗುಡಿಯಿಂದ ಹೊರ ಬರುವಾಗ ನಡೆಮುಡಿ ಹಾಸುವುದು, ಅವರು ಮಡಿಬಟ್ಟೆ ಹಾಸುತ್ತಾ ಹೋದಂತೆ ದೇವರು ಹೊತ್ತ ಪೂಜಾರಿಗಳು, ಕಳಸ ಹೊತ್ತವರು ಮಡಿಯ ಮೇಲೆ ನಡೆದು ಹೋಗುತ್ತಾರೆ. ಮೆರವಣಿಗೆಯಲ್ಲಿ ಬೆಳಕಿನ ವ್ಯವಸ್ಥೆಗೆ ಪಂಜು ಹಿಡಿಯುವುದು, ಮಣೇವು ಹಾಕಲಿಕ್ಕೆ ಮಡಿಬಟ್ಟೆ ಒದಗಿಸುವುದು, ಈ ಸೇವಾ ಕಾರ್ಯಗಳು ಕ್ಯಾತಪ್ಪನ ಜಾತ್ರಾಚರಣೆಯಲ್ಲಿ ಪ್ರತಿ ವರ್ಷ ಕಂಡುಬರುತ್ತವೆ. ಕಾಡುಗೊಲ್ಲರ ಯಾವುದೇ ದೈವಗಳ ಆಚರಣೆಗಳು ಮಡಿವಾಳರ ನಡೆಮುಡಿ ಇಲ್ಲದೆ ಜರುಗುವುದಿಲ್ಲ. ಆದ್ದರಿಂದ ಕಾಡುಗೊಲ್ಲ ಹಾಗೂ ಮಡಿವಾಳ ಸಮುದಾಯದ ನಡುವೆ ಸಾಮರಸ್ಯವಿರುವುದನ್ನು ಕಾಣಬಹುದು. ಸಾಮಾಜಿಕ, ಧಾರ್ಮಿಕ ಆಚರಣೆಗಳಲ್ಲಿ ಮಡಿವಾಳರ ಸೇವೆ ಅನನ್ಯವಾಗಿರುತ್ತದೆ.

**ಮಣೆಗಾರ**

ಆಯಗಾರರಲ್ಲಿ ಪ್ರಮುಖನಾದವನು ಮಣೆಗಾರ. ಇವರು ಸಾಮಾಜಿಕ ಹಾಗೂ ಧಾರ್ಮಿಕ ಕೆಲಸ ಕಾರ್ಯಗಳಲ್ಲಿ ಅತಿ ಮುಖ್ಯವಾದ ಪಾತ್ರವಹಿಸುತ್ತಾರೆ. ಆಯದ ಕೆಲಸದವರು ಇವನನ್ನು 'ಮನೆಮಗ' ಎಂದು ಸಂಬೋಧಿಸುವುದುಂಟು. ಕ್ಯಾತೇದೇವರ ಜಾತ್ರಾಚರಣೆಯ ಸಂದರ್ಭದಲ್ಲಿ ಮಣೆಗಾರರು ಚರ್ಮದಿಂದ ಹೊಸ ಚಪ್ಪಲಿಗಳನ್ನು ಹೊಲಿದು ಕ್ಯಾತೇದೇವರ ಪಟ್ಟದ ಪೂಜಾರಿಗಳಿಗೆ ಅರ್ಪಿಸುವ ಪದ್ಧತಿ ಇಂದಿಗೂ ಇದೆ. ಜಾತ್ರೆಯ ಕೆಲಸದಲ್ಲಿ ಮಣೆಗಾರರನ್ನು ಅಣ್ಣ ತಮ್ಮಂದಿರಂತೆ ನಡೆಸಿಕೊಳ್ಳುತ್ತಾರೆ. ಹಬ್ಬ ಹರಿದಿನಗಳಲ್ಲಿ ತಮಟೆ ಭಾರಿಸುವ, 'ಶೂನ್ಯೇವು' ಜಾತ್ರೆಯಲ್ಲಿ ಸರಗ ಚೆಲ್ಲುವ ಆಚರಣೆಗಳಲ್ಲಿ ಇವರು ಪ್ರಮುಖ ಪಾತ್ರವಹಿಸುತ್ತಾರೆ.

**ತಳವಾರ ನಾಯಕ**

ಕ್ಯಾತಪ್ಪನ ಆಚರಣೆಯಲ್ಲಿ 'ಒಳಮರ' ತರುವ ಜವಾಬ್ದಾರಿ ತಳವಾರ ನಾಯಕನ ಕೆಲಸವಾಗಿದೆ. ಒಳಮರದಲ್ಲಿ ಐದು ಕುಣಿ ಮಾಡಿ ಅದರಲ್ಲಿ ನವಣೆ ಕುಟ್ಟುವ ಶಾಸ್ತ್ರ ಮಾಡುತ್ತಾರೆ.

**ಚಲವಾದಿ**

ದೇವರುಗಳ ಉತ್ಸವ ಹಾಗೂ ಜಾತ್ರೆಗಳಲ್ಲಿ ಚವಾದಿಗಳು ತಮ್ಮ ಬಳಿ ಇರುವ ಉರುಮೆ ವಾದ್ಯವೊಂದನ್ನು ಬಡಿಯುವ ಮೂಲಕ ಜನರನ್ನು ಹುಚ್ಚೆದ್ದು ಕುಣಿಯುವಂತೆ ಮಾಡುತ್ತಾರೆ. ಇದನ್ನು ಕಾಡುಗೊಲ್ಲರು ಮತ್ತು ಮ್ಯಾಸಬೇಡರು ತಮ್ಮ ದೈವಗಳ ಆರಾಧನೆಯಲ್ಲಿ ಬಳಸುವಂತೆ ಇತರೆ ಜನಾಂಗದವರು ಈ ವಾದ್ಯವನ್ನು ಬಳಸುತ್ತಾರೆ. ವಿಶೇಷವಾಗಿ ಮಾರಿ, ದುರ್ಗಿಯರು ಸೇರಿದಂತೆ ಕಾಡುಗೊಲ್ಲರ ದೈವಗಳು ಬಹುತೇಕವಾಗಿ ಈ ವಾದ್ಯದಿಂದಲೇ ಗುರುತಿಸಲ್ಪಡುತ್ತಾರೆ. ದೇವರ ಉತ್ಸವಗಳಲ್ಲಿ ಉರುಮೆಯ ವಾದ್ಯವನ್ನು ಉಜ್ಜದೇ ಹೋದರೆ ತಮ್ಮ ವಂಶವೇ ನಿರ್ವಂಶವಾಗುತ್ತದೆ ಎಂದು ತಿಳಿದ ವಾದ್ಯಗಾರರು ಕ್ಯಾತಪ್ಪನ ಜಾತ್ರೆಯಲ್ಲಿ ಉರುಮೆ ವಾದ್ಯ ಸೇವೆ ನೆರವೇರಿಸುತ್ತಾರೆ.

**ಅಯ್ಯಗಳು (ಪುರೋಹಿತರು)**

ಅಯ್ಯಗಳು ಅಥವಾ ಐನೋರು ದೇವರ ಹೊಳೆಪೂಜೆ ಕಾರ್ಯಗಳಲ್ಲಿ ಭಾಗವಹಿಸಿ ದೇವರಿಗೆ ಕಂಕಣಧಾರಣೆ, ಮಂತ್ರಶಾಸ್ತ್ರದ ಮೂಲಕ ದೇವರ ಶುದ್ಧಿ ಕಾರ್ಯ ಮಾಡುತ್ತಾರೆ. ನಂತರ ದೇವರಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಹೀಗೆ ಸಮಾಜ ವ್ಯವಸ್ಥೆಯ ಸ್ತರಗಳಲ್ಲಿನ ನಿರ್ಬಂಧಗಳಿಗೆ ಅನುಗುಣವಾಗಿ ಜಾತ್ರಾ ಉತ್ಸವಗಳು ನಡೆಯುತ್ತಿವೆ. ಸಮಾಜದಲ್ಲಿರುವ ಪ್ರತಿಯೊಂದು ಜಾತಿ ಮತ್ತು ಉಪಜಾತಿಗಳಿಗೂ ತನ್ನದೇ ಆಗಿರುವ

ರಕ್ಷಕ ದೇವರಿದ್ದಾನೆ. ಅಂತಹ ದೇವರಿಗೆ ನಡೆದುಕೊಳ್ಳುವುದು ಸಾಮಾನ್ಯವಾಗಿ ಒಂದೇ ಜಾತಿಯವರಿರುತ್ತಾರೆ. ಕಾಡುಗೊಲ್ಲರು ಜುಂಜಪ್ಪ, ಕ್ಯಾತಪ್ಪ, ಎತ್ತಪ್ಪ, ಕರಿಯಣ್ಣ, ಸಿರಿಯಣ್ಣ, ಕುರುಬ ಜನಾಂಗದವರು ಬೀರಪ್ಪ, ಮ್ಯಾಸಬೇಡರು ಗಾದರಿಪಾಲನಾಯಕ, ಜಗಲೂರಜ್ಜನಿ ನಡೆದುಕೊಳ್ಳುತ್ತಾರೆ. ಬೇರೆ ಜಾತಿಯವರು ಈ ದೇವರುಗಳಿಗೆ ಬರಬಾರದೆಂಬ ನಿಯಮವಿಲ್ಲ. ಅಕಸ್ಮಾತ್ ಇವರುಗಳೇನಾದರೂ ಬಂದರೆ ಪವಾಡ, ಮಹಿಮೆ, ಭಯ, ಭಕ್ತಿಗಳು ಹೆಚ್ಚಿನ ಪ್ರಮಾಣದಲ್ಲಿರುವುದಿಲ್ಲ. ಹೀಗೆ ಒಂದೇ ಕಡೆ ಸೇರುವ ಜನತೆಯು ತಮ್ಮದೇ ಆದ ಸಂಪ್ರದಾಯ ಆಚರಣೆ, ರೂಢಿ, ನೀತಿ ನಿಯಮಗಳನ್ನು ದೈವಗಳ ಆಚರಣೆಯಲ್ಲಿ ಉಳಿಸಿ ಬೆಳೆಸಿಕೊಂಡು ಬರುತ್ತಾರೆ. ಇವರಲ್ಲಿ ತಾವೆಲ್ಲರೂ ಒಂದೇ ಎಂಬ ಭಾವನೆ ಮೂಡಿರುತ್ತದೆ. ಆಚರಣೆಗಳು ಜನಸಾಮಾನ್ಯರ ನಡುವೆ ಹುಟ್ಟಿ ಬೆಳೆದುದರಿಂದ ಜನಪದರ ಸಾಮಾಜಿಕ ಜೀವನಕ್ಕೆ ಇವು ಹತ್ತಿರವಾಗುತ್ತಿವೆ. ಈ ಹಿನ್ನೆಲೆಯಲ್ಲಿ ಕ್ಯಾತಪ್ಪನ ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಕಂಡುಬರುವ ಸಾಮಾಜಿಕ ಜೀವನದ ಮುಖ್ಯಾಂಶಗಳನ್ನು ಗುರುತಿಸಬಹುದಾಗಿದೆ. ಸಮಾಜದ ಮೇಲ್ಜಾತಿಯ ವಿಧಿ ವಿಧಾನಗಳು ಸಾಮಾನ್ಯವಾಗಿ ಕೆಳವರ್ಗದ, ಕೆಳಜಾತಿಯವರ ಆಚರಣೆಗಳ ಮೇಲೆ ಪ್ರಭಾವ ಬೀರುವ ಹಾಗೆ "ಕಾಡುಗೊಲ್ಲ ಬುಡಕಟ್ಟು ಸಮುದಾಯದಲ್ಲಿ ಚಿತ್ತಮುತ್ತಿ, ಚಂದ್ರಮುತ್ತಿ ಹಾಗೂ ರಾಮೇಗೌಡನ ಕುಲ ಎಂಬ ಮೂರು ಪ್ರಧಾನ ಕುಲಗಳಿದ್ದು, ಅವುಗಳಿಗೆ ಮತ್ತೆ ಅನೇಕ ಬೆಡಗು ಮತ್ತು ಉಪ ಬೆಡಗುಗಳಿವೆ. ಈ ಕುಲ ಹಾಗೂ ಬೆಡಗುಗಳ ಆಚರಣೆಗಳ ನಡುವೆ ಭಿನ್ನತೆ ಇದೆ."[೧೬]

ಇವರು ಒಂದೇ ಬುಡಕಟ್ಟು ಸಮುದಾಯದವರಾಗಿದ್ದರೂ ಸಮುದಾಯದೊಳಗೆ ಸಾಕಷ್ಟು ಭಿನ್ನತೆ ಇದೆ. ಸಾಂಸ್ಕೃತಿಕ ಸಂದರ್ಭದಲ್ಲಿ ಆ ಕುಲ, ಬಳ್ಳಿ ಅಥವಾ ಬೆಡಗುಗಳೊಳಗೆ ಜಾತಿಯಷ್ಟೇ ಕಠಿಣ ನಿಲುವಿನ ಭಿನ್ನತೆ ಕಂಡುಬರುತ್ತದೆ. ನಮ್ಮ ಕುಲ, ಬೆಡಗು ಶ್ರೇಷ್ಠ, ನಿಮ್ಮದು ಕನಿಷ್ಟ ಎಂಬ ತಾರತಮ್ಯ ಭಾವನೆ ಅವುಗಳ ನಡುವೆಯೇ ಇರುತ್ತದೆ. ಶ್ರೇಷ್ಠತೆಯರ ಪ್ರಭಾವ ಪರಿಣಾಮ ಕನಿಷ್ಠರ ಮೇಲೆ ಬೀರಿ ಇವುಗಳನ್ನು ವಿರೂಪಗೊಳಿಸುವ ಹಂತದಲ್ಲೂ ಕಾರ್ಯ ನಿರ್ವಹಿಸುವುದುಂಟು. ಇಂಥ ಸಾಂಸ್ಕೃತಿಕ, ಧಾರ್ಮಿಕ ಬದಲಾವಣೆಗಳು ಕೆಳವರ್ಗದವರು ಮೇಲ್ವರ್ಗದವರೊಂದಿಗೆ ತಳಕು ಹಾಕಲು ಪ್ರಯತ್ನಿಸುತ್ತಿರುತ್ತವೆ. ವ್ಯಕ್ತಿಯ ಶರೀರದ ಬದಲಾವಣೆ ಬೆಳವಣಿಗೆಯನ್ನು ಪ್ರಧಾನವಾಗಿರಿಸಿಕೊಂಡು ಈ ಆಚರಣೆಗಳು ನಡೆಯುತ್ತವೆ. ಜನನದಿಂದ ಮೊದಲುಗೊಂಡು ಮರಣದವರೆಗೆ. ಮರಣದ ನಂತರವೂ ಈ ಆಚರಣೆಗಳು ಎಲ್ಲಾ ಜನಸಮದಾಯದಲ್ಲಿ ನಡೆಯುತ್ತವೆ. ಆಚರಣೆಯ ಮೂಲಕವೇ ಇಲ್ಲಿನ ಎಲ್ಲಾ ಕ್ರಿಯಾವಿಧಾನಗಳು ಆರಂಭವಾಗುವುದು ಮಗು ಹಟ್ಟಿದ ಕ್ಷಣ; ಅದು ಹೊಸಿಲು ದಾಟಿದ್ದು, ಹಲ್ಲು

ಬಿದ್ದಿದ್ದು, ಇವುಗಳನ್ನು ಆಚರಣೆಯ ಮೂಲಕವೇ ಅಧಿಕೃತವಾಗಿ ಗುರುತಿಸುವುದು. ಹೆಣ್ಣು ಮೈನೆರೆಯುವುದು, ಗರ್ಭಧರಿಸಿದ್ದು, ಬಾಣಂತಿ ಆಗುವುದು ಮೊದಲಾದುವುಗಳನ್ನು ವಿಶೇಷವಾಗಿ ಆಚರಿಸುತ್ತವೆ. ಸಾವಿನ ನಂತರವೂ ಮೃತದೇಹವು ಹಲವಾರು ಆಚರಣೆಗೆ ಒಳಗಾಗುತ್ತದೆ. ಇವು ಸಾಮಾಜಿಕ ಆಚರಣೆಗೆ ಕೈಗನ್ನಡಿಯಾಗಿವೆ.

ಸನ್ನೋರು, ಸೋಮನೋರು, ಕೋಣನೋರು, ಅಜ್ಜೇರ, ಸಜ್ಜೇರ, ಉಪಗೊಳ್ಳೋರು, ಮರವಾಯಿ, ಭೂಮಪ್ಪಗಳು, ಬೊಮ್ಮನೋರು, ದೇವರೋರು(ದ್ಯಾವರಾರು), ಬತವಿನವರು, ಗುಡಿಹಳ್ಳಿಯವರು, ಈರಗಾರರು, ದಳವಾಯಿಗಳು, ಡಮಗಿನೋರು, ಬಿಲ್ಲೂಡು ಕದರಿಗೋಗರು, ಹುಲ್ಲೋರೆ, ಕಟ್ಟಿಗೆರೆ, ಶಾಸೆದೋರು, ಹಳ್ಳೇರು ಈ ಎಲ್ಲಾ ಬೆಡಗಿನವರು ಕೇತಪ್ಪನ ಆರಾಧಕರೇ. ಇವರೆಲ್ಲೂ ಸೇರಿಕೊಂಡು ಜಾತ್ರಾ ಆಚರಣೆ ನೆರವೇರಿಸುತ್ತಾರೆ. ಪ್ರತಿ ಬೆಡಗಿಗೂ ಒಂದೊಂದು ಜವಾಬ್ದಾರಿ ಕೆಲಸ ಕಾರ್ಯಗಳನ್ನು ವಹಿಸಿರುತ್ತಾರೆ. ಪ್ರತಿಯೊಬ್ಬರು ಕಾರ್ಯದಲ್ಲಿ ಪಾಲ್ಗೊಳ್ಳಲೇಬೇಕು. ಈ ಬೆಡಗುಗಳಲ್ಲಿ ಯಾವುದಾದರೂ ಒಂದು ಬೆಡಗಿನವರು ಪಾಲ್ಗೊಳ್ಳದಿದ್ದರೆ ಆ ವರ್ಷ ಜಾತ್ರಾ ಆಚರಣೆ ನಡೆಯುವುದಿಲ್ಲ. ಇವರಲ್ಲಿ ಕರಡಿಗೊಲ್ಲರು, ತಾಳಿಕಟ್ಟದ ಗೊಲ್ಲರು, ಬೊಮ್ಮನಗೊಲ್ಲರು, ಕೋಣನಗೊಲ್ಲರು, ಶೀಲವಾಡಿಗೊಲ್ಲರು ಹೀಗೆ ಹಲವಾರು ಬೆಡಗುಗಳಿದ್ದು ಇವುಗಳನ್ನು ಸುತ್ತುವರೆದಿರುವ ಐತಿಹ್ಯಗಳು ಕಂಡುಬರುತ್ತವೆ. ಆ ಬುಡಕಟ್ಟು ನಡೆದುಬಂದ ದಾರಿಯ ಹೆಜ್ಜೆ ಗುರುತುಗಳನ್ನು ತಮ್ಮ ಒಡಲೊಳಗೆ ಇಟ್ಟುಕೊಂಡಿರುವುದನ್ನು ಗಮನಿಸಿದರೆ ಇವು ಜನಪದ(ಬುಡಕಟ್ಟು) ಚರಿತ್ರೆಗೆ ಒಂದು ಹೊಸ ಆಯಾಮವನ್ನು ಒದಗಿಸುತ್ತವೆ. ಈ ಬೆಡಗು ಅಥವಾ ಪಂಗಡಗಳು ಪುರುಷ ಹಾಗೂ ಸ್ತ್ರೀಕೇಂದ್ರಿತ ಐತಿಹ್ಯಗಳನ್ನು ಹೊಂದಿರುವುದು ಕಂಡು ಬರುತ್ತವೆ. ಇವುಗಳ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಕುಲ(ಬಳ್ಳಿ) ಸಂಬಂಧ ವಿಚಾರಗಳ ವೈವಿಧ್ಯತೆಗಳನ್ನು ಇಲ್ಲಿ ಕಾಣಬಹುದಾಗಿದೆ.

ಜಾಗತೀಕರಣದ ಸಂದರ್ಭದಲ್ಲಿ ಇಂದು ಸಮಾಜದಲ್ಲಿ ಕೆಳಜಾತಿಯವರು ಹಾಗೂ ಸ್ತ್ರೀಯರ ಮೇಲೆ ಅಧಿಕ ಒತ್ತಡಗಳಿರುತ್ತವೆ. ಈ ಒತ್ತಡಗಳಿಂದ ಮಾನಸಿಕ ನೆಮ್ಮದಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಹೀಗೆ ಸಮಾಜದಲ್ಲಿನ ಒತ್ತಡಗಳಿಂದ ಬೇಸತ್ತು ಅದನ್ನು ನಿಭಾಯಿಸಿಕೊಳ್ಳುವುದಕ್ಕೆ ದೇವರ ಸಹಾಯವನ್ನು ಪಡೆಯುತ್ತಾರೆ. ದೈವದ ಕೃಪೆಗೆ ಒಳಗಾದವರನ್ನು ಸಮಾಜ ನೋಡುವ ದೃಷ್ಟಿಕೋನವೇ ಬೇರೆಯಾಗಿದೆ. ಅನೇಕ ಜನ ಸ್ತ್ರೀಯರು ಸಮಾಜದ ಒತ್ತಡಗಳಿಂದಾಗಿ ಸಂಪ್ರದಾಯಗಳನ್ನು ಅನುಸರಿಸುತ್ತಾ ಬರುತ್ತಿದ್ದಾರೆ. ಸೋಮಾರಿತನ, ಮಾನಸಿಕ ದುರ್ಬಲತೆ, ಲೈಂಗಿಕ ಅತೃಪ್ತಿ, ಕೌಟುಂಬಿಕ ಕಲಹಗಳಿಂದ ಜೋಗಪ್ಪ, ಜೋಗಮ್ಮರಾಗುತ್ತಿದ್ದಾರೆ. ಇವರಿಗೆ ವೈಚಾರಿಕತೆಯ ನೆಲೆಯಲ್ಲಿ ಶಿಕ್ಷಣ, ಉದ್ಯೋಗಗಳನ್ನು ಕಲ್ಪಿಸಿಕೊಟ್ಟರೆ ಇವರ ಮೂಢನಂಬಿಕೆ, ಮೌಢ್ಯತೆ ಮಾಯವಾಗಿ

ಸಾಮಾಜಿಕ ಪರಿಸ್ಥಿತಿ ಸುಧಾರಣೆಯಾಗಬಹುದು. ಜಾತ್ರೆಗೆ ಒಂದು ವಾರ ಮುಂಚಿತವಾಗಿ ಕಲ್ಯಾಣದುರ್ಗ, ರಾಯದುರ್ಗ, ಶಿವಮೊಗ್ಗ, ದಾವಣಗೆರೆ ನೂರಾರು ಮೈಲಿಗಳ ದೂರದಿಂದ ಭಕ್ತರು ಬರುತ್ತಾರೆ. ಜಾತ್ರೆಯ ವೇಳೆಗೆ ನೂರಾರು ವಿವಿಧ ವಾಹನಗಳು ಹಾಗೂ ಎತ್ತಿನಗಾಡಿಗಳು ಸೇರಿದಂತೆ ಎಲ್ಲವೂ ವಸತಿ ದಿಬ್ಬದಲ್ಲಿ ಬಿಡಾರ ಹಾಕಿಕೊಂಡು ಜಮಾಯಿಸುತ್ತಾರೆ. ಕಳ್ಳೆಗುಡಿ ಸುತ್ತಲೂ ಎತ್ತಿನ ಗಾಡಿ ಮತ್ತು ವಾಹನಗಳನ್ನು ನಿಲ್ಲಿಸಿ ವಾಹನ ಗಾಡಿ ಅಥವಾ ಟ್ರ್ಯಾಕ್ಟರ್, ಟೆಂಪೊ ಹೀಗೆ ಒಂದು ವಾಹನದಿಂದ ಮತ್ತೊಂದು ವಾಹನ ಅಥವಾ ಗಾಡಿಗೆ ಕಂಬಳಿ, ತಾಡಪಲ್‌ಗಳನ್ನು ಕಟ್ಟಿ ನೆರಳು ಮಾಡಿಕೊಳ್ಳುತ್ತಾರೆ.

ಲಾರಿ, ಬಸ್ಸು, ಟ್ರ್ಯಾಕ್ಟರ್, ಆಟೋ, ಟೆಂಪೊ ಮತ್ತು ಎತ್ತಿನಗಾಡಿಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಸೇರುತ್ತಾರೆ. ಮಜ್ಜನ ಬಾವಿ ಹಾಗೂ ಅಕ್ಕಮ್ಮಗಳ ಗುಡಿಸುತ್ತ ಎತ್ತಿನ ಗಾಡಿ, ಹಾಗೂ ವಾಹನಗಳನ್ನು ಬಿಟ್ಟಿರುತ್ತಾರೆ. ಕಳ್ಳೆಮುಳ್ಳಿನ ಗುಡಿ ಮೇಲೆ ಪಂಚಕಳಸ ಇಳಿಸಿದ ತಕ್ಷಣ ಪೆಟ್ಟಿಗೆ ದೇವರುಗಳನ್ನು ಕ್ಯಾತಪ್ಪ ನೆಲೆಯಾದ ಚನ್ನಮ್ಮನಾಗತಿಹಳ್ಳಿಗೆ ಹೊತ್ತು ಸಾಗಿಸುತ್ತಾರೆ. ರಾತ್ರಿ ಆ ಊರಿನ ಪ್ರಮುಖ ಬೀದಿಗಳಲ್ಲಿ ಉರುಮೆ ವಾದ್ಯದೊಂದಿಗೆ ದೇವರುಗಳ ಮೆರಣಿಗೆ ನಡೆಸುತ್ತಾರೆ. ದೇವರಿಗೆ ಮಣೇವು ಹಾಕಿಸಿ ಭಕ್ತರು ಕುಣಿಯುತ್ತಿರುತ್ತಾರೆ. ಲಾಟೀನು, ಗ್ಯಾಸ್‌ಲೈಟ್ ಕೆಲವರು ಅಲ್ಲಲ್ಲಿ ಬೆಂಕಿ ಹೊತ್ತಿಸಿಕೊಂಡು ಕುಳಿತಿರುತ್ತಾರೆ. ಗ್ರಾಮದಲ್ಲಿ ಬೀಡುಬಿಟ್ಟ ಗಾಡಿ ಅಥವಾ ವಾಹನಗಳ ಹತ್ತಿರ ಕೇತಪ್ಪನ ಬಗೆಗಿನ ಪದಗಳನ್ನು ಹೇಳುವುದರ ಮೂಲಕ ರಾತ್ರಿಯೆಲ್ಲಾ ಕಾಲ ಕಳೆಯುತ್ತಿರುತ್ತಾರೆ.

ಜಾತ್ರೆಯಲ್ಲಿ ಸಾವಿರಾರು ಸಂಖ್ಯೆಯಲ್ಲಿ ಜನ ಸೇರುತ್ತಾರೆ. ಕ್ಯಾತಪ್ಪನ ಜಾತ್ರೆಯಲ್ಲಿ ಬಂಧು ಬಾಂಧವರು, ಆಪ್ತ ಸ್ನೇಹಿತರು, ಒಟ್ಟಿಗೆಸೇರಿ ಕಷ್ಟ ಸುಖಗಳನ್ನು ಹಂಚಿಕೊಳ್ಳಲು, ಹೊಸಬರ ಜೊತೆಯಲ್ಲಿ ಸ್ನೇಹ ಸೌಹಾರ್ದ ಬೆಳೆಯಲು ಈ ಜಾತ್ರೆ ಅನುಕೂಲ ವಾತಾವರಣ ಕಲ್ಪಿಸುತ್ತದೆ. ವಿವಿಧ ಜಾತಿ ಧರ್ಮಗಳಿಗೆ ಸೇರಿದ ಜನರು ಪಾಲ್ಗೊಳ್ಳುತ್ತಾರೆ. ಹೀಗೆ ಭಿನ್ನ ಸಾಂಸ್ಕೃತಿಕ ನೆಲೆಯುಳ್ಳ ಜನರು ಒಟ್ಟಾಗಿ ಬೆರೆತು ಪರಸ್ಪರ ಸಂಬಂಧವನ್ನು ಭದ್ರವಾಗಿಸಿಕೊಂಡು ಹೊಂದಾಣಿಕೆ ಬದುಕನ್ನು ರೂಢಿಸಿಕೊಳ್ಳುತ್ತಾರೆ. ಬಾಂಧವ್ಯ ಕುದುರುತ್ತದೆ. ಸಾಮಾಜಿಕ ಸಮಾನತೆ ಏರ್ಪಡುತ್ತದೆ. ಸಾಮಾಜಿಕ ಬದುಕಿನಲ್ಲಿ ಸಾಮರಸ್ಯ ಉಂಟಾಗಿ ಶಾಂತಿ ಸುವ್ಯವಸ್ಥೆಯಿಂದ ಕೂಡಿರಲು ಸಾಧ್ಯವಾಗುತ್ತದೆ.

ಕ್ಯಾತಪ್ಪ ಒಂದೇ ಬುಡಕಟ್ಟು ಸಮುದಾಯದ ಆರಾಧ್ಯ ದೈವವಾಗಿದ್ದರೂ ಜಾತ್ರೆಯ ದಿನ ವಿವಿಧ ಜಾತಿ-ಧರ್ಮದವರು ಜಾತ್ರೆಗೆ ಬಂದು ತಾವು ಮಾಡಿಕೊಂಡಿದ್ದ ಹರಕೆ ತೀರಿಸಿ ಪೂಜೆ ಸಲ್ಲಿಸುತ್ತಾರೆ. ಸಾಂಸ್ಕೃತಿಕ ವೀರ ಕ್ಯಾತಪ್ಪ ಜನರ ಬದುಕಿನ ಜಡತೆಯನ್ನು ಹೋಗಲಾಡಿಸಿ, ಅವರಲ್ಲಿ ಹೊಸ ಚೈತನ್ಯ ತುಂಬಿ ಕ್ರಿಯಾಶೀಲರನ್ನಾಗಿಸುವತ್ತ ಈ

ಜಾತ್ರೆ ನೆರವಾಗುತ್ತದೆ. ಜಾತ್ರೆಯಲ್ಲಿ ಹದಿಹರೆಯದ ಹುಡುಗ-ಹುಡುಗಿಯರು ಹೊಸ ಬಟ್ಟೆಗಳನ್ನು ತೊಟ್ಟು ಒಲವಿನ ಕಳೆಯನ್ನು ಚಿಮ್ಮುತ್ತಾ, ಜಾತ್ರೆಯ ಪ್ರಮುಖ ಬೀದಿಗಳಲ್ಲಿ ಸುತ್ತುವುದನ್ನು ಕಾಣಬಹುದು. ಅಕ್ಕಪಕ್ಕದ ಹಳ್ಳಿಯವರಿಗಂತೂ ಕ್ಯಾತಪ್ಪನ ಜಾತ್ರೆ ಬಂತೆಂದರೆ ವರ್ಷದುದ್ದಕ್ಕೂ ಕೂಡಿಟ್ಟ ಹಣವನ್ನು ತನ್ನ ಸೊಸೆಯಂದಿರಿಗೆ, ತಂಗಿಯರಿಗೆ ಖರ್ಚು ಮಾಡುತ್ತಾರೆ. ಅದರಲ್ಲಿ ಹೆಣ್ಣು, ಗಂಡುಗಳ ಪರಸ್ಪರ ನೋಟಕ್ಕೊಳಗಾಗಿ ಪ್ರಣಯಿಗಳಾಗುವ ಸಂದರ್ಭಗಳು ಬಹಳ. ಕೆಲವು ಸಲ ವಿವಾಹ ಕಾರ್ಯಗಳು ಜರುಗುತ್ತವೆ. "ಅಕ್ಕನಿದ್ದರೆ ಬಾವ, ರೊಕ್ಕವಿದ್ದರೆ ಜಾತ್ರೆ" ಎಂಬ ಗಾದೆಗನುಗುಣವಾಗಿ ರೊಕ್ಕವಿಲ್ಲದಾಗ ಜನಪದರು ಸಾಲ ಮಾಡಿಯಾದರೂ, ಮೋಜಿನ ದರ್ಬಾರು ಮಾಡಿಯೇ ತೀರುತ್ತಾರೆ. ಜಾತ್ರೆಯಲ್ಲಿ ಯುವಕರ ಸಂಭ್ರಮ ಒಂದು ಬಗೆಯಾದರೆ, ಮಕ್ಕಳದು ಇನ್ನೊಂದು ಬಗೆಯದು. ದೊರಕುವ ಬೆಂಡು, ಬತ್ತಾಸು, ಆಟಿಕೆಯ ಸಾಮಾನುಗಳಾದ ಬಲೂನ್, ಪೀಪಿ, ಕಾರು, ಜೀಪು, ಬಸ್ಸು, ಲಾರಿ, ಬ್ಯಾಟು, ಬಾಲು, ಕೊಳಲು, ಕನ್ನಡಕ, ಏರೋಪ್ಲೇನ್, ಮೊಬೈಲ್, ರೈಫಲ್, ಬಣ್ಣದ ಬೊಂಬೆ ಮೊದಲಾದುವುಗಳು ಮಕ್ಕಳ ಮನಸ್ಸನ್ನು ಸೆಳೆಯುತ್ತವೆ.

ಹೀಗೆ ಕ್ಯಾತಪ್ಪನ ಜಾತ್ರೆ ಆಬಾಲವೃದ್ಧರೆಲ್ಲರ ಮೇಲೆ ರಮಣೀಯ ಪರಿಣಾಮವನ್ನು ಬೀರುವುದರಿಂದಾಗಿಯೇ ಇಂದಿನ ಆಧುನಿಕ ಬದುಕಿನಲ್ಲಿ ಹೊಸತನ ಉಳಿಸಿಕೊಂಡು ಬರಲು ಸಾಧ್ಯವಾಗಿದೆ. ಆಧುನಿಕ ಜೀವನ ಶೈಲಿ ಮತ್ತು ಮಾಧ್ಯಮಗಳ ಭರಾಟೆಯಿಂದ ದೈವಿಕಶ್ರದ್ಧೆ, ನಂಬಿಕೆ, ಸಂಪ್ರದಾಯ-ಆಚರಣೆ ಮುಂತಾದುವುಗಳು ಕಣ್ಮರೆಯಾಗುತ್ತಿರುವ ಈ ಸಂದರ್ಭದಲ್ಲಿ ಕ್ಯಾತಪ್ಪನ ಜಾತ್ರೆ ಇವುಗಳೆಲ್ಲವನ್ನು ತನ್ನೊಡಲಲ್ಲಿ ಇರಿಸಿಕೊಂಡಿದೆ. ಇಲ್ಲಿನ ಜನಜೀವನ, ಆಚಾರ-ವಿಚಾರ, ಊಟೋಪಚಾರ, ವಸ್ತ್ರವೈವಿಧ್ಯ, ಹಬ್ಬಹರಿದಿನಗಳು, ಸಂಪ್ರದಾಯ ಆಚರಣೆ, ನಂಬಿಕೆ, ವೃತ್ತಿಗಳು, ಆರ್ಥಿಕ ವಿಚಾರಗಳು, ಜಾನಪದ, ಭಾಷಿಕ ವಿಚಾರಗಳು ಮುಂತಾದ ವಿಷಯಗಳು ಅಧ್ಯಯನಕ್ಕೆ ಪೂರಕವಾದ ಅಂಶಗಳನ್ನು ಒದಗಿಸುತ್ತವೆ. ಚಲನಶೀಲವಾದ ಸಮಾಜದ ಬೆಳವಣಿಗೆಗೆ, ಬದಲಾವಣೆಗೆ ಕಾರಣಗಳೆಂದರೆ, ಶಿಕ್ಷಣ ಮಾಧ್ಯಮಗಳು, ಸಾರಿಗೆ ಸಂಪರ್ಕ, ವೈಚಾರಿಕತೆ, ಸಾಮಾಜಿಕ ಕಟ್ಟಳೆಗಳು ಪ್ರಮುಖವಾಗಿವೆ.

ನಮ್ಮ ಸಾಮಾಜಿಕ ವ್ಯವಸ್ಥೆಯ ಲಕ್ಷಣಗಳಲ್ಲಿ ಪ್ರಮುಖವಾದುದು ಎಂದರೆ 'ಜಾತಿ'. ವೈದಿಕರ ದಾಳಿಯ ಪರಿಣಾಮವಾಗಿ ಹುಟ್ಟಿ ಬೆಳೆದಿದೆ. ದ್ರಾವಿಡರ ನಾಡಿನಲ್ಲಿನ ಪ್ರತಿಯೊಂದು ಜಾತಿಯ ಉಗಮದ ಕಥೆ, ಐತಿಹ್ಯಗಳು ಈ ಮಾತನ್ನು ಸಮರ್ಥಿಸುತ್ತವೆ. ಹೊಲೆ ಮಾದಿಗರು ಸೇರಿದಂತೆ ಉಳಿದೆಲ್ಲಾ ದ್ರಾವಿಡ ಜಾತಿಯವರು ಹಲವಾರು ವೃತ್ತಿಗಳನ್ನು ಮಾಡುತ್ತ ಬರುತ್ತಾರೆ. ವೃತ್ತಿಯ ಆಧಾರದಲ್ಲಿ ಜಾತಿ ಎಂಬ ಸೂತ್ರವನ್ನು

ಜಾತ್ರೆಯಲ್ಲಿನ ಆಚರಣೆಗಳು ಪುಷ್ಟೀಕರಿಸುತ್ತವೆ. "ಜಾತಿ ವ್ಯವಸ್ಥೆ ದ್ರಾವಿಡ ಮೂಲದ್ದಲ್ಲ, ಇದು ವೈದಿಕ ಮೂಲದ್ದು."[೧೭] ಜಾತಿ ವ್ಯವಸ್ಥೆ ದ್ರಾವಿಡರ ಮೇಲೆ ಹೇರಲ್ಪಟ್ಟ ನಂತರದಲ್ಲಿ ಜಾತಿ ವ್ಯವಸ್ಥೆಯಂತ ಹೀನ ಸ್ಥಿತಿ ಒಂದು ಪರಂಪರೆಯಾಗಿ ಬೆಳೆಯಿತು. ಇದರ ಹಿಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆಗಳು ಜಾತಿ–ವರ್ಗಗಳ ಮಧ್ಯೆ ಮೇಲು–ಕೀಳುಗಳೆಂಬ ಭಾವನೆಗಳಿದ್ದಿಲ್ಲ. ಅಂದರೆ ಕೃಷಿಕರು, ಪಶುಪಾಲಕ ವಲಸೆಗಾರ ಬುಡಕಟ್ಟು ಸಮುದಾಯಗಳ ಮಧ್ಯೆ ಸಹಕಾರ, ಸಹಬಾಳ್ವೆಯು ಸ್ಥಿರವಾಗಿತ್ತು. ವೈದಿಕರ ಆಕ್ರಮಣದಿಂದಾಗಿ ಈ ತರದ ಸಮನ್ವಯದ ಸಂಸ್ಕೃತಿಯ ಬೆಳವಣಿಗೆ ಸ್ಥಗಿತಗೊಂಡಿತು. ಆದ್ದರಿಂದಲೇ ಜಾತಿ–ವರ್ಗಗಳ ನಡುವಿನ ಹೇರಿಕೆಯ ಸಮಯವು ಒಂದು ನಿರ್ದಿಷ್ಟ ಸಂಕ್ರಮಣದ ಸ್ಥಿತಿಯನ್ನು ಸೂಚಿಸುತ್ತದೆ. ಇದೇ ಸಂದರ್ಭದಲ್ಲಿ ಪರಿವರ್ತನೆಯಾದ ಗ್ರಾಮ ಪಟ್ಟಣಗಳಲ್ಲಿ ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿಗೆ ತಕ್ಕಂತೆ ದಲಿತರು, ಪೂಜಾರಿಗಳು, ಎಲ್ಲಾ ಜಾತಿ ಜನಾಂಗದವರು ಅವರವರ ಅಂತಸ್ಥಿತಿಗೆ ತಕ್ಕಂತೆ ಆಯಾಗಾರಿಕೆಯ ಹಕ್ಕುದಾರರಾದರು. ಜಾತಿಯ ಮೇಲು ಕೀಳಿನ ಸಾಂಸ್ಕೃತಿಕ ಪರಂಪರೆಯಲ್ಲಿ ದ್ರಾವಿಡರ, ಅದರಲ್ಲೂ ಜನಪದರ ಸಾಂಸ್ಕೃತಿಕ ವೈಶಿಷ್ಟವನ್ನು ಗುರುತಿಸಲು ಇದರಿಂದ ಸಾಧ್ಯವಾಗುತ್ತದೆ.

ಜಾತ್ರಾ ಆಚರಣೆಗಳು ಸುಲಲಿತ ಹಾಗೂ ಯಶಸ್ವಿಯಾಗಿ ನಡೆಯಲು ಜಾತಿವಾರು ಶ್ರಮ ವಿಭಜನೆಯನ್ನು ಮಾಡಲಾಗಿದೆ. ಜಾತ್ರೆಯ ಸಂದರ್ಭದಲ್ಲಿ ನಡೆಯುವ ಪ್ರತಿಯೊಂದು ಆಚರಣೆಗಳನ್ನು ಜಾತಿವಾರು ಹಂಚಿಕೆ ಮಾಡಲಾಗುತ್ತದೆ. ತಲೆ ಮಾರಿನಿಂದ ತಲೆ ಮಾರಿಗೆ ಧಾರ್ಮಿಕ ವೃತ್ತಿಗಳನ್ನು ವರ್ಗಾಯಿಸುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಜಾತಿಯ ವಿಶೇಷವಾಗಿದೆ. ಇದನ್ನು ಕೇತಪ್ಪನ ಜಾತ್ರೆ ನಡೆಸುವ ದಿನದಂದು ಕಾಣಬಹುದಾಗಿದೆ. ಬುಡಕಟ್ಟು ಸಮುದಾಯದ ಜಾತ್ರೆಗಳು ಪರಂಪರಾಗತವಾದ ಜನಪದರ ಜೀವನ ಮೌಲ್ಯಗಳನ್ನು ಯಥಾಸ್ಥಿತಿಯನ್ನು ಕಾಪಾಡಿಕೊಂಡು ಬರುತ್ತಿವೆ. ಅದು ಪ್ರಗತಿಪರವಾಗಿ ಆಲೋಚಿಸುವ ವೈಜ್ಞಾನಿಕತೆಗೆ ಬದಲಾಗಿ, ಮೂಢನಂಬಿಕೆಗಳನ್ನು ಗಟ್ಟಿಗೊಳಿಸುತ್ತಿರುವುದು ಜಾತ್ರೆಯ ಆಚರಣೆಗಳಲ್ಲಿ ಗುರುತಿಸಬಹುದು.

ಜಾತ್ರೆಗಳು ಗ್ರಾಮೀಣ ಜನತೆಯ ಹಿಂದಿನ, ನೋವು ನಲಿವುಗಳ ಹಿಂದಿನ ಸತ್ಯ ಸಂಗತಿಗಳಾಗಿ ರೂಪುಗೊಂಡಿದ್ದರೂ, ಜಾತಿ ವ್ಯವಸ್ಥೆಯನ್ನು ಎತ್ತಿಹಿಡಿಯುತ್ತಿವೆ. ಇದನ್ನು ಜಾತ್ರೆಯಲ್ಲಿ ಪ್ರದರ್ಶನಗೊಳ್ಳುತ್ತಿರುವ ಕಲಾಮೇಳಗಳಾದ ಹಲಗೆ ಬಡಿತ, ಮಣೇವು ಕುಣಿತ, ಕೋಲಾಟ, ಉರುಮೆ ಕುಣಿತ ಇನ್ನು ಮುಂತಾದವುಗಳು ಅಭಿವ್ಯಕ್ತಿಸುತ್ತವೆ. ಜಾತ್ರೆಯಲ್ಲಿ ನಡೆಯುವ ಆಚರಣೆಗಳನ್ನು ವಿಧಿ ವಿಧಾನಗಳನ್ನು ವೀಕ್ಷಣೆ ಮಾಡಿದಾಗ ಅಲ್ಲಿ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಗೆ ಪ್ರತಿಯಾಗಿ ಹುಟ್ಟಿದ ನೆಲೆಗಳು ಗೋಚರಿಸುತ್ತವೆ.

ಜಾತ್ರೆಯಲ್ಲಿ ಅನುಸರಿಸಿಕೊಂಡು ಬರುತ್ತಿರುವ ನಂಬಿಕೆ, ಸಂಪ್ರದಾಯ, ಆಚರಣೆಗಳ ಅಧ್ಯಯನವು ಜನಪದ ಸಂಸ್ಕೃತಿಯ ಮೂಲ ಸ್ವರೂಪವನ್ನು ಕಂಡುಕೊಳ್ಳಲು ಸಹಾಯಕವಾಗಿವೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿನ ರೀತಿ-ನೀತಿಗಳು ಜನಪದ ಸಂಸ್ಕೃತಿಯ ಮೇಲೆ ಸಾಕಷ್ಟು ಆಕ್ರಮಣ ನಡೆಸಿವೆ. ಇದರ ಪರಿಣಾಮವಾಗಿ ಜಾತಿ, ವರ್ಗ ಮತ್ತು ಮತೀಯವಾದ ಸಂಘರ್ಷಗಳು ಸಮಾಜದ ಮೇಲೆ ಉಂಟಾಗುತ್ತಿರುವ ಪರಿಣಾಮಗಳನ್ನು ಗುರುತಿಸಲಾಗುತ್ತಿದೆ. ಕ್ಯಾತಪ್ಪನ ಜಾತ್ರೆಯ ನೆಲೆಯಲ್ಲಿ ಸಕಾರಾತ್ಮಕ ಮತ್ತು ನಕಾರಾತ್ಮಕ ನಿಲುವಿನಲ್ಲಿ ನಡೆಯುತ್ತಿರುತ್ತದೆ. ಹೀಗಿದ್ದರೂ ದೇವರ ಭಕ್ತಿಗೆ ಮಾನವನಲ್ಲಿರುವ ಭಾವನಾತ್ಮಕ ಸಂಬಂಧವೇ ಮುಖ್ಯವಾಗಿರುತ್ತದೆ. ಭಕ್ತಿ ವಿಷಯದಲ್ಲಿ ಜಾತಿ ಇಣುಕಿ ಹಾಕುವುದಿಲ್ಲ. ಯಾವುದೇ ಜಾತ್ರೆಯಾದರೂ ಸ್ವಸ್ಥ ಸ್ವಾರ್ಥರಹಿತ, ಪರಿಶುದ್ಧ ಮಾನಸಿಕ ನೆಲೆಯಲ್ಲಿ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಭಕ್ತರ ಭಾವನೆಯನ್ನು ಪರಿಗಣಿಸಿ ಸತ್ಯ, ಶುದ್ಧ, ಶ್ರೇಷ್ಠ ಮನಸ್ಥಿತಿಯ ಭಾವನೆಗಳಿಗೆ ಬಹುಬೇಗ ದೇವರು ಹತ್ತಿರವಾಗುತ್ತಾನೆ. ಸಕಲ ಸೌಭಾಗ್ಯಗಳನ್ನು ಕರುಣಿಸಿ ಕಾಪಾಡುತ್ತಾನೆ ಎಂಬುವುದು ಜನಪದ ನಂಬಿಕೆಯಾಗಿದೆ. ಹೀಗೆ ಹುಟ್ಟು, ಸಾವು, ಆಚಾರ-ವಿಚಾರ, ನಂಬಿಕೆ, ರೂಢಿ, ಸಂಪ್ರದಾಯ, ಸಮಾಜದ ಕಟ್ಟಳೆ ಕಾನೂನು, ಹಬ್ಬ ಹರಿದಿನ ಸಂಸ್ಕೃತಿ, ಜಾತ್ರೆ, ಉತ್ಸವ ಮುಂತಾದ ಜಾನಪದೀಯವಾದ ಅಂಶಗಳನ್ನು ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ.

**೫.೫ ಧಾರ್ಮಿಕ ತಾರ್ಕಿಕತೆ**

ಮಾನವ ಬದುಕಿನಲ್ಲಿ 'ಧರ್ಮ' ಪ್ರಮುಖವಾದ ಪಾತ್ರವಹಿಸುತ್ತದೆ. ಜೊತೆಗೆ ಧರ್ಮವು ಆದಿಯಿಂದಲೂ ಮಾನವನಿಗೆ ಆಸಕ್ತ ವಿಷಯವಾಗಿದೆ. ಧರ್ಮದ ಕಲ್ಪನೆ ಯಾವಾಗ ಮೂಡಿತು ಅಥವಾ ಉಗಮವಾಯಿತು ಎಂಬುವುದನ್ನು ವ್ಯಾಖ್ಯಾನಿಸುವುದು ಕಷ್ಟ. ಮನುನಿಗೆ ಜೈವಿಕ, ಆರ್ಥಿಕ ಹಾಗೂ ಸಾಮಾಜಿಕ ಅಗತ್ಯತೆಗಳು ಬೇಕೆನಿಸಿದಂತೆ ಅದೇ ಕಾಲದಲ್ಲಿ ಧಾರ್ಮಿಕತೆ ಅಗತ್ಯವೆನಿಸಿರಬೇಕು. ಆಗ ತನ್ನ ಬದುಕಿನಲ್ಲಿ ಭೌತಿಕವಾದ ಅಗತ್ಯತೆಗಳನ್ನು ಈಡೇರಿಸಿಕೊಂಡ ನಂತರವೂ, ಅತೃಪ್ತನಂತೆ ಪಾರಮಾರ್ಥಿಕ ವಿಷಯಗಳತ್ತ ಆಸಕ್ತನಾದನು. ಈ ಸಂದರ್ಭದಲ್ಲಿ ಮಾನವನಿಗೆ ಭೌತಿಕ ಪ್ರಪಂಚವನ್ನು ನಿಯಂತ್ರಿಸುವ ಶಕ್ತಿಯೊಂದಿದೆ ಎಂದು ನಂಬಿ ಆ ಶಕ್ತಿಯನ್ನು ಆರಾಧಿಸಲು ಉತ್ಸುಕನಾದನು. ಆ ದಿವ್ಯ ಶಕ್ತಿಯ ಆಶೀರ್ವಾದವನ್ನು ಪಡೆಯಲು ಮುಂದಾದನು. ಇವೆಲ್ಲವೂ ಮಾನವನಲ್ಲಿ ಧಾರ್ಮಿಕ ಭಾವನೆಗಳು ಬೆಳೆಯಲು ಕಾರಣವಾಗಿವೆ ಎನ್ನಬಹುದು. "ಮನುಷ್ಯ ಕೇವಲ ಆಹಾರದಿಂದ ಬದುಕಲಾರ."[೧೮] (ಮ್ಯಾನ್ ಕೆನಾಟ್ ಲೈವ್ ಬೈ ಬ್ರೆಡ್ಡ್ ಅಲೋನ್) ಎನ್ನುವ ಬೈಬಲ್ಲಿನ ವಾಕ್ಯವು ಈ ಧಾರ್ಮಿಕತೆಯ ಅಗತ್ಯತೆಯನ್ನು ಪ್ರಾಮುಖ್ಯತೆಯನ್ನು ವ್ಯಕ್ತಪಡಿಸುತ್ತದೆ.

ಈ ಎಲ್ಲಾ ಹಿನ್ನೆಲೆಯನ್ನು ಗಮನಿಸಿದಾಗ ಆದಿಯಿಂದಲೇ ಧರ್ಮವು ಹುಟ್ಟಿಕೊಂಡಿದೆ. ಮತ್ತು ಮಾನವನಿಗೆ ಅಗತ್ಯವೂ ಆಗಿದೆ. ಧರ್ಮವನ್ನು ಕುರಿತು ಡಿ.ವಿ.ಗುಂಡಪ್ಪನವರು ಹೀಗೆ ವ್ಯಾಖ್ಯಾನಿಸುತ್ತಾರೆ. ಧರ್ಮವೆಂದರೆ ಧರಿಸುವುದು. ಯಾವುದು ಜೀವನವನ್ನು ಧರಿಸಿದೆಯೋ ಅದು ಧರ್ಮ. "ಪ್ರಪಂಚ ವ್ಯವಹಾರದಲ್ಲಿ ಪ್ರಪಂಚ ಮೂಲವನ್ನು ಲಕ್ಷ್ಯದಲ್ಲಿರಿಸಿಕೊಂಡು ನಡೆಯುವ ನಡವಳಿಕೆ ಧರ್ಮ"[೧೯] ಎಂದು ಹೇಳುತ್ತಾರೆ. ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು, ಸರ್ವ ಚೇತನವಾದ, ಶಕ್ತಿವಾದ, ಪ್ರಕೃತಿವಾದ, ಬಹುದೇವತಾವಾದ, ಏಕದೇವತಾವಾದ, ಇತ್ಯಾದಿ ಸಿದ್ಧಾಂತದ ಚೌಕಟ್ಟಿನಲ್ಲಿ ಧರ್ಮದ ಅರ್ಥವನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಆದರೆ ಅದು ಇವುಗಳೆಲ್ಲವನ್ನು ಒಳಗೊಂಡು ಇನ್ನೂ ವ್ಯಾಪಕವಾಗಿ ಬೆಳೆದಿರುವ ಪರಿಭಾವನೆಯಾಗಿದೆ. ಪ್ರಸಿದ್ಧ ಮನಃಶಾಸ್ತ್ರಜ್ಞ ಸಿ.ಜೆ.ಯೂಂಗ್ ಹೇಳುವಂತೆ "ಧರ್ಮಶ್ರದ್ಧೆ ಇಲ್ಲದಿದ್ದರೆ ಪರಿಪೂರ್ಣ ವ್ಯಕ್ತಿತ್ವವನ್ನು ಸಾಧಿಸಿಕೊಳ್ಳಲು ಸಾಧ್ಯವಿಲ್ಲ."[೨೦] ಈ ಮಾತು ಮಾನವನ ಬದುಕಿನಲ್ಲಿ ಧರ್ಮ ಹೇಗೆ ಅನಿವಾರ್ಯ ಎಂಬುವುದನ್ನು ಸೂಚಿಸುತ್ತದೆ. ವಿವಿಧ ವಸ್ತು, ರೂಪ, ಆಕಾರ, ಸ್ಥಳಗಳಲ್ಲಿ ದೇವರನ್ನು ಗುರುತಿಸುವ ಪಂಥಗಳೇ ಮುಂದೆ ವಿವಿಧ ಧರ್ಮಗಳಾಗಿ ಬೆಳೆದು ಬಂದ ವಿಚಾರವನ್ನು ಧರ್ಮಶಾಸ್ತ್ರದ ಇತಿಹಾಸ ತಿಳಿಸುತ್ತದೆ.

ರಾಮಾನುಚಾರ್ಯರು ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದು ವೈಷ್ಣವ ತತ್ವನ್ನು ಪ್ರತಿಪಾದಿಸಿ, ಧಾರ್ಮಿಕ ಕ್ಷೇತ್ರಗಳಲ್ಲಿ ವೈಷ್ಣವ ಧರ್ಮದ ಅಸ್ತಿತ್ವವನ್ನು ಗಟ್ಟಿಯಾಗಿಸಿದ್ದಾರೆ. ಈ ಎಲ್ಲಾ ಪರಿಭಾವನೆಗಳ ಹಿನ್ನಲೆಯಲ್ಲಿ ವೈದಿಕ ಧರ್ಮ ಪ್ರಾಧಾನ್ಯವನ್ನು ಹೊಂದಿದೆ. ಇಲ್ಲಿನ ವಿವಿಧ ಧರ್ಮಗಳ ಜನಪದರು ಧರ್ಮ ಮತ್ತು ದೇವರುಗಳ ಬಗ್ಗೆ ನಂಬಿಕೆಯುಳ್ಳವರು. ದೇವನೊಬ್ಬ ನಾಮ ಹಲವು ಎಂಬಂತೆ ದೇವರನ್ನು ಆರಾಧಿಸುವ, ಪ್ರಾರ್ಥಿಸುವ ದಾರಿಗಳು ಮಾತ್ರ ಭಿನ್ನವಾಗಿವೆ. ಆದರೂ ಈ ನಂಬಿಕೆಯ ಭಿನ್ನತೆ ಇಲ್ಲಿನ ಸಾಮಾಜಿಕ ಬದುಕಿನ ಸಾಮರಸ್ಯಕ್ಕೆ ಯಾವ ರೀತಿಯಲ್ಲಿಯೂ ಕುಂದು ತಂದಿಲ್ಲ. ವಿವಿಧತೆಯಲ್ಲಿ ಏಕತೆ ಎಂಬ ತತ್ವಕ್ಕೆ ಅನುಗುಣವಾಗಿ ಪರಸ್ಪರ ಹೊಂದಾಣಿಕೆಯಿಂದ ಬದುಕುತ್ತಿದ್ದಾರೆ. ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಎಲ್ಲರ ಸಹಕಾರವಿರುವುದನ್ನು ಕಾಣಬಹುದು. ಇತ್ತೀಚೆಗೆ ಸಾಮಾಜಿಕ ಆಚರಣೆಗಳಿಗಿಂತ ಧಾರ್ಮಿಕ ಆಚರಣೆಗಳು ಹೆಚ್ಚು ಮಹತ್ವ ಪಡೆದುಕೊಂಡಿವೆ. ಈ ಆಚರಣೆಗಳು ಬುಡಕಟ್ಟು ಸಮುದಾಯದ ಜನರ ಬದುಕಿನ ಬಹುಭಾಗವನ್ನು ಆವರಿಸಿಕೊಂಡಿವೆ. ಪಶುಪಾಲಕ ಆರಾಧಕ ಸಂಸ್ಕೃತಿಯಿಂದ ಬಂದ ಕಾಡುಗೊಲ್ಲರು ಮೂಲತಃ ಶಿವಾರಾಧಕರು, ಕರ್ನಾಟಕ್ಕೆ ವೈಷ್ಣವಧರ್ಮ ಕಾಲಿಟ್ಟ ನಂತರ ಇವರು, ಅದರ ಪ್ರಭಾವಕ್ಕೆ ಒಳಗಾದರು. ಶಿವ, ವಿಷ್ಣು ಇಬ್ಬರನ್ನು ಆರಾಧಿಸುವ ಇವರಲ್ಲಿ ಒಮ್ಮೊಮ್ಮೆ ವೈಷ್ಣವ ಆರಾಧನೆಯೇ ಮೈಲುಗೈ

ಪಡೆಯುತ್ತದೆ. ಇವರಲ್ಲಿ ಶೈವ ಮತ್ತು ವೈಷ್ಣವಗಳ ಸಂಗಮವನ್ನು ಕಾಣಬಹುದು. ಹೀಗಾಗಿ ವೈಷ್ಣವ ದೈವಗಳನ್ನು ಕರ್ಮ ಕಳೆದುಕೊಳ್ಳುವ 'ಅಮಾಸೆ' ದೇವರುಗಳನ್ನಾಗಿ ಬಳಸಿಕೊಂಡಿದ್ದಾರೆ. ತಮ್ಮ ಮೂಲ ದೈವದ ದೇವರುಗಳನ್ನು 'ಹುಣ್ಣಿಮೆ' ದೇವರುಗಳಾಗಿ ಮುಂದುವರೆಸಿಕೊಂಡು ಹೋಗಿರುವುದನ್ನು ಗುರುತಿಸಬಹುದು. ಇವರ ಪೂರ್ವಜರು ಶಕ್ತಿಯ ಆರಾಧಕರೂ ಆಗಿದ್ದಾರೆ. ಶಿವನನ್ನೇ ವಿವಿಧ ರೂಪದಲ್ಲಿ ಆರಾಧಿಸುವ ಈ ಸಮುದಾಯದ ದೇವಸ್ಥಾನಗಳು, ಸಾಂಸ್ಕೃತಿಕ ನೆಲೆಗಳಿರುವುದು ಚಿತ್ರದುರ್ಗದ ಜಿಲ್ಲೆಯಲ್ಲೇ. ಹೀಗಾಗಿ ಚಿತ್ರದುರ್ಗ ಬುಡಕಟ್ಟು ಸಂಸ್ಕೃತಿಗಳ ಸಾಂಸ್ಕೃತಿಕ ಕೇಂದ್ರವಲ್ಲದೆ, ಧಾರ್ಮಿಕ ಕೇಂದ್ರವೂ ಹೌದು. ಆದ್ದರಿಂದ ಈ ಪ್ರದೇಶ ಕಾಡುಗೊಲ್ಲರ ಚರಿತ್ರೆಯಲ್ಲಿ ಸಾಂಸ್ಕೃತಿಕ ಮಹತ್ವ ಪಡೆದುಕೊಂಡಿದೆ.

"ಶಿವನನ್ನು ವಿವಿಧ ರೂಪದಲ್ಲಿ ಆರಾಧಿಸುವ ಲಿಂಗ ದೈವಗಳ ಬಗೆಗೂ ಕತೆ, ಕಾವ್ಯ ಹಾಗೂ ಪುರಾಣಗಳನ್ನು ಕಟ್ಟಿ ಹಾಡಿದ್ದಾರೆ."[೨೧] ಈ ಲಿಂಗ ದೈವಗಳ ಬಗ್ಗೆ ಹುಟ್ಟಿಕೊಂಡಿರುವ ಮೌಖಿಕ ಕಾವ್ಯಗಳನ್ನು ಗಮನಿಸಿದಾಗ ಎತ್ತಪ್ಪ, ಜುಂಜಪ್ಪನ ರೀತಿಯಲ್ಲಿ ಕ್ಯಾತಪ್ಪ, ಚಿತ್ತಯ್ಯ, ಕಾಟಯ್ಯ, ಪಾತಪ್ಪ ಈ ಲಿಂಗ ದೈವಗಳು ಸಹ ಸಾಂಸ್ಕೃತಿಕ ವೀರರೇ ಎನ್ನಬಹುದು. ಆದರೆ ಇವರು ಪುರಾಣೀಕರಣದ ಕೆಸರಿನಲ್ಲಿ ಹೂತು ಹೋಗಿರುವುದನ್ನು ಗಮನಿಸಬಹುದು. ಆದರೂ ಜಾನಪದ ಅವುಗಳ ಮೂಲವನ್ನು ಇಂದಿಗೂ ಜೀವಂತವಾಗಿ ಹಿಡಿದಿಟ್ಟುಕೊಂಡಿದೆ. ಚಿತ್ತಯ್ಯ, ಚಿತ್ರಲಿಂಗನಾಗಿ, ಕಾಟಯ್ಯ ಕಾಟಮಲಿಂಗನಾಗಿ, ಪಾತಪ್ಪ ಪಾತೇಲಿಂಗನಾಗಿ ಕ್ಯಾತಪ್ಪ ಕ್ಯಾತೇಲಿಂಗ ಅಥವಾ ಲಿಂಗಣ್ಣನಾಗಿ, ಈರಣ್ಣ ಕೆಂಜೆಡೆ ಮಹಾಲಿಂಗನಾಗಿ, ರಾಮಯ್ಯ ರಾಮಲಿಂಗನಾಗಿ ಇಂದಿಗೂ ಆರಾಧನಾ ಚಲಾವಣೆಯಲ್ಲಿದ್ದಾರೆ.

ಚಿತ್ರಲಿಂಗನ ಮೂಲ ನೆಲೆ ಹೊಳಲ್ಕೆರೆ ತಾಲ್ಲೂಕಿನ ಚಿತ್ರಹಳ್ಳಿಯಲ್ಲಿದ್ದರೆ, ಕಾಟಮಲಿಂಗನ ನೆಲೆ ಹಿರಿಯೂರು ತಾಲ್ಲೂಕಿನ ಇಕ್ಕನಹಳ್ಳಿಯಲ್ಲಿದೆ. ಇವರಿಬ್ಬರು ಪುರಾಣ ಪುರುಷರೆಂತಲೂ ಕಾಡುಗೊಲ್ಲರು ತಮ್ಮ ಮಹಾ ಕಾವ್ಯಗಳಲ್ಲಿ ಕರೆದುಕೊಂಡಿದ್ದರೂ ಇವರಿಬ್ಬರು, ಚಿತ್ರಗಿರಿಯ (ಚಿತ್ರದುರ್ಗದ) ದೊರೆಗಳು, ಬೇಟೆಗೆ (ಆಂಧ್ರದ ಕಲ್ಯಾಣದುರ್ಗ ತಾಲ್ಲೂಕಿನ) ಬೆಸ್ತರಹಳ್ಳಿಗೆ ಹೋದಾಗ, ಬ್ರಾಹ್ಮಣ ಬೊಮ್ಮೈಲಿಂಗನ ಮಗಳು ಗಂಗೆ ಮಾಳಮ್ಮನನ್ನು ಕಂಡು ಚಿತ್ತಯ್ಯ ಮೋಹಗೊಳ್ಳುತ್ತಾನೆ. ಬೊಮ್ಮೈಲಿಂಗ ಹಾಕಿದ ಎಲ್ಲ ಸವಾಲುಗಳನ್ನು ಸಹೋದರ ಕಾಟಯ್ಯನ ಸಹಾಯದಿಂದ ಗೆದ್ದು ನೆಲ ಮಾಳಿಗೆಯಲ್ಲಿ ಬಚ್ಚಿಟ್ಟಿದ್ದ ಭೂ ಚಕ್ರದ ಗೊಡಗು ಹರಗೆ ತರುತ್ತಾನೆ. ಈ ಕತೆಯ ಕೊನೆಯಲ್ಲಿ ಕಂಡುಬರುವ ಸಹೋದರ ಓಬಳ ನರಸಿಂಹ(ಓಬಳಪತಿ). ಈ ಕತೆ ಶೈವ ಹಾಗೂ ವೈಷ್ಣವ ಎರಡು ಸಂಸ್ಕೃತಿಗಳ ಸಮ್ಮಿಲನವನ್ನು ಹೇಳುವಂತಿದೆ. ಕೊನೆಗೆ ಚಿತ್ತಯ್ಯನಿಗೂ ಮತ್ತು ಗಂಗಮಾಳಮ್ಮನಿಗೂ ವಿವಾಹ ಆಗುತ್ತದೆ.

ಕಾಡುಗೊಲ್ಲರ ಮೂಲ ಕಟ್ಟೆಮನೆಗಳಲ್ಲಿ ಬೆಸ್ತರಹಳ್ಳಿಯು ಒಂದು. ಇಲ್ಲಿ ಬೊಮ್ಮದೇವರ ಗುಡಿ ಇದ್ದು ಅವನನ್ನು ಕೇಲು(ಕುಂಭ)ಗಳ ರೂಪದಲ್ಲಿ ಆರಾಧಿಸಲಾಗುತ್ತಿದೆ. ಕ್ಯಾತೇಲಿಂಗನ ಮೂಲ ನೆಲೆ ಚನ್ನಮ್ಮನಾಗತಿಹಳ್ಳಿ ಗ್ರಾ.ಪಂ.ವ್ಯಾಪ್ತಿಯ ಪುರ್ಲೆಹಳ್ಳಿ ವಸತಿ ದಿಬ್ಬದಲ್ಲಿದೆ. ಆದರೆ ಭಕ್ತರು ವಸತಿ ದಿಬ್ಬದಿಂದ ಬೆನವವೊಂದನ್ನು ತೆಗೆದುಕೊಂಡು ಹೋಗಿ ಅದನ್ನು ಚನ್ನಮ್ಮನಾಗತಿಹಳ್ಳಿಯಲ್ಲಿಯೇ ಇಟ್ಟು ಪೂಜಿಸಿ, ಆರಾಧಿಸುತ್ತಿದ್ದಾರೆ. ಪಾತೇಲಿಂಗನ ಮೂಲ ನೆಲೆ ಹಿರಿಯೂರು ತಾಲ್ಲೂಕಿನ ಕೂಡಲಹಳ್ಳಿಯಲ್ಲಿದೆ. ಇದಕ್ಕೆ ಪರಿಯಾಯ ನೆಲೆ ಚಳ್ಳಕೆರೆ ತಾಲ್ಲೂಕಿನ ಪಾತಪ್ಪನ ಗುಡಿಯಲ್ಲಿದೆ. ರಾಮಲಿಂಗನ ಮೂಲ ನೆಲೆ ರಾಮನಹಳ್ಳಿಯಲ್ಲಿತ್ತು, ಈಗ ಬೇಚರಕ್ ಗ್ರಾಮವಾಗಿರುವುದರಿಂದ ಇದನ್ನು ಮರಡಿಹಳ್ಳಿಗೆ ಸ್ಥಳಾಂತರ ಮಾಡಿಕೊಂಡಿದ್ದಾರೆ. ಈ ಸಂಬಂಧಿತ ಕತೆ ಚಿತ್ರದುರ್ಗ ಪರಿಸರದಲ್ಲಿ ವ್ಯಾಪಕವಾಗಿ ಹರಡಿಕೊಂಡಿದೆ. ಚಿತ್ತಯ್ಯ-ಗಂಗಮಾಳಮ್ಮನ ಕತೆ ಶಿವ-ಪಾರ್ವತಿಯರ ಛಾಯೆಯನ್ನು ಪಡೆದುಕೊಂಡಂತೆ ಕಂಡು ಬರುತ್ತದೆ.

“ಕಾಡುಗೊಲ್ಲರ ಪ್ರಮುಖ ಕಟ್ಟೆಮನೆಗಳು ಮತ್ತು ಲಿಂಗದ ದೈವಗಳು ಇರುವುದು ಚಿತ್ರದುರ್ಗ ಮತ್ತು ಆಂಧ್ರದ ಗಂಡಿಯಂಚಿನಲ್ಲಿಯೇ”[೨೨] ಎನ್ನವುದು ವೈಶಿಷ್ಟ್ಯ. ಚಿತ್ರದುರ್ಗ ಹಾಗೂ ತುಮಕೂರು ಭಾಗದ ಪರಿಸರ ಒಳಗೊಂಡಂತೆ ಆಂಧ್ರಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಗಡಿಯಂಚಿನ ಗ್ರಾಮಗಳಲ್ಲಿ ಜರುಗುವ ಈ ಲಿಂಗದ ದೈವಗಳ ಹಬ್ಬ ಹರಿದಿನ ಹಾಗೂ ಜಾತ್ರೆ ಉತ್ಸವಗಳು ಜನಪದರ ಸಾಂಸ್ಕೃತಿಕ ಪರಂಪರೆಯ ಪ್ರಮುಖ ಆಧಾರ ಸ್ತಂಬಗಳಾಗಿವೆ. ಈ ಬುಡಕಟ್ಟಿನವರು ಮೂಲತ: ಪಶುಪಾಲಕರಾಗಿದ್ದು ಎಲ್ಲಿ ನೀರು-ಮೇವು ಇರುತ್ತದೆಯೋ ಅಲ್ಲಿಗೆ ತಮ್ಮ ದನಕರುಗಳನ್ನು ಹೊಡೆದುಕೊಂಡು ಜೊತೆಗೆ ದೈವಗಳನ್ನೂ ಹೊತ್ತೊಯ್ಯುತ್ತಿದ್ದರು. ಒಂದು ಕಡೆಯಿಂದ ಮತ್ತೊಂದೆಡೆಗೆ ವಲಸೆ ಹೋಗುವ ಪ್ರವೃತ್ತಿ ಇವರ ಬದುಕಿನ ಪರಿಪಾಠವಾಗಿತ್ತು. ಕಣ್ಣಿಗೆ ಕಂಡ ನದಿಯನ್ನು ಗಂಗಾನದಿ ಎಂಥಲೂ, ದೂರದ ಊರನ್ನು ಡೆಲ್ಲಿ ಎಂಥಲೂ ಕರೆಯುತ್ತಿದ್ದರು. ಕೃಷ್ಣಮೂರ್ತಿ ಹನೂರುರವರು ಕಾಡುಗೊಲ್ಲರು ಕರ್ನಾಟಕ ಮೂಲದವರು ಎಂಬ ಅನಂತಕೃಷ್ಣಯ್ಯರವರ ವಾದವನ್ನು ಸಮರ್ಥಿಸುತ್ತಾರೆ. ಹಾಗೆಯೇ ಕಲಮರಹಳ್ಳಿ ಮಲ್ಲಿಕಾರ್ಜುನ ಮತ್ತು ಮೀರಾಸಾಬಿಹಳ್ಳಿ ಶಿವಣ್ಣ ಸಹ ತಮ್ಮ ಸಂಶೋಧನೆಗಳಲ್ಲಿ ಅವರ ಮಾತೃಭಾಷೆ ಕನ್ನಡ, ಅವರು ಕರ್ನಾಟಕ ಮೂಲದವರೆಂದು ಅಭಿಪ್ರಾಯಪಡುತ್ತಾರೆ.

ಕ್ಯಾತಪ್ಪನು ಪಶುಗಳ ಪೋಷಣೆ, ರಕ್ಷಣೆ, ಕಾಡುಗಳ ಸಂರಕ್ಷಣೆಯ ಜೊತೆಗೆ ತಮ್ಮ ಸಮುದಾಯದ ಜನರ ರಕ್ಷಣೆ ಹೊತ್ತಿದ್ದವನೆಂಬ ಭಾವನೆ ಅವರಲ್ಲಿ ಬಲವಾಗಿ ಬೇರೂರಿದೆ. ಆದ್ದರಿಂದ ಈ ದೈಗಳ ಹೆಸರಿನಲ್ಲಿ ಕಾಲ ಕಾಲಕ್ಕೆ ಪೂಜೆ, ಹಬ್ಬ, ಜಾತ್ರೆ, ಉತ್ಸವ, ಹರಕೆ, ಹುರುಳಿ-ನವಣೆ ವ್ರತಾಚರಣೆ ಮುಂತಾದ ಆಚರಣೆಗಳು ತೀರಿಸುತ್ತಿರಬೇಕು.

ಇಲ್ಲವಾದರೆ ಮಳೆ-ಬೆಳೆ ಬರಿಸುವುದಿಲ್ಲ, ನಮ್ಮನ್ನು ರಕ್ಷಿಸುವುದಿಲ್ಲ, ಸಾಕಷ್ಟು ತೊಂದರೆ ಕೊಡುತ್ತಾನೆ. ಇದರಿಂದ ಸಂಕಷ್ಟಗಳನ್ನು ಅನುಭವಿಸಬೇಕಾಗುತ್ತದೆ ಎಂದು ನಂಬಿದ್ದಾರೆ. ಇಂಥ ಹಲವು ದೈವಗಳ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಸಾಮಾಜಿಕ, ಧಾರ್ಮಿಕ ಹಾಗೂ ಕಲಾತ್ಮಕ ಬದುಕಿನ ಜೀವಸತ್ವವಿದೆ. ಈ ತರದ ಆಚರಣೆಗಳಲ್ಲಿ ಅತ್ಯಂತ ಕುತೂಹಲ ಕೆರಳಿಸುವ ಹಾಗೂ ವಿಶಿಷ್ಟವಾದುದೆಂದರೆ ಕ್ಯಾತಪ್ಪನ ಜಾತ್ರಾ ಆಚರಣೆ.

ಜಾತ್ರೆ ಅದೊಂದು ಧಾರ್ಮಿಕ ಹಾಗೂ ಸಂಸ್ಕೃತಿಗಳ ಸಂಗಮ. ಒಂದೊಂದು ಜಾತ್ರೆ ಮತ್ತು ಅಲ್ಲಿನ ಆಚರಣೆಗಳು ಒಂದೊಂದು ಸಂಸ್ಕೃತಿಯ ಮಹತ್ವವನ್ನು ಒಳಗೊಂಡಿರುವ ಹಾಗೆ ಬುಡಕಟ್ಟು ಸಂಸ್ಕೃತಿಯ ಕ್ಯಾತಪ್ಪನ ಜಾತ್ರೆಯೂ ಸಹ ತನ್ನದೇ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಆದ್ದರಿಂದ ಬುಡಕಟ್ಟು ದೈವಗಳ ಅಧ್ಯಯನವೆಂದರೆ, ಅದೊಂದು ಸಂಸ್ಕೃತಿಯ ಅಧ್ಯಯನ ಇದ್ದಂತೆ. ಅಲ್ಲಿನ ಆಚಾರ-ವಿಚಾರ, ನಂಬಿಕೆ, ಸಂಪ್ರದಾಯ ಎಲ್ಲವನ್ನು ಮೈಗೂಡಿಸಿಕೊಂಡಿರುತ್ತದೆ. ಜಾತ್ರೆ, ಉತ್ಸವಗಳು ಧಾರ್ಮಿಕ ಪ್ರಾಮುಖ್ಯತೆಯನ್ನು ಪಡೆದಿರುವಂತೆಯೇ ಸಾಮಾಜಿಕ ಮಹತ್ವವೂ ಪಡೆದುಕೊಂಡಿವೆ.

**ಪ್ರದರ್ಶನಾತ್ಮಕ ಕಲೆಗಳು** – ಮಾಗಿಯ ಕಾಲ ಹಾಗೂ ವಿಶೇಷ ಸಂದರ್ಭಗಳಲ್ಲಿ ಜರುಗುವ ಹಬ್ಬ, ಜಾತ್ರೆ ಹಾಗೂ ಉತ್ಸವಗಳಲ್ಲಿ ಜನರನ್ನು ಆಕರ್ಷಿಸುವ ಶಕ್ತಿಯನ್ನು ಪಡೆದುಕೊಂಡಿರುವ ಮಾಧ್ಯಮಗಳು ಜನಪದ ಪ್ರದರ್ಶನಾತ್ಮಕ ಕಲೆಗಳು ಎಂದರೆ ತಪ್ಪಾಗಲಾರದು. ಚಿತ್ರದುರ್ಗ, ತುಮಕೂರು ಹಾಗೂ ಆಂಧ್ರದ ಗಡಿ ಭಾಗದ ಅಲ್ಲಲ್ಲಿ ಜರುಗುವ ಜಾತ್ರೆ, ಉತ್ಸವಗಳಲ್ಲಿ ಪ್ರದರ್ಶನಗೊಳ್ಳುವಂತ ಬುಡಕಟ್ಟು ಸಮುದಾಯದ ಜನಪದದ ಹಲವು ಕಲೆಗಳು ಕ್ಯಾತಪ್ಪನ ಜಾತ್ರೆಗಳಲ್ಲಿ ಪ್ರದರ್ಶನಗೊಳ್ಳುತ್ತವೆ. ಅವುಗಳಲ್ಲಿ ಅತಿ ಮುಖ್ಯವಾದ ಕಲೆಗಳೆಂದರೆ ಕೋಲಾಟ, ಮಣೇವು, ಭಜನೆ, ಹಾಡುಗಾರಿಕೆ, ಗಗ್ಗರ(ಕಗ್ಗದ) ಪದ, ಚೌಡಿಕೆ, ಉರುಮೆ(ಹರೆ) ಮತ್ತು ತಮಟೆ ವಾದ್ಯ ನುಡಿಸುವಿಕೆ ಇತ್ಯಾದಿ.

**ಕೋಲಾಟ**

"ಇದು ಚಿತ್ರದುರ್ಗ,ತುಮಕೂರು, ಬಳ್ಳಾರಿ, ರಾಯದುರ್ಗ, ಮಡಕಶಿರಾ ಗಡಿ ಭಾಗದಲ್ಲಿ ಅತ್ಯಂತ ಜನಪ್ರೀಯವಾದ ಕಲೆ. ಇದು ಗಂಡು ಕಲೆಯೂ ಹೌದು. ಇದು ಮಕ್ಕಳು, ಮಹಿಳೆಯರಿಂದ ಹಿಡಿದು ವಯೋವೃದ್ಧರವರೆಗೂ ಯಾವುದೇ ಜಾತಿ-ಲಿಂಗ ಬೇಧವಿಲ್ಲದೆ ಕೋಲಾಟವನ್ನು ಆಡುತ್ತಾರೆ. ಕತ್ರಿಕೋಲು, ಸುತ್ತುಕೋಲು, ಜಡೇಕೋಲು, ಸಾದಕೋಲು ಹೀಗೆ ನಾನಾ ವಿಧಗಳು ಕಂಡುಬರುತ್ತವೆ.ಅದರಲ್ಲಿ ವಿಶಿಷ್ಟವಾದ ಮತ್ತು ಪ್ರತಿಷ್ಠೆಯ ಆಟವೆಂದರೆ 'ಜಡೇಕೋಲು'. ಇದು ಈ ಭಾಗದ ಬುಡಕಟ್ಟು ಸಮುದಾಯದ ಹಟ್ಟಿಗಳಲ್ಲಿ ಕಂಡುಬರುತ್ತದೆ."[೨೨] ಚಳ್ಳಕೆರೆ ತಾಲ್ಲೂಕಿನ ಹೊಟ್ಟೆಪ್ಪನಹಳ್ಳಿ, ಜಡೇಕುಂಟೆ,

ಹುಳ್ಳಿಕಟ್ಟೆ, ಪರಶುರಾಂಪುರ, ಸೂರನಹಳ್ಳಿ, ಬಂಜಗೆರೆ, ಚಿಕ್ಕೇನಹಳ್ಳಿ, ಗೋಪನಹಳ್ಳಿಯಲ್ಲಿ ಹನ್ನೆರಡು ಹದಿಮೂರು ವರ್ಷದ ಶಾಲಾ ಹುಡುಗ, ಹುಡುಗಿಯರು ಈ ಕೋಲಾಟ ಆಡುತ್ತಾರೆ. ಮಳೆಗಾಲ ಕಳೆದು ಹೊಲದ ಬೆಳೆ ಮನೆ ಸೇರಿ, ಬಿಡುವಾದ ಕಾಲಕ್ಕೆ ರೈತರು ಸಂಜೆ ಹೊತ್ತಿನಲ್ಲಿ ಕೋಲಾಟದ ಮೂಲಕ ಮನರಂಜನೆ ಪಡೆಯುತ್ತಿದ್ದರು. ಆದರೆ ಇಂದು ಟಿ.ವಿ.ಮಾಧ್ಯಮದ ಹಾವಳಿಯಿಂದ ಕೋಲಾಟ ಪ್ರದರ್ಶನವು ಜಾತ್ರೆ, ಉತ್ಸವಕ್ಕೆ ಮಾತ್ರ ಸೀಮಿತವಾಗಿವೆ. ಬೆಳದಿಂಗಳ ರಾತ್ರಿ ಅಥವಾ ವಿದ್ಯುತ್ ದೀಪದ ಬೆಳಕಿನಲ್ಲಿ ತಮ್ಮ ತಮ್ಮ ಊರುಗಳ ಮುಂದೆ ಅಥವಾ ದೇವಸ್ಥಾನಗಳ ಮುಂದೆ ಕೋಲಾಟ ಆಡುತ್ತಾರೆ. ಕ್ಯಾತಪ್ಪನ ಜಾತ್ರೆ ಹಬ್ಬ, ಹರಿದಿನಗಳಲ್ಲಿ ವಿಶೇಷವಾಗಿ ಕೋಲಾಟ ಆಡುತ್ತಾರೆ. ಕೋಲಾಟ ಕಲಿಸಲು ಮೇಳಗಾರರಿದ್ದಾರೆ. ಮೇಳಗಾರರು ಹೊಸದಾಗಿ ಕಲಿಯುವಂತಹ ಮಕ್ಕಳಿಗೆ ಗುರುಗಳಿದ್ದಂತೆ. ಇವರು ಸುಮಾರು ಒಂದೆರಡು ತಿಂಗಳಲ್ಲಿ ಕೋಲು ಹೊಡೆಯುವುದನ್ನು ಕಲಿಸುತ್ತಾರೆ. ಕೋಲು ಕಲಿಸಲು ಮುಮ್ಮೇಳಗಾರರ ಅವಶ್ಯಕತೆ ಇರುತ್ತದೆ. ಈ ಕೋಲಾಟವನ್ನು ಹೆಚ್ಚಾಗಿ ದೇವರುಗಳ ಜಾತ್ರೆಯಲ್ಲಿ ಪ್ರದರ್ಶಿಸಲಾಗುತ್ತದೆ. ಆಯಾಯ ದೇವತೆಗಳ ಹಬ್ಬಗಳಲ್ಲಿ ಆ ದೈವದ ಮೇಲೆ ಹಾಡನ್ನು ಹಾಡುತ್ತಾ ಕೋಲೊಯ್ಯುತ್ತಾ ಕುಣಿಯುತ್ತಾರೆ. ಕೋಲಾಟಕ್ಕೆ ಬೇಕಾಗುವ ಕೋಲುಗಳನ್ನು ಬಹಳ ಕಟ್ಟುನಿಟ್ಟಾಗಿ ಅಡವಿಗೆ ಹೋಗಿ ಮರವನ್ನು ಪೂಜಿಸಿ ಕಡಿದುಕೊಂಡು ಬರುತ್ತಾರೆ. ಕಾರೆಗಿಡ, ಹಿಂಗಾರದಗಿಡ, ಕೊಡಸು ಮುಂತಾದ ಮರಗಳಿಂದ ಕೋಲುಗಳನ್ನು ಕಡಿಯುತ್ತಾರೆ. ಅನಂತರ ಅವುಗಳನ್ನು ಒಣಗಿಸಿ ಒಂದುವರೆ ಅಡಿ ಉದ್ದಕ್ಕೆ ಕತ್ತರಿಸಿ ದುಂಡಾಗಿಸಿ ಕೋಲಾಟಕ್ಕೆ ಕೋಲುಗಳನ್ನು ಸಿದ್ದಿಗೊಳಿಸುತ್ತಾರೆ. ನಂತರ ಅರಿಶಿಣ, ಎಣ್ಣೆ ಬೆರೆಸಿ ಕೋಲುಗಳಿಗೆ ಬಳಿಯುತ್ತಾರೆ.

ಕ್ಯಾತೇದೇವರ ಜಾತ್ರೆ ಪ್ರಾರಂಭವಾಗುತ್ತಿದ್ದಂತೆ ತಮ್ಮ ಕಟ್ಟೆಮನೆ ವ್ಯಾಪ್ತಿಯ ಹಟ್ಟಿಗಳಲ್ಲಿ ಕಾಡುಗೊಲ್ಲರ ಕೋಲಾಟ ಪ್ರದರ್ಶನಗೊಳ್ಳುತ್ತವೆ. ಕೋಲಾಟಗಲ್ಲಿ ಹತ್ತು ಹನ್ನೆರಡು ಜನಗಳ ಒಂದೊಂದು ತಂಡವಿರುತ್ತದೆ. ಇವರಿಗೆ ಒಬ್ಬ ಮೇಳಗಾರ ಇರುತ್ತಾನೆ. ಒಂದು ಹಲಗೆ, ಪ್ರತಿಯೊಬ್ಬರು ಕಾಲುಗಳಿಗೆ ಚಿರುಗೆಗೆಜ್ಜೆ, ಕಿರುಗೆಜ್ಜೆ ಕಟ್ಟಿಕೊಳ್ಳುತ್ತಾರೆ. ಎಲ್ಲರೂ ಒಂದೇ ತರಹದ ಬಿಳಿ ಬನಿಯಾನ್ ಮತ್ತು ಬಿಳಿ ಕಚ್ಚೆಪಂಚೆ ಉಟ್ಟಿರುತ್ತಾರೆ. ತಲೆಗೊಂದು ಕೆಂಪು ಟವಲ್ ಕಟ್ಟಿಕೊಳ್ಳುತ್ತಾರೆ. ಕೇತಪ್ಪನ ಜಾತ್ರೆಯಲ್ಲಿ ಸುತ್ತ ಮುತ್ತಲಿನ ಹಳ್ಳಿಗಳಿಂದ ಸುಮಾರು ಎಂಟೊಂಬತ್ತು ಕೋಲಾಟದ ತಂಡಗಳು ಬಂದಿರುತ್ತವೆ. ಒಂದೊಂದು ತಂಡದವರು ಒಂದೊಂದು ರೀತಿಯಲ್ಲಿ ಪ್ರದರ್ಶನ ಕೊಡುತ್ತಾರೆ. ಕಾಮಸಮುದ್ರದ ಮಹಿಳಾ ಕೋಲಾಟದ ತಂಡ ಆಕರ್ಷಕವಾಗಿ ಪ್ರದರ್ಶನ ನಡೆಸುತ್ತದೆ.

**ಚೌಡಿಕೆ**

ಇದು ಎಲ್ಲಮ್ಮನ ಆರಾಧನಾ ಕಲೆಯಾದರೂ ಕ್ಯಾತಪ್ಪನ ಜಾತ್ರೆಯಲ್ಲಿಯೂ ಈ ಕಲೆ ಪ್ರದರ್ಶನಗೊಳ್ಳುತ್ತದೆ. ಚೌಡಿಕೆ ಕಲಾವಿದರನ್ನು ಜೋಗಪ್ಪ ಮತ್ತು ಜೋಗತಿ ಅಥವಾ ಬಸವಿಯವರು ಎಂದು ಕರೆಯಲಾಗುತ್ತದೆ. ಜೋಗಪ್ಪ, ಜೋಗತಿಯರು ದೇವರ ದೀಕ್ಷೆಯನ್ನು ಪಡೆದುಕೊಳ್ಳುತ್ತಾರೆ. ಇವರು ಚೌಡಿಕೆ, ತಾಳ, ತಮಟೆ ವಾದ್ಯಗಳನ್ನು ಬಳಸುತ್ತಾರೆ.

**ಉರುಮೆ ವಾದ್ಯ**

ಜನರನ್ನು ಹುಚ್ಚೆದ್ದು ಕುಣಿಯುವಂತೆ ಮಾಡುವ ವಾದ್ಯವೆಂದರೆ ಉರುಮೆ. ಇದನ್ನು ಕಾಡುಗೊಲ್ಲರು ಮತ್ತು ಮ್ಯಾಸಬೇಡರು ತಮ್ಮ ದೇವರುಗಳ ಉತ್ಸವಗಳಲ್ಲಿ ಬಳಸುತ್ತಾರೆ. ಇತರ ಜನಾಂಗದವರೂ ಈ ವಾದ್ಯವನ್ನು ಬಳಸುತ್ತಾರೆ. ವಿಶೇಷವಾಗಿ ಮಾರಿ, ದುರ್ಗಿಯರು ಸೇರಿದಂತೆ ಕಾಡುಗೊಲ್ಲರ ದೈವಗಳು ಬಹುತೇಕವಾಗಿ ಈ ವಾದ್ಯದಿಂದಲೇ ಗುರುತಿಸಲ್ಪಡುತ್ತಾರೆ. ದೇವರ ಉತ್ಸವಗಳಲ್ಲಿ ಉರುಮೆಯ ವಾದ್ಯವನ್ನು ಉಜ್ಜದೇ ಹೋದರೆ ತಮ್ಮ ವಂಶವೇ ನಿರ್ವಂಶವಾಗುತ್ತದೆ ಎಂದು ಕ್ಯಾತಪ್ಪನ ಜಾತ್ರೆಯಲ್ಲಿ ಉರುಮೆ ವಾದ್ಯ ಸೇವೆ ನೆರವೇರಿಸುವ ಕಲಾವಿದರು ತಿಳಿದಿದ್ದಾರೆ. ಹಬ್ಬ, ಹರಿದಿನ ಹಾಗೂ ಜಾತ್ರೆ ಉತ್ಸವಗಳಲ್ಲಿ ಮತ್ತು ದೇವರುಗಳ ಮೆರವಣಿಗೆಯಲ್ಲಿ ಉರುಮೆ ಬೇಕೇ ಬೇಕಾಗುತ್ತದೆ. ಚಳ್ಳಕೆರೆ ತಾಲ್ಲೂಕಿನ ಗುಡಿಹಳ್ಳಿಯಲ್ಲಿ ವಾಸವಾಗಿದ್ದ ಕೆಲವು ಕಲಾವಿದರು ಉರುಮೆ ಬಡಿಯುವುದರಲ್ಲಿ ಹೆಚ್ಚು ಪರಿಣಿತರಾಗಿದ್ದಾರೆ. ಗುಡಿಹಳ್ಳಿಯ ಕಲಾವಿದರನ್ನು ಅನೇಕ ಜಾತ್ರೆ, ಹಬ್ಬ ಹರಿದಿನಗಳಲ್ಲಿ ಹಾಗೂ ವಿಶೇಷ ಸಂದರ್ಭಗಳಲ್ಲಿ ಆಮಂತ್ರಿಸುತ್ತಾರೆ.

**ತಮಟೆ ಕುಣಿತ**

"ಇದೊಂದು ಚರ್ಮವಾದ್ಯ. ಬೇಟೆಯಾಡಲು, ಹೊಲದಲ್ಲಿ ಕಾವಲು ಕಾಯಲು ಹೊರಟಾಗ ಈ ವಾದ್ಯ ಅಗತ್ಯವಾಗಿ ಬೇಕೇಬೇಕು. ಊರಿನಲ್ಲಿ ಏನಾದರೂ ಹೊಸ ಸುದ್ದಿಯನ್ನು ಜನರಿಗೆ ತಿಳಿಸಬೇಕೆಂದರೆ ಈ ವಾದ್ಯ ಬಳಸುತ್ತಾರೆ."[೨೪] ಮೂರು ಅಡಿ ಸುತ್ತಳತೆಯ ಕಬ್ಬಿಣದ ಬಳೆಯನ್ನು ತಯಾರಿಸುತ್ತಾರೆ. ತಮಟೆಯ ಕಂಠಕ್ಕೆ ಮೇಕೆ, ಕೋಣ ಇಲ್ಲವೇ ಕುರಿಮರಿಯ ಚರ್ಮವನ್ನು ಭಿಗಿಯಾಗಿ ಕಟ್ಟಲಾಗುತ್ತದೆ. ಈ ತಮಟೆಯನ್ನು ದ್ಯಾವರನಹಳ್ಳಿ ಹಾಗೂ ಪುರ್ಲೆಹಳ್ಳಿಯ ಮಣೆಗಾರರು ದೇವರ ಜಾತ್ರೆಯಲ್ಲಿ ಬಡಿಯುವುದು ವಾಡಿಕೆ. ಇವರಿಗೆ ವರ್ಷಕ್ಕೊಮ್ಮೆ 'ಆಯ' ಕೊಡುವ ಪದ್ಧತಿ ಇತ್ತು. ಆದರೆ ಈಗ ಈ ಪದ್ಧತಿ ಇಲ್ಲ.

ತಮಟೆ ಬಡಿಯುವ ಮೊದಲು ಅದನ್ನು ಬೆಂಕಿಯ ಮುಂದೆ ಹಿಡಿದು ಚನ್ನಾಗಿ ಹದಕ್ಕೆ ಬರುವಂತೆ ಕಾಸುತ್ತಾರೆ. ಹದಕ್ಕೆ ಬಂದ ನಂತರ ಬಡಿಯುತ್ತಾರೆ. ತಮಟೆಯ ಕಂಟದ ಹುರಿಯುನ್ನು ಎಡ ತೋಳಿಗೆ ಹಾಕಿಕೊಂಡು, ಎದೆಯು ಮೇಲೆ ಕಂಟವನ್ನೊರಗಿಸಿಕೊಂಡು ಬಡಿಯುತ್ತಾರೆ. ಇದನ್ನು ತಪ್ಪಡೆ ಎಂದು ಕರೆಯುವ ವಾಡಿಕೆ ಇದೆ. ರಂಗದ ಕುಣಿತ, ಮಾರಿಕುಣಿತ ಮೊದಲಾದ ಜನಪದ ಕುಣಿತಗಳಿಗೆ ಹಿನ್ನೆಲೆಯಾಗಿ ತಮಟೆಯನ್ನು ಬಳಸುತ್ತಾರೆ. ಕ್ಯಾತಪ್ಪದೇವರ ಜಾತ್ರೆಯಲ್ಲಿ ದೇವರಿಗೆ ಹರಕೆ ಒಪ್ಪಿಸಲು ಕೆಲವು ಭಕ್ತರು ತಮಟೆ ವಾದ್ಯವನ್ನು ಮೆರವಣಿಗೆಯಲ್ಲಿ ಬಳಸುತ್ತಾರೆ. ಇಂತಹ ಅನೇಕ ವಿಧದ ಪ್ರದರ್ಶನ ಕಲೆಗಳು ವಾದ್ಯಗಳು ಕಂಡುಬರುತ್ತವೆಯಾದರೂ, ಅವುಗಳ ಪ್ರದರ್ಶನ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿರುವುದು ಕಂಡು ಬರುತ್ತದೆ. ಬಹು ಬಡತನದಿಂದ ನರಳುತ್ತಿರುವ ಉರುಮೆವಾದ್ಯ ಹಾಗೂ ತಮಟೆ ವಾದ್ಯ ಕಲಾವಿದರಿಗೆ ಒಪ್ಪೊತ್ತಿನ ಗಂಜಿಗೆ ದುಡಿದು ತಿನ್ನುವುದು ಕಷ್ಟವಾಗಿದೆ. ಇಂತಹ ಕಲೆಗಳು ನಶಿಸಿ ಹೋಗುವ ಮುನ್ನ ಕಲಾವಿದರಿಗೆ ಪ್ರೋತ್ಸಾಹ ನೀಡುವ ಮೂಲಕ ಅವನ್ನು ರಕ್ಷಿಸಬೇಕಿದೆ.

**ಪದ ಹಾಡುವುದು**

"ಕಾಡುಗೊಲ್ಲರಿಗೆ ದನಕರುಗಳೇ ದೇವರು, ಕಳ್ಳೆ,ಕಳಸ ಎಂದರೆ ಪಂಚಪ್ರಾಣ. ಪದ ಹೇಳುವುದರಲ್ಲಿ ಎತ್ತಿದ ಕೈ"[೨೫] ಅದು ಕೇತೇದೇವರ ಜಾತ್ರೆಯಲ್ಲಿ ಪದ ಹೇಳುವುದೆಂದರೆ ಎಲ್ಲಿಲ್ಲದ ಸಂತೋಷ. ಆದ್ದರಿಂದ ಜಾತ್ರೆ, ಉತ್ಸವಗಳಲ್ಲಿ ಪದ ಹೇಳುವ ಸಂಪ್ರದಾಯ ಬೆಳೆಸಿಕೊಂಡಿದ್ದಾರೆ. ಕ್ಯಾತಪ್ಪ ಅಲ್ಲದೆ ಜುಂಜಪ್ಪ, ಎತ್ತಪ್ಪ, ಚಿತ್ತಯ್ಯ, ಕಾಟಯ್ಯ, ಸಿರಿಯಣ್ಣ, ಈರಣ್ಣ, ಕೋಣದ ತಮ್ಮಣ್ಣ, ಚಿಕ್ಕಣ್ಣ, ಕಾಟಮಲಿಂಗ, ಕದರಿನರಸಿಂಹ, ಮಾರಕ್ಕ ಮೊದಲಾದ ದೇವರುಗಳ ಮೇಲೂ ಪದಕಟ್ಟಿ ಹಾಡುತ್ತಾರೆ. ಪದಕಟ್ಟುವ ಮತ್ತು ಪದಹಾಡುವ ಸೃಜನಶೀಲ ಕಲಾವಿದರು ಕಂಡುಬರುತ್ತಾರೆ. ಈ ರೀತಿಯ ಪದ ಹೇಳುವುದರಲ್ಲಿ ಗಂಡಸರಿಗಿಂತ ಹೆಂಗಸರದೇ ಮೇಲುಗೈ. ಮದುವೆ, ಮುಂಜಿ, ಹಬ್ಬ, ಹರಿದಿನ ಹಾಗೂ ಉತ್ಸವದ ಸಂದರ್ಭದಲ್ಲಿ ಸೋಬಾನೆ ಪದಗಳು, ಸಂಪ್ರದಾಯದ ಹಾಡುಗಳು ಹಾಡುವುದನ್ನು ಕೇಳುವುದರಲ್ಲಿ ಅತೀವ ಸಂತೋಷವಾಗುತ್ತದೆ. ಅವರದೇ ಆದ ಧಾಟಿ, ಸ್ಮೃತಿ, ಚರಣ, ಪಲ್ಲವಿ, ಅನುಪಲ್ಲವಿ, ಲಯ, ಗೇಯತೆ ಹಾಗೂ ಮಾಧುರ್ಯತೆ ಯಾವುದೇ ತಾಳವಿಲ್ಲದೆ ಸುಶ್ರಾವ್ಯವಾಗಿ ಹಾಡುವ ಕಲೆಯನ್ನು ರೂಢಿಸಿಕೊಂಡಿರುವುದು ಸೋಜಿಗವೆನಿಸುತ್ತದೆ.

ಜಾನಪದ ಸಿರಿಯಜ್ಜಿಯಂತೆ ಅನೇಕ ಕಲಾವಿದರು ಜನಮನ್ನಣೆ ಗಳಿಸಿಕೊಂಡಿರುವ ಚನ್ನಮ್ಮನಾಗತಿಹಳ್ಳಿಯ ಪುಟ್ಟೀರಮ್ಮ, ನಾಗಮ್ಮ, ತಾಯಮ್ಮ, ಕ್ಯಾತಗೊಂಡನಹಳ್ಳಿಯ

ಗುಂಡಮ್ಮ, ಸಿರಿಯಮ್ಮ, ಮುಕ್ಕಜ್ಜಿ, ಚಿಕ್ಕೇನಹಳ್ಳಿಯ ಶಾಂತಮ್ಮ, ಈರಮ್ಮ, ಸಿರಿಯಕ್ಕ, ಚಿಕ್ಕಮ್ಮ, ಸೂರನಹಳ್ಳಿಯ ನಾಗಜ್ಜಿ, ಕ್ಯಾತಮ್ಮ, ಸಣ್ಣತಿಮ್ಮಕ್ಕ, ಕಸ್ತೂರಿತಿಮ್ಮನಹಳ್ಳಿಯ ದೊಡ್ಡೀರಮ್ಮ, ನಾಗಮ್ಮ, ಜಯಮ್ಮ, ಉಪ್ಪಾರಹಟ್ಟಿಯ ಚಿ.ಕ್ಯಾತಮ್ಮ, ಕುರುಡಿಹಳ್ಳಿನಾಗಜ್ಜರ ಸಾಂತಮ್ಮ, ನೆಂಗಿಚಿಕ್ಕಪ್ಪರ ಸಿರಿಯಮ್ಮ, ಈರಮ್ಮ, ಕರಿಯಮ್ಮ, ಗುಡಿಹಳ್ಳಿ ಈರಜ್ಜಿ, ಗೌಡರ ಶಾಂತವೀರಮ್ಮ, ಕೆಂಚವೀರನಹಳ್ಳಿ ಸಣ್ಣಮ್ಮ, ಬಂಜಗೆರೆ ಸಣ್ಣವೀರಮ್ಮ, ಗೌರಮ್ಮ, ಮುಕ್ಕಮ್ಮ, ಬಡಮ್ಮ, ಹೆಗ್ಗೆರೆ ಕುರಿವೀರಣ್ಣ, ಜಾನಮದ್ದಿ ಕೋಲಾಟದ ನರಸಪ್ಪ, ಅಜ್ಜಪ್ಪ, ಕೋಲಿನ ತಿಪ್ಪಯ್ಯ, ಸಾವುಕಾರ ಸಿದ್ದಪ್ಪ, ಕ್ಯಾತಣ್ಣ, ಕೆಂಜೆಡಿಯಪ್ಪ ಮುಂತಾದ ಕಲಾವಿದರು ಶಿವರಾತ್ರಿ, ಯುಗಾದಿ, ದೀಪಾವಳಿ, ಜುಂಜಪ್ಪನ ಜಾತ್ರೆ, ಎಪ್ಪನ ಗೂಡಿನಹಬ್ಬ, ಕೇತಪ್ಪನ ಜಾತ್ರೆ, ಗೂಡಿನ ಹಬ್ಬ ಹಾಗೂ ವಿಶೇಷ ದಿನಗಳಲ್ಲಿ ಜರುಗುವ ಆಚರಣೆಗಳಲ್ಲಿ ಪದಗಳನ್ನು ಕಟ್ಟಿ ಹಾಡುತ್ತಾರೆ. ಇವರನ್ನು ಪದಗಾರ್ತಿಯರು, ಪದಗಾರರು ಎಂತಲೂ ಕರೆಯುತ್ತಾರೆ. ಅಥವಾ ಹೆಣ್ಣುಮಕ್ಕಳನ್ನು ಸೋಬಾನೆ ಹೇಳುವವರು ಎಂಥಲೂ ಕರೆಯುತ್ತಾರೆ.

**ಗಣೆ**

ಧಾರ್ಮಿಕ ಆವರಣದಲ್ಲಿ ಅನಾವರಣಗೊಳ್ಳುವ 'ಗಣೆ' ಕಾಡುಗೊಲ್ಲರ ಹಬ್ಬ ಹರಿದಿನಗಳಲ್ಲಿ ಮಾತ್ರ ಬಳಸುವ ಒಂದು ವಿಶಿಷ್ಟ ವಾದ್ಯ. ಸುಮಾರು ನಾಲ್ಕೈದು ಅಡಿ ಉದ್ದದ ಬಿದಿರುಕೋಲನ್ನೇ ಗಣೆ ಎಂದು ಕರೆಯುತ್ತಾರೆ. ಗಣೆಯನ್ನು ವಿವಿಧ ಸಂದರ್ಭದಲ್ಲಿ ವಿವಿಧ ಉದ್ದೇಶಗಳಿಗೆ ಬಳಸುವುದರಿಂದ ಅದರ ಮಹತ್ವ ಸಮಯ ಸಂದರ್ಭಕ್ಕನುಗುಣವಾಗಿ ವ್ಯತ್ಯಾಸವಾಗುತ್ತಾ ಹೋಗುತ್ತದೆ. ಇದರಲ್ಲಿ ಕಥನಗಣೆ, ಹೇಳಿಕೆ ಗಣೆ ಮತ್ತು ಹೊತ್ತಾಡೋ ಗಣೆಗಳೂ ಇವೆ. ನೆಲಮೂಲ ಸಂಸ್ಕೃತಿ ಹಿನ್ನೆಲೆಯಲ್ಲಿ ಬಂದ ಕಾಡುಗೊಲ್ಲರ ಪ್ರಧಾನ ವೃತ್ತಿಯೇ ಪಶುಪಾಲನೆ. ಹಿಂದೆ ಸಾಕಷ್ಟು ಹುಲ್ಲುಗಾವಲುಗಳು ಇದ್ದ ಕಾಲದಲ್ಲೂ ಪಶುಪಾಲನೆ ಅವರ ಬದುಕಿಗೆ ಒಂದು ಸವಾಲಾಗಿತ್ತು. ಪಶುಪಾಲನೆ, ಅವುಗಳ ಸಂರಕ್ಷಣೆ ಒಂದು ಮೌಲ್ಯವಾಗಿದ್ದ ಕಾಲದಲ್ಲಿ 'ತುರುಗೋಳ್'ಗಾಗಿ ಪ್ರಾಣತೆತ್ತ ಅನೇಕ ವೀರರು ಹೋರಾಡಿದ ಚಿತ್ರಗಳೇ ವೀರಗಲ್ಲುಗಳಾಗಿ, ಶಾಸನಗಳಾಗಿ ಕಂಡುಬರುತ್ತವೆ. ಮತ್ತು ಪೋಷಣೆಗೆ ತಮ್ಮ ಬದುಕನ್ನೇ ಬಲಿಕೊಟ್ಟು ಈರಗಾರರು ಆ ಜನಾಂಗದ ಆರಾಧ್ಯ ದೈವಗಳು, ಸಾಂಸ್ಕೃತಿಕ ವೀರರೂ ಆಗಿದ್ದುಂಟು. ಇಂತಹ ವೀರರ ಹೋರಾಟದ ಚಿತ್ರಗಳೇ ಮುಂದೆ ಕತೆಗಳಾಗಿ, ಹಾಡುಗಳಾಗಿ ರೂಪುಗೊಂಡಾಗ, ಅವುಗಳನ್ನು ಕಾಪಾಡಿಕೊಳ್ಳಲು ಈ ಮೌಖಿಕ ಕಾವ್ಯದ ಜೊತೆಗೆ ಗಣೆ ವಾದ್ಯವನ್ನು ಬಳಸಿಕೊಂಡರು. ದನಗಳನ್ನು ಮೇಯಿಸುವಾಗ ಹೊತ್ತು ಕಳೆಯಲೂ,

ಬೇಸರ ಕಳೆಯಲು ಗಣೆಯನ್ನು ನುಡಿಸುತ್ತಿದ್ದರು. ಇದರಿಂದ ಅತ್ಯಂತ ಮೃದು ಮಧುರವಾದ ಹಾಗೂ ಮೋಹಕವಾದ ನಾದ ಹೊರ ಹೊಮ್ಮುತ್ತದೆ.

ಜನಪದ ಕಾವ್ಯಗಳಲ್ಲಿ "ಪಶುಪಾಲನೆಗೋಸ್ಕರ ಪ್ರಾಣತೆತ್ತ ಬಹುದೊಡ್ಡ ವೀರರ ಪರಂಪರೆಯೇ ಇದೆ. ಇವರನ್ನೇ ಈರಗಾರರು ಎಂದು ಕರೆಯುತ್ತಾರೆ. ಕೆಲವೊಮ್ಮೆ ಆ ಜನಾಂಗದ ಸಂಸ್ಕೃತಿಯನ್ನೇ ರೂಪಿಸಿದವರನ್ನು ಸಾಂಸ್ಕೃತಿಕವೀರರು ಎಂದು ಕರೆಯುತ್ತಾರೆ."[೨೬] ಕಾಡುಗೊಲ್ಲರಲ್ಲಿ ಮೂಲತಃ ಪಶುಪಾಲಕರಾಗಿದ್ದ, ಎತ್ತಪ್ಪ, ಜುಂಜಪ್ಪ, ಕಾಟಪ್ಪ, ಈರಗಾರ ಈರಣ್ಣ, ಕ್ಯಾತಪ್ಪ ಮುಂತಾದವರನ್ನು ಸಾಂಸ್ಕೃತಿಕ ವೀರರು ಎಂದು ಕರೆಯುತ್ತಾರೆ. ಹಂದಿಸಿರಿಯಣ್ಣ, ಮದನಕುಂಟೆ ಯರ‍್ರಪ್ಪ, ಸಾಣಿಕೆರೆ ಗಟ್ಟಪ್ಪ, ಈರನಾಗಣ್ಣ ಮುಂತಾದ ಈರಗಾರರನ್ನು ಕುರಿತ ದೊಡ್ಡ ಕಥನ ಪರಂಪರೆಯೇ ಹುಟ್ಟಿಕೊಂಡಿದೆ. ಈ ಈರಗಾರರನ್ನು ಕುರಿತ ಗಣೆಯ ಕಥಾ ಕಾವ್ಯಗಳನ್ನು ಹಾಡುವ ಮುನ್ನ ಗಣೆಗೆ ಮಾಧ್ಯಮವಾದ ಬಿದಿರನ್ನು ಕುರಿತ ಸ್ತುತಿಗೀತೆಯನ್ನು ಈ ರೀತಿ ಹಾಡುತ್ತಾರೆ.

*"ಮಾತುನಾಡೆ ಬಿದಿರಮ್ಮ ಮಾತನಾಡೆ ನನ್ನಮ್ಮ*
*ಮಾತುನಾಡೆ ತಾಯಮ್ಮ ಸಿವ ನುಡಿಯೇ ॥ಪಲ್ಲವಿ॥*
*ಕಲ್ಲಿನಲ್ಲಿ ವುಟ್ಟೋಳೆ ಕಲ್ಲಿನಲ್ಲಿ ಬೆಳೆಯೋಳೆ*
*ಸೊಲ್ಲು ಸೊಲ್ಲಿಗೆ ದನಿಕೊಡೇ ಬಿದಿರಮ್ಮ*

*ಕುರಿಯ ಕಾವಣ್ಣಗೊಂದು ಕಿರುಗೆಣ್ಣಿನ ಬಿದಿರಾದೆ*
*ಮ್ಯಾಕೆ ಕಾವಗಣ್ಣಗೊಂದು ಗೀಕಿನ ಬೋಳು ದಡಿಯಾದೆ*
*ಎತ್ತು ಕಾವಣ್ಣಗೊಂದು ಮುತ್ತಿನ ಬಾರಿಕೋಲಾದೆ*

*ಆವು(ಹಸು)ಕಾವಣ್ಣಗೊಂದು ದ್ಯಾವಗಣ್ಣಿನ ಬಿದಿರಾದೆ*
*ಎಮ್ಮೆಕಾವಗಣ್ಣಗೊಂದು ಚಿನ್ನದ ಡಾಬುಗಣೆಯಾದೆ*
*ಅಜ್ಜಿಗೂರುಗೋಲಾದೆ ಅಜ್ಜಗೂರುಗೋಲಾದೆ*

*ಕುಂಟಾಗೊಂದು ಕೋಲಾದೆ ಬಂಟಾಗೊಂದು ಕೋಲಾದೆ*
*ಹಟ್ಟೀಯ ಕ್ಯಾತಯ್ಯಗೊಂದು ಬಿಜ್ಜಣಿಕೆ ಬಿದಿರಾದೆ*
*ಆಲು ಕೇತೇಲಿಂಗಗೊಂದು ತೋಗೋ ತೊಟ್ಟಿಲಾದೆ*

*ವಡ್ನಳ್ಳಿ ಮಾರಕ್ಕಗೊಂದು ವಡ್ಡೀದ ಅರಮನೆಯಾದೆ*
*ದೊಡ್ಡೊನು ಜುಂಜಪ್ಪಗೊಂದು ವಡ್ಡೀದ ಮರಬಿಲ್ಲಾದೆ*

*ನೀನ್ಯಾರಿಗಲ್ಲದವಳು*

*ಕ್ವಾಟಿಗು ನೀನಾದಲ್ಲೆ ಪ್ಯಾಟಿಗು ಪಡಿಯಾದಲ್ಲೆ*

*ನೀಟಾಗಾರಣ್ಣನಿಗೆ ಊದೋಕೊಂದು ಗಣೆಯಾದೆ*

*ಕೇರಬಲ್ಲರು ನಾರೇರಿಗೆ ಕೇರಕೊಂದು ಮೊರವಾದೆ*

*ಲಂಬದೊಂದು ದೊಂಬರ ಗಣೆಯಾದೆ*

*ಬಿಲ್ಲಂತ ಜಾಣನಗಲ್ಲದ*

*ಮ್ಯಾಲೆ ಸಲ್ಲು ಸಾಕಮ್ಮ ಶಿವ ನುಡಿಯೋ* (ಗೊ.ಕ.ಸಂ,ಮಿ.ಶಿವಣ್ಣ)

ಎಂದು ಈ ಹಾಡು ಬಿದಿರಮ್ಮನ ಗುಣಗಾನ ಮಾಡುತ್ತದೆ. ಬಿದಿರು ನಮ್ಮ ಜನಪದರಿಗೆ ದೈವವಾಗಿ ಕಾಣುತ್ತದೆ. ಯಾವ ಕೃತಕತೆಯ ಸೋಂಕು ಉಲ್ಲದೆ ಸರಳವಾಗಿರುವುದನ್ನು ಈ ಹಾಡು ತನಗೆ ತಾನೇ ತನ್ನ ಭಾವಗೀತಾತ್ಮಕತೆಯಿಂದ ಕೃಷಿ ಸಂಸ್ಕೃತಿಯ ದಟ್ಟ ಚಿತ್ರಣವನ್ನು ಅತ್ಯಂತ ಆತ್ಮೀಯವಾಗಿಸುತ್ತದೆ. ಆಚರಣೆಗಳಲ್ಲಿ ಊದುವ ಅಥವಾ ಹೇಳಿಕೆ ಗಣೆಗಳು ಇದ್ದೇ ಇರುತ್ತವೆ. ಅವು ಕೂಡಾ ದೈವಗಳೆಂದೇ ಭಾವಿಸುವುದರಿಂದ, ಸಹಜವಾಗಿ ಅದು ದೇವರ ಪ್ರತಿನಿಧಿಯಾಗಿಬಿಡುತ್ತದೆ. ದೇವರ ಪ್ರತಿನಿಧಿಯಾದ ಗಣೆಯನ್ನು ಪೂಜಾರಿ ಊದಿ ನೀಡುವ ಹೇಳಿಕೆಯನ್ನು ದೈವವಾಣಿಯೆಂದೇ ಭಾವಿಸುತ್ತಾರೆ. ಈ ಗಣೆಗಳಿಗೆ ಬೆಳ್ಳಿಯ ಅಥವಾ ತಾಮ್ರದ ತಗಡಿನಿಂದ ಅಲ್ಲಲ್ಲಿ ಹೊದಿಕೆ(ಕಟ್ಟು) ಹಾಕಿಸಿರುತ್ತಾರೆ."[೨೭] ಈ ಕಾಡುಗೊಲ್ಲರ ಸಾಂಸ್ಕೃತಿಕ ಸಂಕೇತದಂತಿರುವ ಇವುಗಳು ಒಂದು ಜೀವಂತ ಪರಂಪರೆಯ ಪ್ರತಿನಿಧಿಯಾಗಿವೆ ಎಂದರೆ ತಪ್ಪಾಗಲಾರದು. ಜನಪದ ಸಮುದಾಯಗಳ ಒಡಲಲ್ಲಿ ಪಾರಂಪರಿಕವಾಗಿ ಸಾಗಿಬಂದ ಅನೇಕ ಸಂಪ್ರದಾಯ ಆಚರಣೆಗಳಿವೆ. ಅಂಥ ಆಚರಣೆಗಳಲ್ಲಿ ಮಣೇವು ಒಂದು. ಇದು ಮೂಲತಃ ವೈಷ್ಣವ ಸಂಪ್ರದಾಯಕ್ಕೆ ಸೇರಿದ ಆಚರಣೆ. ಈ ಆಚರಣೆಯಲ್ಲಿ ತುಂಬಾ ವೈಶಿಷ್ಟ್ಯವಿದೆ. ಇದರಲ್ಲಿ ಸಾಂಸ್ಕೃತಿಕ ವಿಕಾಸದ ಸ್ವರೂಪ ಮತ್ತು ದೃಷ್ಟಿಕೋನವು ಅಡಗಿದೆ. ಇದು ಬಹುಮುಖ್ಯವಾಗಿ ಕಾಡುಗೊಲ್ಲರು ಮತ್ತು ಮ್ಯಾಸಬೇಡ ಸಮುದಾಯದ ಆಚರಣೆಗಳಲ್ಲಿ ಕಂಡು ಬರುತ್ತದೆ. ತಮ್ಮ ದೈವಗಳನ್ನು ಹೊಳೆಗೆ ಹೊರಡಿಸುವ ಸಂದರ್ಭದಲ್ಲಿ ಈ ಆಚರಣೆಗಳು ಜರುಗುತ್ತದೆ.

"ಧಾರ್ಮಿಕ ಆಚರಣೆಗಳಲ್ಲಿ ದಾಸಯ್ಯ ಹಾಗೂ ಪೂಜಾರಿಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಆಯಾ ಗುಡಿಕಟ್ಟಿನ ಪೂಜಾರಿಗಳು, ಗೌಡರು ತಮ್ಮ ಆರಾಧ್ಯ ದೈವಗಳಿಗೆ ದಾಸಯ್ಯನನ್ನು ನೇಮಿಸಿ ಅವರಿಗೆ ದೀಕ್ಷೆ ಕೊಡುತ್ತಾರೆ. ಅಂದಿನಿಂದ ದಾಸಯ್ಯ ದೇವರ ಒಂದು ಭಾಗ ಮತ್ತು ನಿಷ್ಠಾವಂತ ವ್ಯಕ್ತಿ. ಅಲ್ಲದೆ ಪೂಜಾರಿಯ ಜೊತೆಗೆ ದೇವರ

ಸೇವಕನಾಗಿ ಮಾರ್ಪಡುತ್ತಾನೆ."[೨೮] ಹಣೆಗೆ ಉದ್ದ ನಾಮಧರಿಸಿ, ಕೂದಲು ಕತ್ತರಿಸದೆ ಮಡಿವಂತಿಕೆಯಿಂದ ಇರುತ್ತಾನೆ. ವಿಶೇಷವೆಂದರೆ ಸಮುದಾಯದ ಎಲ್ಲಾ ಕುಟುಂಬಗಳಿಗೆ ದಾಸಯ್ಯರಾಗುವ ಅವಕಾಶವಿರುವುದಿಲ್ಲ. ಕೆಲವೇ ಕೆಲವು ಬೆಡಗಿನವರಿಗೆ ಮಾತ್ರ ಈ ಅವಕಾಶ. ಹಾಗಾಗಿ ಅವಕಾಶ ಪಡೆದಿರುವ ಬೆಡಗಿನವರು ಯಾವಾಗಲೂ ತಮ್ಮ ಗ್ರಾಮಗಳ ದೈವಗಳ ಕೆಲಸ ಕಾರ್ಯಕ್ಕಾಗಿ ದಾಸಯ್ಯರನ್ನು ಇರಿಸಿಕೊಳ್ಳುವುದು ಅನಿವಾರ್ಯ. ದಾಸಯ್ಯಗಳ ಪರಂಪರೆ ಕಳಚದಂತೆ ನೋಡಿಕೊಳ್ಳುತ್ತಾರೆ. ಇವರು ಸಮಯ ಬಂದಾಗ ಆಚರಣೆಗಳ ಸಂದರ್ಭದಿಂದ ಹೊರಗೆ ಸಾಮಾನ್ಯರಂತೆ ಇರುತ್ತಾರೆ. ಕೆಲವು ಆಚರಣೆಯ ಸಂದರ್ಭದಲ್ಲಿ ಇವರ ಸ್ವರೂಪ ಗಮನಾರ್ಹವಾದುದು. ಕಳ್ಳೆ ಮುಳ್ಳಿನ ಕಂಟಕಾವರಣಕ್ಕೆ ಧಾರ್ಮಿಕತೆಯೇ ಪ್ರಧಾನ ಕಾರಣವಾಗಿದ್ದಂತೆ ತೋರುತ್ತದೆ. ಒಂದು ಜನಪದಗೀತೆಯಲ್ಲಿ ಕಳ್ಳೆಯ ಉಲ್ಲೇಖ ಹೀಗೆ ಬರುತ್ತದೆ. 'ಕರಿಯ ಕಳ್ಳೆಗೊಲಿದ ಕುರಿಯ ಗಿಣ್ಣಕೊಲಿದ ಕಳ್ಳೆ  ಗುಡಿಯೋನೆ ಬೆಲ್ಲದ ಪೂಜ್ಯಾನೆ, ಹಟ್ಟಿ ಕಳ್ಳೋನೆ, ವುಟ್ಟುಜನಿಗೋನೆ' ಈ ಕಳ್ಳೆಯೂ ಒಡೆಯಂತೆ ಹೇಗೆ ಕಂಗೊಳಿಸುತ್ತಿತ್ತು ಎಂಬುವುದನ್ನು ಈ ಪದ್ಯ ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ.



**(ಕ್ಯಾತಪ್ಪದೈವದ ಕಳ್ಳೆಮುಳ್ಳಿನ ಗುಡಿ ಚಿತ್ರ)**

"ಮುತ್ತಿನ ಒಳಕಳ್ಳೆ ಮುತ್ತಿನ ಹೊರಕಳ್ಳೆ, ಮತ್ತೆ ಕೆತ್ತಿಸಿದ ಎರದ ಕಳ್ಳೆ, ಗುಡಿಯ ಕಟ್ಟಿಸಿದೋನು ಯಾರ ಮಗನಮ್ಮ" ಎಂಬ ಪದವನ್ನು ಅವಲೋಕಿಸಿದಾಗ ದೇವರುಗಳಿಗೆ ಕೂಡಾ ಈ ಕಳ್ಳೆ ಇಷ್ಟ ಎಂಬುವುದನ್ನು ಈ ಪದದ ತುಣುಕು ಬಿಚ್ಚಿ ಹೇಳುತ್ತದೆ.

*"ಬಂದೀಯ ಮುರಿಯಂಗೆ ಅಂದೂದವುಕಳ್ಳೆ*

*ತಂದೆ ಕೇತಪ್ಪನ(ನಿಂಗಣ್ಣ) ಪವುಳಿಯ ಬಾಗಿಲು ಕಳ್ಳೆ*

*ಬಂದೀಯ ಮುರಿಯ ತಗುದಂಗೆ"*

ಈ ಪ್ರಕ್ರಿಯೆ ಜನಪದ ಸಂಸ್ಕೃತಿ ಕಳ್ಳೆಯ ಮೂಲಕ ರಕ್ಷಣೆಯನ್ನು ನಿರ್ಮಿಸಿಕೊಳ್ಳಲು ಪ್ರಯತ್ನಿಸುವಂತೆ ಕಂಡರೆ, ಶಿಷ್ಟ ಸಂಸ್ಕೃತಿ ಕೋಟೆಯ ಮೂಲಕ ಆ ಪ್ರಯತ್ನ ಮಾಡಿದಂತೆ ಕಾಣುತ್ತದೆ. ಕಳ್ಳೆ ಮತ್ತು ಕೋಟೆಗಳು ಆಯಾ ಸಂಸ್ಕೃತಿಯ ಪ್ರತೀಕಗಳಂತೆ ಕಾಣುತ್ತವೆ.

ಕಳ್ಳೆ ಪ್ರಿಯ ಕ್ಯಾತಪ್ಪ- ಎತ್ತಪ್ಪ, ಜುಂಜಪ್ಪ ಹಾಗೂ ಈರಣ್ಣರಂತೆ ಕ್ಯಾತಪ್ಪನು ಕೂಡಾ ಕಳ್ಳೆಪ್ರಿಯ ದೇವರು. ಈ ದೇವರುಗಳಿಗೆ ಕಳ್ಳೆ ಎಂದರೆ ಅದೆಷ್ಟು ಪ್ರಿಯವೆಂಬುವುದನ್ನು ನೋಡಬೇಕೆಂದರೆ ಕ್ಯಾತಪ್ಪನ ಜಾತ್ರೆಗೆ ಹೋಗಬೇಕು. ಚನ್ನಮ್ಮನಾಗತಿಹಳ್ಳಿ ಮೂಲ ನೆಲೆಯಿಂದ ಬಂದು ವಸತಿ ದಿಬ್ಬದಲ್ಲಿ ಪೆಟ್ಟಿಗೆದೇವರುಗಳು ಉಳಿದುಕೊಂಡಿರುತ್ತವೆ. ದೇವರ ಸುತ್ತ 'ಬೆರಗು'(ಹಸಿರು ಗುಡಿಸಲು) ಹಾಕಿರುತ್ತಾರೆ, ಈ ಹಸಿರು ಬೆರಗುಗಳನ್ನು ಕಾರೆಕಳ್ಳೆ, ಬಾರೆಕಳ್ಳೆ ಹಾಗೂ ಜಾಲಿಕಳ್ಳೆಯಿಂದ ಮುಚ್ಚಿರುತ್ತಾರೆ. ಹೀಗೆ ಸಣ್ಣ ಸಣ್ಣ ಬೆರಗುಗಳನ್ನು ತಿರುವಿಕೊಂಡಿರುತ್ತಾರೆ. ಅದರ ಜೊತೆ ಜೊತೆಗೆ ಕಳ್ಳೆಮುಳ್ಳಿನ ಗುಡಿ ನಿರ್ಮಾಣ ಹಾಗೂ ಕಳ್ಳೆಮುಳ್ಳಿನ ರಾಶಿಯ ಮೇಲೆ ಬರಿಗಾಲಲ್ಲಿ ಹತ್ತಿ ಕಳಸ ಕೀಳುವುದನ್ನು ನೋಡಲು ಜಾತ್ರೆಗೆ ತಪ್ಪದೆ ಹೋಗಬೇಕು.

"ಮೂಲತಃ ಈಶ್ವರನ ಭಕ್ತರಾದ ಕಾಡುಗೊಲ್ಲರ ಕುಲ ಮೂಲದ ಕತೆಯು ಶೈವ ಮೂಲದ್ದೇ ಆಗಿದೆ. ಇವರ ಅಧಿದೈವಗಳಾದ ಜುಂಜಪ್ಪ, ಎತ್ತಪ್ಪ, ಈರಣ್ಣ, ಚಿತ್ತಯ್ಯ, ಕಾಟಯ್ಯ, ಕ್ಯಾತಪ್ಪ, ಬೊಮ್ಮಣ್ಣ ಮುಂತಾದವು ಶೈವ ಮೂಲದ ದೈವಗಳಾಗಿರುವುದನ್ನು ಕಾಣಬಹುದು. ಈಶ್ವರನ ಬೆವರಿನಿಂದ ಜನಿಸಿದ್ದು ಕೇತೇಲಿಂಗ, ಕಾಟಮಲಿಂಗ, ಚಿತ್ರಲಿಂಗ, ಪಾತೇಲಿಂಗ ಎಂದು ಹೇಳುವ ಇವರು ಕ್ರಮೇಣ ವೈಷ್ಣವೀಕರಣಗೊಂಡು ತಿರುಪತಿ ತಿಮ್ಮಪ್ಪ, ರಂಗಪ್ಪ, ನರಸಿಂಹಸ್ವಾಮಿ, ಕೃಷ್ಣ ಮೊದಲಾದ ವೈಷ್ಣವ ಮೂಲದ ದೈವಗಳಿಗೆ ನಡೆದುಕೊಳ್ಳುವುದರ ಮೂಲಕ ಗುರುತಿಸಿಕೊಂಡಿದ್ದಾರೆ. ಆದರೆ ಕೃಷ್ಣ ದ್ರಾವಿಡ ಮೂಲದ ಪಶುಪಾಲಕತನದವನೆಂದು ಅನೇಕ ಅಧ್ಯಯನಗಳು ದೃಢಪಡಿಸುತ್ತವೆ."[೨೯]

ಇವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ. ಇಲ್ಲಿನ ಜನಪದರಲ್ಲಿ ಸಾಮಾನ್ಯವಾಗಿ ನಂಬಿಕೆ, ಸಂಪ್ರದಾಯಗಳು ಹುಟ್ಟಿಕೊಳ್ಳಲು ದೇವರು ಧರ್ಮದ ಪ್ರಭಾವವೇ ಕಾರಣವೆಂದು ಹೇಳಬಹುದು. ಹೀಗಾಗಿ ಜನಪದರು ದೇವರು-ಧರ್ಮವನ್ನು ತ್ಯಜಿಸಿ ಬದುಕುವವರಲ್ಲ. ಬದಲಾಗಿ ತಮ್ಮ ಧರ್ಮವೆಂದು ಒಪ್ಪಿಕೊಂಡು ಅನುಸರಿಸುತ್ತಾ ಬಂದಿರುವುದನ್ನು ಗಮನಿಸಬಹುದು. ಕೇತೇ ದೇವರ ಜಾತ್ರೆಯ ಹಿನ್ನೆಲೆಯಲ್ಲಿ ಕಾಡುಗೊಲ್ಲ ಬುಡಕಟ್ಟು ಸಮುದಾಯದ ಸಂಸ್ಕೃತಿಯನ್ನು ಅರ್ಥೈಸುವ ಒಂದು ಪ್ರಯತ್ನ ಇದಾಗಿದೆ. ಕ್ಯಾತೇದೇವರ ಜಾತ್ರೆಯನ್ನು ಐತಿಹ್ಯ ಮತ್ತು ಜನಪದದ ಹಾಡು, ಕತೆಗಳ ಮೂಲಕ ಜಾತ್ರಾ ಆಚರಣೆಗಳನ್ನು ಹಿಡಿದಿಡುವ ಸರಿಯಾದ ಕ್ರಮವೆಂದು ಭಾವಿಸಲಾಗಿದ್ದು, ಅವರ

ಪೂಜಾರಿಕೆ, ದಾಸಯ್ಯಗಳ ಪಟ್ಟ ಹಾಗೂ ದೇವರ ಗಂಗಾ ಪೂಜೆ ಸಂದರ್ಭದಲ್ಲಿ ಮಾತ್ರ ಬ್ರಾಹ್ಮಣ(ಪುರೋಹಿತ) ಅಥವಾ ಅಯ್ಯಗಳನ್ನು ಕರೆಸುತ್ತಾರೆ.

*"ದೈವಾಂತು; ಮಂತ್ರಾದೀನ*

*ಮಂತ್ರಾಂತು ಬ್ರಾಹ್ಮಣಾ: ದೀನಾ*

*ಬ್ರಾಹ್ಮಾಂತು ಮಮ: ದೇವತ;"*

(ಅಜ್ಜಯ್ಯ ಎಚ್.ಕಾಡುಗೊಲ್ಲ ಸಮಾಜ ಶಾಸ್ತ್ರೀಯ ಅಧ್ಯಯನ ಪುಟ)

ಅಂದರೆ ದೇವರು ಮಂತ್ರಕ್ಕೆ ಒಲಿಯುತ್ತದೆ (ಮನಸೋಲುತ್ತದೆ) ಎಂಬ ನಂಬಿಕೆ ಇದೆ. ಸಂಸ್ಕೃತದಲ್ಲಿ ಶ್ಲೋಕಗಳು ಇರುತ್ತವೆ. ಸಂಸ್ಕೃತ ಆರ್ಯರ ಭಾಷೆ. ಆರ್ಯರು ಎಂದರೆ ಬ್ರಾಹ್ಮಣರು. ಬ್ರಾಹ್ಮಣ ದೇವರು ಎಂಬ ನಂಬಿಕೆ ಅವರಲ್ಲಿ ಇರುವುದರಿಂದ ಧಾರ್ಮಿಕ ಆಚರಣೆಗಳಲ್ಲಿ ಬ್ರಾಹ್ಮಣ ಅಥವಾ ಅಯ್ಯಗಳನ್ನು ಕರೆಸಲಾಗುತ್ತದೆ. ಪೂಜಾರಿಗಳು ಗಂಧವನ್ನು ಎರಡು ಭುಜಗಳಿಗೆ, ಎದೆ ಭಾಗಕ್ಕೆ ಮತ್ತು ಹಣೆಗೆ ಲೇಪನ ಮಾಡಿಕೊಳ್ಳುತ್ತಾರೆ. ಕೆಲವು ಸಂದರ್ಭದಲ್ಲಿ ಗುರುಗಳಿಗೆ ಗುರುದಕ್ಷಿಣೆಯಾಗಿ ೫೦೧ ರೂಪಾಯಿ ಕಾಣಿಕೆ ಮತ್ತು ವಸ್ತ್ರ ಉಡುಗೊರೆಗಳನ್ನು ಕೊಡುತ್ತಾರೆ. ಗದ್ದುಗೆಯ ನಾಲ್ಕು ಮೂಲೆಗೂ ೧೦೧ ರೂಪಾಯಿಯನ್ನು ವಿಳ್ಯೆದೆಲೆಯಲ್ಲಿಟ್ಟು ಪೂಜಿಸುವ ಪರಿಪಾಠ ಇವರಲ್ಲಿ ಕಂಡು ಬರುತ್ತದೆ.

**ಗಡಿ ಇಳಿಸುವುದು**

"ಕ್ಯಾತಗೊಂಡನಹಳ್ಳಿಯ ಕದರಿನರಸಿಂಹನ ಉತ್ಸವದಲ್ಲಿ ನಡೆಯುವ ಗಡಿ ಇಳಿಸುವ ಆಚರಣೆ ತುಂಬಾ ವಿಶಿಷ್ಟವಾದುದು. ಇದನ್ನು ಶಿವರಾತ್ರಿಯ ಸಂದರ್ಭದಲ್ಲಿ ದೇವರನ್ನು ಗಂಗಾ ಪೂಜೆಗೆ ಹೊರಡಿಸಿದ ಮಾರನೆ ದಿನ ಅನ್ನ ದಾಸೋಹದ ದಿನ ಈ ಆಚರಣೆ ಜರುಗುತ್ತದೆ."[೩೦] ಕರಿಕಂಬಳಿ ಗದ್ದು(ಜಾಡಿ)ಯನ್ನು ಹಾಸಿ ಅದರ ಮೇಲೆ ಅಕ್ಕಿ ಧಾನ್ಯವನ್ನು ಹೊಯ್ದು ಅದರ ಮೇಲೆ ಉರುಮೆ ವಾದ್ಯವನ್ನು ನಿಲ್ಲಿಸುತ್ತಾರೆ. ಹರೆ(ಉರುಮೆ) ಮೇಲೆ ಅಕ್ಕಿ ಕಾಳು ಹಾಗೂ ಕುರಿಪಿಚ್ಚಿಗೆಯ ಗೊಬ್ಬವರನ್ನು ಕಲಸಿ. ಗೌಡರದು, ಪೂಜಾರಿಗಳದು, ಒಕ್ಕಲಿನವರದು ಎಂಬುವುದಾಗಿ ಮೂರು ಭಾಗದ ರಾಶಿ ಮಾಡಿ ಉರುಮೆಯನ್ನು ಜೋರಾಗಿ ಬಡಿಯಲು ಹೇಳುತ್ತಾರೆ.

ಬಡಿದಂತಹ ಶಬ್ಧಕ್ಕೆ ಈ ಮೂರು ಭಾಗ ಮಾಡಿದ ಅಕ್ಕಿ ಮತ್ತು ಕುರಿಪಿಚ್ಚಿಗೆಯ ಕುಪ್ಪೆಗಳು ಕಲೆತುಕೊಂಡರೆ ಗೌಡರು, ಪೂಜಾರಿಗಳು ಹಾಗೂ ಒಕ್ಕಲು ಮಕ್ಕಳು ಒಬ್ಬರಿಗೊಬ್ಬರು ಪರಸ್ಪರ ಹೊಂದಾಣಿಕೆ(ಕಲೆತುಕೊಂಡು) ಮಾಡಿಕೊಂಡು ಹೋಗುತ್ತಾರೆ ಎಂದರ್ಥ. ನಂತರ ನಿಂಬೆಹಣ್ಣು ಮತ್ತುಒಂದು ರೂಪಾಯಿಯ ನಾಣ್ಯವನ್ನು ಉರುಮೆಯ

ಮೇಲಿಟ್ಟು ವಾದ್ಯ ನುಡಿಸುತ್ತಾರೆ. ಅವು ಸಹ ಉರುಮೆಯ ಸದ್ದಿಗೆ ಮೇಲಕ್ಕೆ ಎಗರುತ್ತವೆ. ಇದನ್ನೇ ಗಡಿ ಇಳಿಸುವುದು ಎಂದು ಕರೆಯುತ್ತಾರೆ. ಈ ಕ್ರಿಯೆ ಮೇಲು ನೋಟಕ್ಕೆ ಮನರಂಜನೆಯಾಗಿ ಕಂಡರೂ ಸಹ ಇದರಲ್ಲಿ ಸಾಮಾಜಿಕವಾಗಿ ಒಬ್ಬರಿಗೊಬ್ಬರು ಹೊಂದಾಣಿಕೆಯಿಂದ ನಡೆಯುವ ಸೂಕ್ಷ್ಮತೆಯನ್ನು ಇದು ವಿವರಿಸುತ್ತದೆ.

ಪೂಜಾರಿ ಹಾಗೂ ದಾಸಯ್ಯಗಳ ಪಟ್ಟ ಮತ್ತು ವಿಶೇಷ ಸಂದರ್ಭದಲ್ಲಿ ಮಾತ್ರ ವಾಸೆ ಕೊಯ್ಯುವ ವಿಶಿಷ್ಟ ಸಂಪ್ರದಾಯವಿದೆ. ಕೇತಪ್ಪ ದೇವರನ್ನು ಹೊಳೆಗೆ ಕೊಂಡೊಯ್ದು ತೆಗೆದುಕೊಂಡು ಬರುವಾಗ ಹೊಳೆಯ ದಡದ ಮೇಲೆ ಅಚ್ಚಕರಿ ಕುರಿಮರಿಯನ್ನು ಮಾತ್ರ ಬಲಿ ನೀಡುವ ಪದ್ಧತಿ ಇದೆ. ವಾಸೆ ಕುರಿಮರಿಯ ಲಕ್ಷಣ ಅಂದರೆ ಆ ಕುರಿಮರಿಗೆ ಮೈ ಮೇಲೆ ಎಲ್ಲಿಯೂ ಒಂದೇ ಒಂದು ಬಿಳಿ ಕೂದಲು ಇರಬಾರದು., ಹಣೆಕುಚ್ಚು, ಹೂ ಬಾಲ, ಹಣೆ ಚುಚ್ಚು ಆಗಿರಬೇಕು ಎಂಬ ನಿಯಮವಿದೆ. ಇದನ್ನು ದೂಳಮರಿ ಎಂತಲೂ ಕರೆಯುತ್ತಾರೆ. ಈ ದೂಳಮರಿಯ ಮುಂದಿನ ಕಾಲುಗಳನ್ನು ಒಬ್ಬ ಹಿಗ್ಗಿ ಹಿಡಿದು ಎಳೆಯುತ್ತಾನೆ, ಇನ್ನೊಬ್ಬ ಹಿಂದಿನ ಕಾಲುಗಳನ್ನು ಹಿಗ್ಗಿ ಹಿಡಿದೆಳೆದು ಇಬ್ಬರು ಒಟ್ಟಿಗೆ ಎಡಕ್ಕೂ ಬಲಕ್ಕೂ ಮೂರು ಬಾರಿ ನಿವಾಳಿಸಿ ಹಿಗ್ಗಿ ಹಿಡಿಯುತ್ತಾರೆ. ಗೌಡ ಅಥವಾ ತಳವಾರ ಆ ಮರಿಯ ಹೊಟ್ಟೆ ಮಧ್ಯದ ಭಾಗಕ್ಕೆ ಮಚ್ಚಿನಿಂದ ಒಂದೇ ಸಲಕ್ಕೆ ಆ ಮರಿಯನ್ನು ಎರಡು ಭಾಗ ಮಾಡುತ್ತಾನೆ. ಅದನ್ನು ನಾಯಿ, ನರಿ, ಪ್ರಾಣಿ, ಪಕ್ಷಿಗಳಿಗೆ ದೊರಕಬಾರದು ಎಂಬ ಕಾರಣಕ್ಕೆ ಅದಕ್ಕಾಗಿಯೇ ತೋಡಿದ ಗುಂಡಿಯೊಳಗೆ ಮುಚ್ಚಿ ಅದರ ಮೇಲೆ ಕಳ್ಳೆಯನ್ನು ಹಾಕುತ್ತಾರೆ.

### ೫.೬ ಸಾಂಸ್ಕೃತಿಕತೆಯ ಸಾರ್ವತ್ರಿಕತೆ

ಸಂಸ್ಕೃತಿಯ ಅರ್ಥ ವಿಶಾಲವಾದುದ್ದು. ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ವೈಯಕ್ತಿಕ ನೆಲೆಗಳಲ್ಲಿ ಸಂಸ್ಕೃತಿ ಒಂದೊಂದು ಅರ್ಥವನ್ನು ಕೊಡುತ್ತದೆ. ಸಂಸ್ಕೃತಿ ಎನ್ನವುದು ಶಿಷ್ಟ ಸಮುದಾಯದಲ್ಲಿ ಮಾತ್ರ ಇದೆ ಎಂದು ಹೇಳುವುದು ಪಕ್ಷಪಾತವಾದ ಧೋರಣೆಯಂತೆ ಕಂಡುಬರುತ್ತದೆ. ಯಾವುದೇ ತರಹದ ನಾಗರೀಕತೆಯ ಸಂಪರ್ಕವಿಲ್ಲದ ಅಲೆಮಾರಿ ಅರೆ ಅಲೆಮಾರಿ ಸಮೂದಾಯಗಳಲ್ಲಿಯೂ ಇದು ಇದೆ. ಯಾವುದೇ ಜನಸಮುದಾಯದಲ್ಲಿನ ಜೀವನ ಶೈಲಿಯು ಅವರದೇ ಆದ ನಂಬಿಕೆ, ಸಂಪ್ರದಾಯ, ಆಚರಣೆಗಳು, ದೈವಾರಾಧನಾ ಪದ್ಧತಿಗಳನ್ನು ರೂಪಿಸುವಂತಹ ಹಬ್ಬ ಹರಿದಿನಗಳು ಮತ್ತು ಜಾತ್ರೆ, ಉತ್ಸವಗಳು ಆಯಾ ಜನಾಂಗದ ಸಂಸ್ಕೃತಿಯನ್ನು ರೂಪಿಸುತ್ತವೆ. ಸಂಸ್ಕೃತಿಯ ಬಾಹ್ಯ ವಿಕಾಸದಲ್ಲಿ ಇದನ್ನು ಭೌತಿಕ ಸಂಸ್ಕೃತಿ ಎಂದು ಕರೆಯುತ್ತಾರೆ.

ಈ ಭೌತಿಕ ಸಂಸ್ಕೃತಿಯೂ ಕಾಲದಿಂದ ಕಾಲಕ್ಕೆ ಬದಲಾಗುತ್ತದೆ. ಈ ಬದಲಾವಣೆ?? ಬೇರೊಂದು ಸಂಸ್ಕೃತಿಯ ಪ್ರೇರಣೆ ಮತ್ತು ಪ್ರಭಾವಗಳಿರುತ್ತವೆ. ಇದರಲ್ಲಿ ಕೆಲವೊಂದು ಹೊಸ ಅಂಶಗಳು ಸೇರ್ಪಡೆಯಾಗಿ ಮೂಲದಲ್ಲಿದ್ದ ಅಂಶಗಳು ಮರೆಯಾಗುತ್ತವೆ. ಇಂತಹ ಪ್ರಕ್ರಿಯೆಯಲ್ಲಿ ಆ ಜನಾಂಗದಲ್ಲಿರುವ ಪರಂಪರೆ, ಸಾಹಿತ್ಯ, ಕಲೆ, ನಂಬಿಕೆ, ಸಂಪ್ರದಾಯ ಹಾಗೂ ಆಚರಣೆಗಳಂತಹ ಪ್ರಮುಖ ಅಂಶಗಳು ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಬಳುವಳಿಯಾಗಿ ಬರುತ್ತವೆ. ಇವುಗಳು ಲಿಖಿತ ರೂಪದಲ್ಲಿರಬಹುದು ಇಲ್ಲವೇ ಮೌಖಿಕ ಆಚರಣೆ, ನಂಬಿಕೆ-ಸಂಪ್ರದಾಯದ ರೂಪದಲ್ಲಿ ಇರಬಹುದು. ಆದರೆ ಇದು ಪರಂಪರೆಯ ಕೊಡುಗೆಯಾಗಿರುವುದು ಗಮನಾರ್ಹ ಅಂಶವಾಗಿದೆ. ಮಾನವನ ಸಂಸ್ಕೃತಿಯ ಉಗಮದ ಹಿನ್ನೆಲೆ ಮತ್ತು ಮಹತ್ವವನ್ನು ಕುರಿತಂತೆ ನಿರ್ದಿಷ್ಟವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಆದರೂ ಸಂಸ್ಕೃತಿಯನ್ನು ಕುರಿತಾದಂತೆ ಅನೇಕ ವಿದ್ವಾಂಸರು ತಮ್ಮ ತಮ್ಮ ದೃಷ್ಟಿಕೋನಗಳಲ್ಲಿ ಅನೇಕ ಸಿದ್ದಾಂಗಳನ್ನು ಮಂಡಿಸಿದ್ದಾರೆ. 'ಸಂಸ್ಕೃತಿ'ಶಬ್ದವನ್ನು ಕುರಿತು 'ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾದಲ್ಲಿ "ನಾಗರಿಕ ಜನಾಂಗದ ಅಪಂಡಿತ ಕುಲಗಳಲ್ಲಿ ಕಾಣಬರುವ ಪರಂಪರಾಗತ ಪ್ರಾಪ್ತವಾದ ತಿಳಿವು, ಅರಿವು ಅದೇ ಜನತೆಯ ಸಂಸ್ಕೃತಿ" ಎಂದು ಉಲ್ಲೇಖಿಸಿದ್ದಾರೆ. ಎನ್‌ಸೈಕ್ಲೋಪಿಡಿಯಾ ಆಫ್ ರಿಲಿಜಿಯನ್ ಅಂಡ್ ಎಥಿಕ್ಸ್‌ನಲ್ಲಿ "ಒಂದು ದೇಶದಲ್ಲಿರುವ ಕುಲಗಳು, ವ್ಯಕ್ತಿಗಳು, ಗುಂಪುಗಳ ಪದ್ಧತಿಗಳು, ಆಚಾರಗಳು, ನಂಬಿಕೆಗಳು ಇವು ಜನತೆಯ ಸಂಸ್ಕೃತಿ" ಎಂದು ವಿವರಣೆ ನೀಡಿದೆ. ಆಂಡ್ರೋಲಾಂಗ್ ಇವರು ಬರೆದ ಆರಿಜಿನ್ ಆಫ್ ರಿಲಿಜಿಯನ್ ಕೃತಿಯಲ್ಲಿ "ಜನತೆಯ ಸಂಸ್ಕೃತಿ ಎಂದರೆ ವೈದ್ಯಶ್ಯಾದಿಗಳಿಂದ ಬದಲಾಯಿಸದಿರುವ ಕುಲ ಬಳ್ಳಿಗಳು  ಬಳಕೆಯಲ್ಲಿರುವ ಪುರಾಣಗಳು, ಆಚಾರಗಳು ನಂಬಿಕೆಗಳು."[೨೧] ಎಂದಿದ್ದಾರೆ. ಹೀಗೆ ಸಂಸ್ಕೃತಿಯನ್ನು ಕುರಿತು ವಿದ್ವಾಂಸರು ಭಿನ್ನ ಭಿನ್ನ ದೃಷ್ಟಿಕೋನಗಳಿಂದ ವ್ಯಾಖ್ಯಾನಿಸಿದ್ದಾರೆ.

ದೈವಗಳ ಆಚರಣೆ ಮತ್ತು ಜಾತ್ರೆಯಲ್ಲಿ ಕಂಡುಬರುವ ಪಾರಂಪರಿಕವಾದ ಕೊಡುಕೊಳ್ಳುವಿಕೆಗಳು ಸಂಪ್ರದಾಯ ಬದ್ಧವಾಗಿ ನಡೆದುಕೊಂಡು ಬರುತ್ತಿರುವುದನ್ನು ಸಂಸ್ಕೃತಿಯ ನೆಲೆಯಲ್ಲಿ ವಿಶ್ಲೇಷಣೆ ಮಾಡಬೇಕಾಗುತ್ತದೆ. ಇತರ ಸಂಸ್ಕೃತಿಗಳ ಪ್ರೇರಣೆ-ಪ್ರಭಾವಗಳು ಇದ್ದರೂ ಸಹ ಕೇತೇದೇವರ ಜಾತ್ರೆ ಪ್ರತಿವರ್ಷ ಎಂದಿನಂತೆ ಜರುಗುತ್ತದೆ. ನಂಬಿಕೆ, ಸಂಪ್ರದಾಯ, ·ಬಲಿಪದ್ಧತಿ, ಉರುಳು ಸೇವೆ, ಹುರುಳಿ-ನವಣೆ ವ್ರತಾಚರಣಾ ಪದ್ಧತಿ ಮುಂತಾದ ಆಚರಣೆಗಳು ಜಾತ್ರೆಯಲ್ಲಿ ಜರುಗುತ್ತಿರುವುದು ಅದರ ಪರಂಪರೆಯ ಉಳಿವಿಗೆ ಪ್ರಮುಖ ಸಾಕ್ಷಿಯಾಗಿವೆ. ಪ್ರಸ್ತುತದಲ್ಲಿ ನಡೆಯುತ್ತಿರುವ ಕೇತಪ್ಪದೈವದ ಪ್ರತಿಯೊಂದು ಆಚರಣೆಗಳನ್ನು ಗಮನಿಸಿದರೆ ಇಲ್ಲಿ ಜನಪದದ ದೇಶಿಯ ಅಂಶಗಳೆಲ್ಲವೂ

ಸಂಸ್ಕೃತಿಯ ವಾಹಕವಾಗಿರುವುದು ಕಂಡುಬರುತ್ತದೆ. ನಿರ್ದಿಷ್ಟವಾಗಿ ಕೇತಪ್ಪ ದೈವವನ್ನು ಕುರಿತು ಜಾತ್ರೆ ಜರುಗುತ್ತದೆ. ಇಲ್ಲಿ ನಡೆಯುವ ಬಹತೇಕ ಆಚರಣೆಗಳು ಮೌಖಿಕವಾದವುಗಳಾಗಿರುತ್ತವೆ. ದೇವರನ್ನು ಕುರಿತಂತೆ ಇರುವ ಪುರಾಣ ಮತ್ತು ಐತಿಹ್ಯಗಳೆಲ್ಲವೂ ಶಿಷ್ಟ ವರ್ಗದವರಿಗಿಂತ ಭಿನ್ನವಾಗಿವೆ. ಜನಪದ ಸಂಸ್ಕೃತಿಯಲ್ಲಿ ಪ್ರಚಲಿತವಿರುವ ಅನೇಕ ಸಂಪ್ರದಾಯ ಆಚರಣೆಗಳು ಅರ್ಥವಿಲ್ಲದ ಮೌಢ್ಯಗಳು ಎಂಬ ಭಾವನೆ ಇಂದಿನ ಸಮಾಜದಲ್ಲಿ ತೀರಾ ಸಾಮಾನ್ಯವಾಗಿದೆ. ಆದರೆ ಬುಡಕಟ್ಟು ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಯಾವುದೇ ಆಚರಣೆಗಳು ಉದ್ದೇಶವಿಲ್ಲದೆ ಹುಟ್ಟಿಕೊಂಡಿರುವುದಿಲ್ಲ ಎಂಬುವುದನ್ನು ಸಾಭಿತುಪಡಿಸಲಾಗಿದೆ. ಇದಕ್ಕೆ ಒಂದು ಉತ್ತಮ ಉದಾಹರಣೆಯಾಗಿ ಕ್ಯಾತಪ್ಪ ದೇವರ ಆರಾಧನೆಯಲ್ಲಿ ಹುರುಳಿ–ನವಣೆ ನಿಷಿದ್ಧ. ಈ ನಿಷಿದ್ಧಕ್ಕೆ ಕಾರಣಗಳೇನು ಎಂಬುವುದನ್ನು ಕ್ಯಾತಪ್ಪನ ಪುರಾಣದಲ್ಲಿ ಹೇಗೆ ಸ್ಪಷ್ಟೀಕರಿಸಲಾಗಿದೆ ಎಂಬುವುದನ್ನು ವಿಶ್ಲೇಷಣೆಯೊಂದಿಗೆ ಸ್ಪಷ್ಟಪಡಿಸಬೇಕಾಗುತ್ತದೆ.

ಕ್ಯಾತಪ್ಪ ದೈವದ ಒಕ್ಕಲಿನ ಚಂದಮುತ್ತಿ ವಂಶಕ್ಕೆ ಸೇರಿದ ಕೋಣನೋರು, ಅಜ್ಜೇರು, ಬೊಮ್ಮನೋರು ಎಗಡಿನೋರು ಮುಂತಾದ ಬೆಡಗಿಗೆ ಸೇರಿದ ಕಾಡುಗೊಲ್ಲರು ಹುರುಳಿ(ಉಳ್ಳಿ) ನವಣೆಯನ್ನು ತಮ್ಮ ದೇವರಿಗೆ ಸೇರದಿರುವುದರಿಂದ ಆ ಧಾನ್ಯಗಳ ಬಳಕೆಯನ್ನೇ ಅವರು ಕೈಬಿಟ್ಟಿದ್ದಾರೆ. ಕಾರಣ ಹಿಂದೆ ಕೇತೇದೇವರು ಕಾಡುಗೊಲ್ಲರಿಗೆ ಒಲಿಯುವುದಕ್ಕೆ ಮುಂಚೆ ರೆಡ್ಡಿಗರಿಗೆ ಒಲಿದಿತ್ತು. ರೆಡ್ಡಿಗರಿಗೆ ಶ್ರೀಮಂತಿಕೆ ಹೆಚ್ಚಾಗಿ, ಅಹಂಕಾರ ಬಂದು ಕ್ಯಾತಪ್ಪ ದೇವರನ್ನು ಹುರುಳಿ–ನವಣೆ ತುಂಬುವ ವಾಡೇವುಗಳಲ್ಲಿ ಹಾಕಿ ಹುರುಳಿ–ನವಣೆ ತುಂಬಿಸಿದ್ದರು. ಇದರಿಂದ ಕಂಗೆಟ್ಟ ಕ್ಯಾತೇದೇವರು ವಾಡೇವಿನಿಂದ ಹೊರ ತೆಗೆಯಲು ರೆಡ್ಡಿಗರನ್ನು ಬೇಡಿಕೊಂಡಿತು, ಆದರೂ ಅವರು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಇದರಿಂದ ಬೇಸತ್ತ ಕ್ಯಾತಪ್ಪ ರೆಡ್ಡಿಗಳ ಮನೆಯ ದನ ಕಾಯುತ್ತಿದ್ದ ಕಾಡುಗೊಲ್ಲರವನಿಗೆ ಒಲಿದ. ಯಾವ ಕಾರಣಕ್ಕೂ ತನ್ನನ್ನೂ ಹುರುಳಿ–ನವಣೆಗಳಿಗೆ ಸೋಕಿಸದ ರೀತಿ ಆರಾಧಿಸಿದರೆ ನಿಮ್ಮನ್ನು ಉದ್ಧಾರ ಮಾಡುತ್ತೇನೆ ಎಂದು ವಾಗ್ದಾನ ನೀಡಿದ. ಪರಮಾಪ್ತ ಭಕ್ತ ಬೊಮ್ಮಣ್ಣ, ಕ್ಯಾತಪ್ಪನ ಕೋರಿಕೆಗೆ ಒಪ್ಪಿ ಆತನನ್ನು ಕುಲದೈವವನ್ನಾಗಿ ಸ್ವೀಕರಿಸಿದ. ಕ್ಯಾತಪ್ಪ ರೆಡ್ಡಿಗರ ಮನೆ ಹಾಳು ಮಾಡಿ ಅವರ ಸಿರಿ ಸಂಪತ್ತು ಮುರಿದು, ಅಹಂಕಾರ ಅಡಗಿಸಿ ಗೊಲ್ಲರವನ ಹಿಂದೆ ಬಂದ. ಅಂದಿನಿಂದ ಹುರುಳಿ–ನವಣೆ ಬಳಸುವುದನ್ನು ಬಿಟ್ಟರು. ಈ ಧಾನ್ಯಗಳ ಬತದವರಲ್ಲಿ 'ಅರ್ಧ' ಬತದವರು ಮತ್ತು 'ಪೂರ್ಣ' ಬತದವರು ಎಂದು ಎರಡು ಬಗೆಯವರಿದ್ದಾರೆ. ಹೀಗಾಗಲು ಕಾರಣ ಹಿಂದೆ ಅಣ್ಣ ತಮ್ಮಂದಿರು ಜಗಳವಾಡಿಕೊಂಡು ಕ್ಯಾತಪ್ಪ ದೇವರನ್ನು ಬಾವಿಯಲ್ಲಿ ಹಾಕಿದ್ದರು. ಮತ್ತೇ ಅಣ್ಣತಮ್ಮಂದಿರ ಮಧ್ಯೆ ಹೊಂದಾಣಿಕೆಯಾಗಿ

ಕ್ಯಾತಪ್ಪನನ್ನು ಬಾವಿಯಿಂದ ಮೇಲೆ ತೆಗೆಯುವಾಗ ಹಿರಿಯೂರು ತಾಲ್ಲೂಕಿನ ಯರಬಳ್ಳಿಯವರಿಗೆ ಪೂರಾ ಬಾಯಿಬತದ 'ತಾಳಿಬೊಟ್ಟು' ಸಿಕ್ಕಿತು. ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯವರಿಗೆ 'ಲಿಂಗ' ಸಿಕ್ಕಿದ್ದರಿಂದ ಅವರು ಅರ್ಧ ಬತಕ್ಕೆ ನಿಂತರು. ಹೀಗಾಗಿ ಚನ್ನಮ್ಮನಾಗತಿಹಳ್ಳಿ-ಯರಬಳ್ಳಿ, ಚಿತ್ರದುರ್ಗ, ಬೆಸ್ತರಹಳ್ಳಿ, ಗಾಣದಾಳು, ಗುಬ್ಬಿ ಇತರೆ ಭಾಗದಲ್ಲಿ ಕ್ಯಾತಪ್ಪನ ನೆಲೆಗಳು ಉಂಟಾದವು. ಆದರೆ ಯರಬಳ್ಳಿಯಲ್ಲಿರುವ ವಿವಿಧ ಬಗೆಯ ಕಲಾಮೇಳಗಳು ತಮ್ಮ ಕಲಾಪ್ರದರ್ಶನ ನೀಡುತ್ತವೆ. ಇವುಗಳಲ್ಲಿ ಮುಖ್ಯವಾದುವುಗಳೆಂದರೆ ಕೋಲಾಟ, ಉರುಮೆ, ಗಣೆ, ಚೌಡಿಕೆ, ಭಜನೆ ಇನ್ನು ಮುಂತಾದ ಜನಪದ ಕಲೆಗಳಾಗಿ ಆಯಾ ಪ್ರಾದೇಶಿಕ ಜನಮನದ ಸಂಸ್ಕೃತಿಯೊಂದಿಗೆ ಬೆರೆತು ಹೋಗಿರುತ್ತವೆ.

ಇವುಗಳಲ್ಲಿ ಕೆಲವು ಸಂಪ್ರದಾಯವಾಗಿ ಅಥವಾ ಆಚರಣೆಯಾಗಿ ಜನಪದರ ಜೀವನದಲ್ಲಿ ಸ್ಥಾನಪಡೆದುಕೊಂಡಿವೆ. ಈ ಕಲೆಗಳ ಮೂಲಕವೇ ಜನಪದರು ತಮ್ಮ ನೋವು-ನಲಿವುಗಳನ್ನು, ಕಷ್ಟ-ಸುಖಗಳನ್ನು, ಸೋಲು-ಗೆಲುವುಗಳನ್ನು ಅಭಿವ್ಯಕ್ತಿಸುತ್ತಾರೆ. ಕಲಾಮೇಳಗಳನ್ನು ಜನಪದರು ಮಹತ್ವದ ಆಚರಣೆಗಳೆಂದು ಪರಿಭಾವಿಸಿ, ಜಾತ್ರೆ ಉತ್ಸವಗಳಲ್ಲಿ ಅವುಗಳನ್ನು ಪ್ರದರ್ಶಿಸುತ್ತಾ ಬಂದಿದ್ದಾರೆ. ಜಾನಪದ ಕಲಾಮೇಳಗಳು ನಂಬಿಕೆ, ಸಂಪ್ರದಾಯ ಹಾಗೂ ಆಚರಣೆಗಳ ಹಿನ್ನಲೆಯಲ್ಲಿ ಹುಟ್ಟಿಕೊಂಡಿವೆ. ಇವುಗಳು ಸಂಪ್ರದಾಯಿಕವಾದ ದೈವಾರಾಧನೆಯ ಕ್ರಿಯೆಗಳಾಗಿ ಕಂಡು ಬಂದಿದ್ದರೂ, ಈ ಕಲೆಗಳನ್ನು ಭಯ ಭಕ್ತಿಯಿಂದ ಆರಾಧಿಸಿ, ಗೌರವಿಸಿ ಪೋಷಿಸಿಕೊಂಡು ಬಂದಿದ್ದಾರೆ. ಈ ಕಲೆಗಳೆಲ್ಲಾ ಒಂದು ಭೌಗೋಳಿಕ ಹಿನ್ನಲೆಯಲ್ಲಿದ್ದು ಅಲ್ಲಿನ ಜನ ಸಮುದಾಯದ ಆಶೋತ್ತರಗಳನ್ನು ಬಿಂಬಿಸುತ್ತವೆ. ಇವು ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳ ಮೇಲೆ ತಮ್ಮದೇ ಆದ ಪ್ರಭಾವ ಬೀರಿರುವುದನ್ನು ಗಮನಿಸಬಹುದು.

"ಆರಾಧನೆ ಮತ್ತು ಆಚರಣಾ ಕ್ರಿಯೆಗಳೇ ಕಲೆಗಳಾಗಿ ವಿಕಾಸ ಹೊಂದಿ ಪೂರ್ಣ ಸ್ವರೂಪದ ಕಲೆಗಳಾಗಿದ್ದು ಒಂದು ಬಗೆಯಾದರೆ; ಧರ್ಮ ಅಥವಾ ಪಂಥ ಪ್ರಸಾರಕ್ಕಾಗಿ ಹುಟ್ಟಿಸಿದ ಕಲೆಗಳು ನಂತರ ಧರ್ಮ ಪಂಥದ ಉದ್ದೇಶ ಮೀರಿ ಸಾರ್ವಜನಿಕ ಕಲೆಗಳಾದದ್ದು ಇನ್ನೊಂದು ಬಗೆ. ಕಲೆಯೇ ವೃತ್ತಿಯಾಗಿ ನಂತರ ಅದೊಂದು ಪರಂಪರೆಯಾಗಿ ಬೆಳೆದದ್ದು ಒಂದು ಬಗೆಯಾದರೆ ಇರುವ ವ್ಯವಸ್ಥೆಗೆ ಪ್ರತಿಭಟನೆಯಾಗಿ ಹೊಸ ಕಲೆಗಳು ಹುಟ್ಟಿಕೊಂಡದ್ದು ಇನ್ನೊಂದು ಬಗೆ. ಕುತೂಹಲವನ್ನು ಕೆರಳಿಸುವ ಕಲೆಗಳು ನಮ್ಮ ಸಂಸ್ಕೃತಿ ಅಧ್ಯಯನಕ್ಕೆ ಪ್ರಧಾನ ಆಕರಗಳಾಗುತ್ತವೆ."[೨] ಎಂಬ ವಿದ್ವಾಂಸರ ಅಭಿಪ್ರಾಯದಿಂದ ಜನಪದ ಕಲೆ ಸ್ವರೂಪ ಮತ್ತು ಉದ್ದೇಶಗಳ ದೃಷ್ಟಿಯಿಂದ ಮಹತ್ವ ಪೂರ್ಣವಾದುದಾಗಿದೆ. ಜನಪದ ಕಲಾಪ್ರದರ್ಶನಗಳಿಗೆ ಅವುಗಳದೇ ಆದ

ಸಾಹಿತ್ಯವಿದೆ. ಇವುಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾದ ಸಂಸ್ಕೃತಿಯೂ ಅಡಕವಾಗಿರುತ್ತದೆ. ಇಲ್ಲಿನ ಸಂಗೀತ, ನೃತ್ಯ, ಕುಣಿತ ವೇಷಭೂಷಣಗಳೆಲ್ಲವೂ ಪ್ರಾದೇಶಿಕ ವೈಶಿಷ್ಟ್ಯತೆಗಳಿಂದ ರೂಪಿತಗೊಂಡಿರುತ್ತವೆ. ಕ್ಯಾತಪ್ಪನ ಜಾತ್ರೆಯಲ್ಲಿ ಕೋಲಾಟ, ಗಣೆ, ಚೌಡಿಕೆ, ಉರುಮೆ ಹಾಗೂ ಬಯ ಲಾಟದಂತಹ ಕಲಾ ಮೇಳಗಳು ಜಾತ್ರೆಯಲ್ಲಿ ತಮ್ಮ ಪ್ರದರ್ಶನವನ್ನು ನೀಡುತ್ತವೆ. ಜಾತ್ರೆಯಲ್ಲಿ ನಡೆಯುವ ವಿವಿಧ ಬಗೆಯ ವಿಧಿ ಕ್ರಿಯೆಗಳೆಲ್ಲವೂ ಜನಪದ ಕಲೆಗಳಿಗೆ ಸ್ಫೂರ್ತಿ ನೀಡಿವೆ. ಆಚರಣೆಗಳಲ್ಲಿ ದೈವ ಭಕ್ತಿಯಿಂದ ಹಾಡುವುದು, ಕುಣಿಯುವುದು, ಬಗೆ ಬಗೆಯ ಹರಕೆಗಳನ್ನು ಒಪ್ಪಿಸುವುದು ಹೀಗೆ ಜನಪದರ ಕಲಾತ್ಮಕ ಅಭಿವ್ಯಕ್ತಿಗಳಾಗಿವೆ. ಇವುಗಳು ಜನತೆಯಲ್ಲಿ ಧಾರ್ಮಿಕತೆಯನ್ನು ಮೂಡಿಸುವುದರ ಜೊತೆಗೆ ವೈಚಾರಿಕ ಪ್ರಜ್ಞೆ ಮೂಡಿಸುತ್ತವೆ.

ಕಾರಬ್ಬದ ಸಂದರ್ಭದಲ್ಲಿ ಪೆಟ್ಟಿಗೆ ದೇವರುಗಳನ್ನು ಮೆರವಣಿಗೆ ಹೊರಡಿಸುವ ವಿಶೇಷ ಸಂದರ್ಭದಲ್ಲಿ ನಡೆಸುವ ಜಾನಪದ ಕಲೆಗಳಲ್ಲಿ ಕುರಿ ಕರೆಯುವುದು ಒಂದು ವಿಶೇಷ ಕಲಾಪ್ರಕಾರ. ಇದು ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಕಾಡುಗೊಲ್ಲರಲ್ಲಿ ಬಳಕೆಯಲ್ಲಿದೆ. ಕುರುಬರು, ಕುಂಚಿಟಿಗರು ಮತ್ತು ವ್ಯಾಸಬೇಡ ಬುಡಕಟ್ಟು ಸಮುದಾಯದವರು ತಮ್ಮ ಪಶುಪಾಲನೆ ಜೊತೆಗೆ ಕುರಿ ಪೋಷಣೆಯನ್ನು ಪ್ರಧಾನ ಕಸುಬಾಗಿ ಮಾಡಿಕೊಂಡು ಬಂದಿರುತ್ತಾರೆ. ಅವರು ತಮ್ಮ ಪ್ರೀತಿ ಪಾತ್ರವಾದ ಪ್ರಾಣಿಗಳನ್ನು ಕಲಾತ್ಮಕವಾಗಿ ಅಲಂಕರಿಸುವ, ಕುಣಿಸುವ ಹಾಗೂ ಕುರಿಗಳನ್ನು ಮೆರೆಸುವ ಕಲೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ದೇವರುಗಳ ಮೆರವಣಿಗೆ ಹಟ್ಟಿ ಹೊರಗೆ ಹೋಗುವಾಗ ಅಥವಾ ಹಟ್ಟಿ ಪ್ರವೇಶಿಸುವ ಸಂಜೆ ದೂಳಿನ ಸಂದರ್ಭದಲ್ಲಿ ಹಟ್ಟಿಯ ಮುಂಭಾಗದ ಬಯಲಿನಲ್ಲಿ ಕುರಿಯ ಪೋಷಕರು ತಮ್ಮ ಕುರಿಗಳನ್ನು ಹೊಡೆದುಕೊಂಡು ಬರುತ್ತಾರೆ. ದೇವರುಗಳು ಒಂದೆಡೆ ಗುಂಪಾಗಿ ನಿಂತಿರುತ್ತವೆ. ಗುಂಪಿನ ಸುತ್ತಲೂ ಮುರ್ನಾಲ್ಕು(ಗುಂಪಿನ) ಹಿಂಡಿನ ಕುರಿಗಳನ್ನು ಒಗ್ಗೂಡಿಸಿ ಕರೆಯುವುದು ರೂಢಿ. ಕುರಿ ಕರೆಯುವುದು ಎಂದರೆ ದೇವರ ಮುಂದೆ ಕುರಿಯ ಒಡೆಯ ಒಂದೆರಡು ಕುರಿಗಳಿಗೆ ಕೈ ಮೇವು ನೀಡಿ ಬೆಳೆಸುವುದರಿಂದ ತನ್ನ ಒಡೆಯನ ಜೊತೆಯಲ್ಲಿಯೇ ಇರುವುದು ಸಾಮಾನ್ಯ. ಅಂಥ ಕುರಿಯ ಜೊತೆಗೆ ಇನ್ನುಳಿದ ಎಲ್ಲಾ ಕುರಿಗಳನ್ನು ಹೊಡೆದು ತರುತ್ತಾರೆ. ಮಧ್ಯೆ ದೇವರು, ಅದರ ಸುತ್ತ ಜನಗಳು, (ಹರೆ) ಉರುಮೆ ವಾದ್ಯಗಳನ್ನು ಮೊದಲು ನಿಧಾನವಾಗಿ ಬಡಿಯುತ್ತಾರೆ. ಆಗ ಒಂದೆರಡು ಕುರಿಗಳನ್ನು ಹೊಡೆದು ತಂದು ಸುತ್ತುವರ್ತಿಸುತ್ತಿರುತ್ತಾರೆ. ಅವುಗಳ ಜೊತೆಗೆ ಉಳಿದ ಎಲ್ಲಾ ಕುರಿಗಳನ್ನು ಹೊಡೆದು ತರುತ್ತಾರೆ. ಮಧ್ಯೆ ದೇವರು ಅದರ ಸುತ್ತಲೂ ಜನರಿರುತ್ತಾರೆ. ಉರುಮೆಗಳನ್ನು ಜೋರಾಗಿ ಬಡಿಯುತ್ತಿದ್ದಂತೆಯೇ ಎಲ್ಲಾ ಕುರಿಗಳು ಜೋರಾಗಿ ಸುತ್ತುತ್ತಿರುತ್ತವೆ. ಕಡೆ ನಿಲ್ಲುತ್ತಾನೆ. ಆದರೆ ಕುರಿಗಳು ಹತ್ತು ಹದಿನೈದು ನಿಮಿಷಗಳ ಕಾಲ ಒಂದೇ ಸಮನೆ

ವೇಗವಾಗಿ ಸುತ್ತುತ್ತಿರುತ್ತವೆ. ಆಗ ಜನಗಳ ಶಿಳ್ಳು, ಕೇಕೆ ಕೂಗಾಟ ಮುಗಿಲು ಮುಟ್ಟುತ್ತದೆ. ಇದೊಂದು ರೋಚಕ ಕಲೆಯಾಗಿ ಕಂಡು ಬರುತ್ತದೆ. ಈ ಸಂದರ್ಭದಲ್ಲಿ ಗಗ್ಗರ ಪದ ಹೇಳುವುದುಂಟು.

**ಅಲಗು (ಬಾಕು)**



ಅಲಗು

ಇದು ಒಂದುವರೆ ಅಡಿ ಉದ್ದವಿರುತ್ತದೆ. ಇದಕ್ಕೆ ಹಿಡಿಕೆಯಿಂದ ಹಿಡಿದು ತುದಿಯವರೆಗೆ ಕೆಂಪುಬಣ್ಣದ ಬಟ್ಟೆಯನ್ನು ಸುತ್ತಿ ಬೆಳ್ಳಿ, ಹಿತ್ತಾಳೆ, ತಾಮ್ರದ ಪಟ್ಟಿ, ಅಣಸು, ಬಸವನ ವಿಗ್ರಹ, ನಾಗರೆಡೆ, ಹೊಂಬಾಳೆ, ಎಲೆ, ಛತ್ರಿ, ಲಿಂಗ ಮುತಾದ ಒಡವೆಗಳನ್ನು ಕಟ್ಟಿ ಅಲಗಿಗೆ ಸಿಂಗಾರ ಮಾಡುತ್ತಾರೆ. ಈ ಕತ್ತಿ, ಗುರಾಣಿ, ಖಡ್ಗಗಳನ್ನು ದೇವಸ್ಥಾನಗಳಲ್ಲಿ ಇಟ್ಟು ಪೂಜಿಸುತ್ತಿರುತ್ತಾರೆ. ತಮ್ಮ ವಂಶದ ವ್ಯಕ್ತಿ ಅಲಗಿನ ವೀರ ಎಂದು ಹೇಳಿಕೊಳ್ಳುತ್ತಾರೆ. ಹಬ್ಬ ಹರಿದಿನ, ಜಾತ್ರೆ, ಉತ್ಸವಗಳಲ್ಲಿ ಈರಗಾರರ ವಂಶಸ್ಥರು ಅಲಗು ಕಟ್ಟಿಕೊಂಡು ಪೆಟ್ಟಿಗೆ ದೇವರುಗಳ ಜೊತೆ ನಿಂತುಕೊಂಡು ಉರುಮೆ ವಾದ್ಯಗಳ ಗತಿ-ಗತ್ತುಗಳಿಗೆ ತಕ್ಕಂತೆ ಆವೇಶ ಭರಿತರಾಗಿ ಕೈಯ ಅಲಗಿನಿಂದ ತಲೆಯ ನಡುನೆತ್ತಿಗೆ ಅಥವಾ ಎದೆ, ಬಲ ಹಾಗೂ ಎಡ ಭುಜದ ಮೇಲೆ ಮೂರು ಬಾರಿ ಇರಿದುಕೊಳ್ಳುತ್ತಾರೆ. ಕೆಲವರು ಹೊಡೆದುಕೊಳ್ಳುತ್ತಾರೆ. ಅಲಗುಸೇವೆಗೆ ತೊಡಗುವ ಮುನ್ನ ಈರಗಾರರು ಉಪವಾಸ ವ್ರತಾಚರಣೆಯನ್ನು ಪಾಲಿಸಿಕೊಂಡು ಅಲಗುಸೇವೆ ಮಾಡಿದರೆ ಯಾವ ಕಷ್ಟವೂ ಬರುವುದಿಲ್ಲ ಎಂಬ ನಂಬಿಕೆಯೂ ಇದೆ. ಈ ಅಪರೂಪದ ಆಚರಣೆ

ಸಂಪ್ರದಾಯ ಕಾಡುಗೊಲ್ಲ ಅಥವಾ ಮ್ಯಾಸ ಸಮುದಾಯಗಳಲ್ಲಿ ಕಂಡು ಬರುತ್ತದೆ. ಕ್ಯಾತಪ್ಪನ ಜಾತ್ರೆಯ ಸಂದರ್ಭದಲ್ಲಿ ಅಲಗು ವೀರರ ಆಚರಣೆ ಪ್ರಧಾನವಾಗಿರುತ್ತದೆ. ಬಂಜಗೆರೆ ಈರಣ್ಣ, ಕೋಣನತಮ್ಮಣ್ಣ ದೇವರಿಗೆ ಅಲಗು ಕಟ್ಟಿ ಪ್ರದರ್ಶನ ಮಾಡುತ್ತಾರೆ. ಚಿತ್ತಯ್ಯ, ಕಾಟಯ್ಯ, ಸಿರಿಯಣ್ಣ, ದಾಳವಾಯಿ ಮುದ್ದಣ್ಣ ಮುಂತಾದ ಸಾಂಸ್ಕೃತಿಕ ಈರಗಾರರಿಗೆ ಅವರ ಹೆಸರಿನಲ್ಲಿ ಅಲಗು ಕಟ್ಟಿಸುವ ಹಾಗೂ ಅಲಗು ಸೇವೆಯ ಹರಕೆ ತೀರಿಸುವ ಸಂಪ್ರದಾಯ ಬುಡಕಟ್ಟು ಸಮುದಾಯಗಳಲ್ಲಿ ಕಂಡು ಬರುತ್ತದೆ.

**ಮೀಸಲು**

ದೇವರಿಗೆ ಹಾಲು ಮೀಸಲು ಒಪ್ಪಿಸುವುದು ಅತ್ಯಂತ ವಿಶಿಷ್ಟವಾದ ಸಂಪ್ರದಾಯ. ನಡೆಮುಡಿಯಲ್ಲಿ ಮೀಸಲು ಹಾಲು ಕರೆದು, ಮಣ್ಣಿನ ಹೊಸ ಮಡಿಕೆಯಲ್ಲಿ ಹೊತ್ತು ಬರಿಗಾಲಲ್ಲಿ ನಡೆದುಕೊಂಡು ಹೋಗಬೇಕು. ದಾರಿ ಮಧ್ಯೆ ಹೋಗುವಾಗ ಯಾರೊಂದಿಗೂ ಮಾತನಾಡುವಂತಿಲ್ಲ. ಊರೊಳಗೆ ಹಾದುಹೋಗುವಂತಿಲ್ಲ. ಹಾಲನ್ನು ದೇವರ ತಲೆಯ ಮೇಲೆ ಸುರಿಯುವುದು ಇಲ್ಲವೆ ಗುಡಿಯ ಪೌಳಿಯೊಳಗೆ ಹಾಲನ್ನು ಬಾಯಿಬತದಿಂದ ಕಾಯಿಸಿ(ಒಲೆಯನ್ನು ಬಾಯಿಂದ ಊದಬಾರದು, ಏಕೆಂದರೆ ಊದಿದರೆ ಬಾಯೆಂಜಲು ತಗಲಿ ಮೀಸಲು ಹಾಲು ಕೆಡುತ್ತವೆ ಎಂಬ ನಂಬಿಕೆ ಇದೆ. ಆದ್ದರಿಂದ ಮೊರದಿಂದ ಗಾಳಿ ಹಾಕಿ ಒಲೆ ಹಚ್ಚಬೇಕು.) ಹೆಪ್ಪು ಹಾಕಿ ಗುಡಿಯೊಳಗೇ ಇರುವ ಕಡೆಗೋಲಿನಿಂದ ಮೊಸರು ಕಡೆದು, ಬೆಣ್ಣೆ ತೆಗೆದು ಅದನ್ನು ಕಾಯಿಸಿ ತುಪ್ಪ ಮಾಡಿ ದೇವಸ್ಥಾನದ ಗರ್ಭಗುಡಿಯೊಳಗಿನ ದೀಪಕ್ಕೆ ಬಳಸಬೇಕು. ಮೊಸರು ಕಡೆದ ನಂತರ ಉಳಿಯುವ ಮಜ್ಜಿಗೆಯನ್ನು ಹರಿ ಸೇವೆಯಲ್ಲಿ ಬಳಸುವುದು. ಆದರೆ ಯಾವ ಕಾರಣಕ್ಕೂ ಹೊರ ಜನರಿಗೆ ಹಾಕುವಂತಿಲ್ಲ.

"ತಾಳವಟ್ಟಿ ಕಟ್ಟೆಮನೆಗೆ ಸೇರಿದ ಬೆಡಗಿನಗೊಲ್ಲರು ನವಣೆ-ಹುರುಳಿ ಬತವನ್ನು ಹೆಚ್ಚಿನ ರೀತಿಯಲ್ಲಿ ಆಚರಿಸಿದರೆ, ಕರಿಓಬೇನಹಳ್ಳಿ,ರಾಮನಹಳ್ಳಿ ಕಟ್ಟೆಮನೆಗೆ ಸೇರಿದ ಬೆಡಗಿನಗೊಲ್ಲರು ತಾಲವಟ್ಟಿ ಕಟ್ಟೆಮನೆಯ ಬೆಡಗಿನ ಜೊತೆಗಿದ್ದಾರೆ.(ಅಲ್ಪಸಂಖ್ಯಾತರಾದರೆ) ಅವರೂ ಸಹ ಈ ವ್ರತಗಳನ್ನು ಕಟ್ಟುನಿಟ್ಟಿನಿಂದ ಆಚರಿಸುತ್ತಾರೆ."[೩೩] ವರ್ಷಕ್ಕೊಮ್ಮೆ ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಕಾಳಿನ ಹಬ್ಬದಲ್ಲಿ, ಕಾಳನ್ನು ಉಪ್ಪು ಹಾಕದೆಯೇ ಬೇಯಿಸಿ ಆ ಹುರುಳಿ-ನವಣೆ ಕಾಳನ್ನು ಪ್ರಸಾದವೆಂದು ಸ್ವೀಕರಿಸುವುದನ್ನು ಬಿಟ್ಟರೆ ವರ್ಷದ ಉಳಿದ ಯಾವ ಸಂದರ್ಭದಲ್ಲಿಯೂ ಹುರುಳಿಯನ್ನಾಗಲೀ, ನವಣೆಯನ್ನಾಗಲಿ ಬಳಸುವುದಿಲ್ಲ. ಅಷ್ಟೇ ಏಕೆ ಕೈಯಿಂದಲೂ ಮುಟ್ಟುವುದಿಲ್ಲ. ಹುರುಳಿ-ನವಣೆ ಬೆಳೆದ ಹೊಲದಲ್ಲಿಯೂ ನಡೆಯುವುದಿಲ್ಲ. ಬೆಳೆಯುವುದಂತೂ ಇಲ್ಲವೇ ಇಲ್ಲ. ಕೇತೇದೇವರ ಜಾತ್ರೆಯ ಭಕ್ತರು ಬೇಯಿಸಿದ ಹುರುಳಿ ಕಾಳು-ನವಣೆಯನ್ನು ಪ್ರಸಾದವಾಗಿ ಸ್ವೀಕರಿಸಿ

### ಕ್ಯಾತಪ್ಪನ ಜಾತ್ರೆ

ಈ ಜಾತ್ರೆಯು ಧಾರ್ಮಿಕವಾಗಿ ಮಾನ್ಯತೆ ಪಡೆದಿದ್ದರೂ, ಸಾಂಸ್ಕೃತಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ. ಪ್ರಾಕೃತಿಕ ಸಂಪತ್ತು, ವಾಯುಗುಣ, ಜನ ಜೀವನದ ಮೇಲೆ ಅನೇಕ ಪ್ರೇರಣೆ ಮತ್ತು ಪ್ರಭಾವವನ್ನು ಜಾತ್ರೆಯು ಬೀರಿದೆ. ಕೇವಲ ಒಂದು ಜಾತಿ ಜನಾಂಗದಿಂದ ನಡೆಯುವ ಜಾತ್ರೆಯಾಗಿದ್ದರೂ ಬದಲಾಗಿ ವಿವಿಧ ಜಾತಿ, ಜನಾಂಗ ಮತ್ತು ಧರ್ಮದವರು ಸೇರುತ್ತಾರೆ. ಜಾತ್ರೆಯನ್ನು ಎಲ್ಲಾ ಸಂಸ್ಕೃತಿಯವರು ಸಹಕಾರ ಮತ್ತು ಸಹಬಾಳ್ವೆಯಿಂದ ನಡೆಸುತ್ತಾರೆ. ಅಲ್ಲಿ ಅನೇಕ ಸಂಸ್ಕೃತಿಗಳ ಸಂಗಮವೇರ್ಪಡುತ್ತದೆ. ಸಾಮಾಜಿಕ ಸೌಹಾರ್ದತೆ, ಸ್ನೇಹತ್ವದ ನೆಲೆಯೂ ರಚನೆಗೊಂಡಿರುವುದರ ಮೂಲಕ ಕೇತಪ್ಪನ ಜಾತ್ರೆ ತನ್ನ ಮಹತ್ವನ್ನು ಉಳಿಸಿಕೊಂಡಿರುವುದು ವಿಶೇಷವೆನ್ನಬಹುದು.

### ಹಾಲು ಮೀಸಲು

ಮೂಲತಃ ಪಶುಪಾಲಕರಾದ ಕಾಡುಗೊಲ್ಲರಲ್ಲಿ ಹಾಲು-ತುಪ್ಪಕ್ಕೆ ಕೊರತೆಯಿಲ್ಲ. ತಾವು ಉಂಡು ಉಳಿದ ಹಾಲು ತುಪ್ಪವನ್ನು ಮಾರಾಟ ಮಾಡುವ ವಾಣಿಜ್ಯೀಕರಣದ ಉಪ ವೃತ್ತಿಯನ್ನಾಗಿಸಿಕೊಳ್ಳುವ ಈ ಸಮುದಾಯ ಹಾಲು ಮೊಸರಿಗೆ ದೈವಿಕ ಪಾವಿತ್ರ್ಯವನ್ನು ನೀಡಿದ್ದಾರೆ.



**ಚಳ್ಳಕೆರೆ ಮರವಾಯಿ ಬೆಡಗಿನ ಕಾಡುಗೊಲ್ಲರು ಮೀಸಲು ಹಾಲು ಮೊಸರು ಕಡೆಯುವ ಚಿತ್ರ**

ವಾರದಲ್ಲಿ ಒಂದು ನಿಗಧಿತ ದಿನದಲ್ಲಿ ತಮ್ಮ ಹಟ್ಟಿಯೊಳಗಿನ ದೇವರುಗಳಿಗೆ ವಿಧಿ ಬದ್ಧವಾಗಿ ಹಾಲು ಮೀಸಲಿಡುವ ಪದ್ಧತಿ ಎಲ್ಲಾ ಬೆಡಗುಗಳ ಗೊಲ್ಲ ಸಮುದಾಯದಲ್ಲಿ ಸಾಮಾನ್ಯವಾಗಿದೆ. ಪ್ರತಿ ಮನೆಯಿಂದ ನಡೆಮುಡಿಯಿಂದ ತರಲಾದ ಹಾಲುಮೀಸಲನ್ನು

ವರ್ಷದಲ್ಲಿ ಉಳಿದ ಸಂದರ್ಭದ ಆರೇಳು ತಿಂಗಳು ಈ ಧಾನ್ಯಗಳನ್ನು ಬಳಸುತ್ತಾರೆ. ಕ್ಯಾತಪ್ಪನನ್ನು ರೆಡ್ಡಿಗರು ಹುರುಳಿ-ನವಣೆಗಳಲ್ಲಿ ಹೂತಿಟ್ಟದ್ದರ ಪರಿಣಾಮವಾಗಿ ಮುಂದಿನ ಹಂತದಲ್ಲಿ ಕ್ಯಾತಪ್ಪನ ಪೂಜಕರಾದ ಬೊಮ್ಮನೋರು ಮತ್ತು ಕೋಣನೋರು ಬೆಡಗಿನ ಕಾಡುಗೊಲ್ಲರು ಈ ಎರಡು ದಾನ್ಯಗಳನ್ನು ಪೂರ್ಣವಾಗಿ ನಿಷೇಧಕ್ಕೆ ಒಳಪಡಿಸಿದ್ದಾರೆ. ಈ ಎರಡೂ ಧಾನ್ಯಗಳ ಹೊಲದೊಳಗೂ ದೇವರುಗಳನ್ನು ಹೊತ್ತೊಯ್ಯದಿರಲು ನಿಷೇಧಿಸುವಷ್ಟರಮಟ್ಟಿಗೆ ಧಾರ್ಮಿಕ ಕಟ್ಟುಪಾಡುಗಳು ಹುಟ್ಟಿಕೊಂಡವು. ಬಲಿಷ್ಠ ಜಾತಿಯೊಂದರ ಕುಟುಂಬದ ಸಂಪತ್ತಿನ ಅಹಂಮಿಕೆಗೆ ಹುರುಳಿ-ನವಣೆ ಕಾರಣವಾಗಿದ್ದರಿಂದ ಅದನ್ನು ನಿರ್ಲಕ್ಷಿಸುತ್ತದೆ. ಅಲ್ಲದೆ. ಅವನನ್ನು ಮುಚ್ಚಿಡಲಿಕ್ಕೆ ಬಳಸಿಕೊಂಡ ರೆಡ್ಡಿ ಮನೆತನದ ಧಾನ್ಯಗಳು ಮುಂದೆ ಗೊಲ್ಲರಿಗೆ 'ಬಾಯಿಬತಕ್ಕೆ ಕಾರಣೀಭೂತವಾಗುತ್ತವೆ.

## ನಾಟಕ ಪ್ರದರ್ಶನ

ಪ್ರತಿವರ್ಷ ನಡೆಯುವ ಕ್ಯಾತಪ್ಪನ ಜಾತ್ರೆಯ ಸಂದರ್ಭದಲ್ಲಿ ಬಯಲಾಟಗಳ ಪ್ರದರ್ಶನ ಇಂದಿನವರೆಗೂ ನಡೆಸಿಕೊಂಡು ಬಂದಿದ್ದಾರೆ. ಕ್ಯಾತಗೊಂಡನಹಳ್ಳಿಯ ಶ್ರೀಕೃಷ್ಣ ಕಲಾ ಪೋಷಿತ ಸಂಘದ ರಂಗಭೂಮಿಯ ಕಲಾವಿದರು ಚನ್ನಮ್ಮನಾಗತಿಹಳ್ಳಿಯಲ್ಲಿ ಕರಿಭಂಟನ ಕಾಳಗ ಎಂಬ ಯಕ್ಷಗಾನ ನಾಟಕವನ್ನು ಪ್ರದಶಿಸುತ್ತಾ ಬಂದಿದ್ದಾರೆ. ಇಲ್ಲಿನ ಕಲಾವಿದರು ರಾಜ್ಯಮಟ್ಟದಲ್ಲಿ ನಾಟಕ ಪ್ರದರ್ಶನ ನೀಡಿ ಗೌರವ ಪಡೆದುಕೊಂಡು ಬಂದಿದ್ದಾರೆ. ಮಹಾಭಾರತ, ಕೃಷ್ಣಾರ್ಜುನ ಕಾಳಗ, ಮತ್ತು ಸಾಮಾಜಿಕ ನಾಟಕಗಳನ್ನು ಕಲಿತು ಪ್ರದರ್ಶಿಸುತ್ತಾರೆ. ನಾಟಕದ ದಿನದಂದು ನಿರ್ಮಾಣವಾಗುವ ರಂಗಸಜ್ಜಿಕೆ, ವೇಷಭೂಷಣ, ಬೆಳಕು, ಸಂಗೀತ, ನಟನೆ ಆಕರ್ಷಕವಾಗಿದ್ದು ಪ್ರೇಕ್ಷಕರ ದಂಡೇ ಸೇರಿಕೊಳ್ಳುವುದನ್ನು ಗಮನಿಸಬಹುದು. ಆದ್ದರಿಂದ ಕಲೆಗಳು ವಿಕೇಂದ್ರಿತ ನೆಲೆಗಳಿಂದ ಸಮುದಾಯವನ್ನು ವಿಶ್ಲೇಷಿಸುತ್ತವೆ ಎನ್ನಬಹುದು. ಕಲೆಯಲ್ಲಿನ ಧ್ವನಿ ಇಡೀ ಸಮುದಾಯದ ಪ್ರತಿನಿಧಿಯಾಗಿ ಅರ್ಥ ವಿನ್ಯಾಸವನ್ನು ಒಳಗೊಂಡಿರುವುದರಿಂದ ಪ್ರದರ್ಶಕ ಕಲೆಗಳಿಗೆ ಭಾಷೆ ಮುಖ್ಯವಾಗಿರುವುದಿಲ್ಲ. ಆದರೆ ಪ್ರದರ್ಶನವಿಲ್ಲದೆ ಅವುಗಳಿಗೆ ಅಸ್ಥಿತ್ವವಿಲ್ಲ. ಇವು ಪ್ರದರ್ಶನಗೊಳ್ಳುವಾಗ ಭೌಗೋಳಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂದರ್ಭ, ಕಾಲ, ಪ್ರೇಕ್ಷಕ ಎಲ್ಲವೂ ಒಂದು ಸಮೂಹದ ಸಂಸ್ಕೃತಿಗಳಾಗಿರುತ್ತವೆ. ಒಂದು ಸಮುದಾಯದ ಜೀವನ ಪದ್ಧತಿ, ಕಲೆ, ಕೃಷಿ, ಬಂಧುತ್ವದ ವಿಚಾರ, ವೈವಾಹಿಕ ಸಂಬಂಧಗಳು, ಕುಟುಂಬ ವ್ಯವಸ್ಥೆ, ಆಟ, ಕ್ರೀಡೆ ಇವೆಲ್ಲವು ಸಂಸ್ಕೃತಿಯ ಒಂದೊಂದು ಮುಖಗಳಾಗಿ ಹೊರಹೊಮ್ಮುತ್ತವೆ.

ದೇವರ ಗುಡಿ ಬಳಿ ಇರುವ ವಾರದ ಮನೆಯ ದೊಡ್ಡ ಹಂಡೆಯಲ್ಲಿ ಶೇಖರಿಸಲಾಗುತ್ತದೆ. ಈ ಹಾಲಿನಿಂದ ತೆಗೆದ ತುಪ್ಪದಿಂದ ಗುಡಿಯಲ್ಲಿ ದೀಪ ಹಚ್ಚಲಾಗುತ್ತದೆ. ಕೇತಪ್ಪನ ಸಂಪ್ರದಾಯದಲ್ಲಿ ಹಾಲು ಮೀಸಲಿನ ಹಾಲು ಕಂಬಿಗೆ ವಿಶಿಷ್ಟ ಸ್ಥಾನವಿದ್ದರೆ ಎತ್ತಪ್ಪ ಮತ್ತು ಜುಂಜಪ್ಪನ ಸಂಪ್ರದಾಯದಲ್ಲಿ ಹಾಲು ಮೀಸಲಿನ ಹಾಲುಗ್ಗಿಗೆ ವಿಶಿಷ್ಟ ಸ್ಥಾನವಿದೆ.

**ಹಬ್ಬಗಳು–ಜಾತ್ರೆಗಳು**

ನಗರ ಸಂಸ್ಕೃತಿಯಿಂದ ದೂರವಿದ್ದ ಕಾಡುಗೊಲ್ಲ ಸಮುದಾಯ ಇತರೆ ಸಮುದಾಯಗಳಿಗಿಂತ ವಿಭಿನ್ನ ಜೀವನ ಶೈಲಿಯನ್ನು ರೂಢಿಸಿಕೊಂಡವರಾದರೂ ಹಬ್ಬಗಳಲ್ಲಿ ಮಾತ್ರ ಭಿನ್ನತೆಯನ್ನು ಕಾಪಾಡಿಕೊಂಡಿರುವುದಿಲ್ಲ. ತಮ್ಮ ಸುತ್ತಲಿನಲ್ಲಿ ಮಾಡುವ ಅಥವಾ ಆಚರಿಸಲಾಗುವ ಎಲ್ಲಾ ಹಬ್ಬಗಳನ್ನು ಇವರೂ ಆಚರಿಸುತ್ತಾರೆ. ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ ಹಾಗೂ ಕ್ಯಾತಪ್ಪ ಇತರೆ ಈರಗಾರರ ಸಂಬಂಧಿಯಾಗಿ ಜಾತ್ರೆಗಳು ನಡೆಯುತ್ತವೆಯಾದರೂ ಗೊಲ್ಲರಲ್ಲಿ ವೈಭವಯುತವಾಗಿ ಗಮನಸೆಳೆಯುವ ಜಾತ್ರೆ ಎಂದರೆ ಕೇತಪ್ಪನ ಪರಿಷೆ. ಚಳ್ಳಕೆರೆ ತಾಲ್ಲೂಕು ಚನ್ನಮ್ಮನಾಗತಿಹಳ್ಳಿ ಸಮೀಪವಿರುವ ಪುರ್ಲೆಹಳ್ಳಿಯ ಉತ್ತರ ದಿಕ್ಕಿನ ವಸತಿ ದಿಬ್ಬದ ಬಯಲಲ್ಲಿ ಈ ಜಾತ್ರೆ ಜರಗುತ್ತದೆ. ಇಪ್ಪತ್ತೆಂಟು ದಿನಗಳಲ್ಲಿ ವಿವಿಧ ಕಾರ್ಯಗಳು ಜರುಗುತ್ತವೆ. ಇವುಗಳಲ್ಲಿ ಕಳ್ಳೇ ಗುಡಿಯ ಕಳಸ ಕೀಳುವ ಕಾರ್ಯಕ್ರಮ ಕೇಂದ್ರಬಿಂದುವಾಗಿದ್ದು ನೋಡುಗರಿಗೆ ರೋಮಾಂಚನವನ್ನುಂಟು ಮಾಡುತ್ತದೆ.

**ಉಳ್ಳಿ–ನವಣೆ(ವ್ರತ)ಬತ**

ಉಳ್ಳಿ–ನವಣೆ ಬತಗಳನ್ನು ಕಾಡುಗೊಲ್ಲರ ಕ್ಯಾತಪ್ಪನ ವಕ್ಕಲು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬಂದಿದ್ದಾರೆ. ಈ ದುಸ್ಥಿತಿಯಿಂದ ಪಾರುಮಾಡುವಂತೆ ಗೊಲ್ಲರ ಹುಡುಗನನ್ನು ಕೇಳಿಕೊಂಡ ಕ್ಯಾತಪ್ಪ ದೇವರು ಹುಳ್ಳಿ ನವಣೆ ಸೋಂಕಿನಿಂದ ದೂರವಿದ್ದು ಆರಾಧಿಸಿದರೆ ನಿಮ್ಮನ್ನು ಕಾಯುತ್ತೇನೆ ಎಂದು ನುಡಿದಾಗ ಅಂದಿನಿಂದ ಕೇತಪ್ಪ ಆಣತಿಯಂತೆ ಭಕ್ತರಾದ ಬೊಮ್ಮನೋರೊ ಬೆಡಗಿನವರು ಮತ್ತು ಕ್ವಾಣನೋರು ಬೆಡಗಿನವರು, ಸೋಮನೋರು ಬೆಡಗುಗಳ ಗುಂಪುಗಳು ಈ ಹುರುಳಿ–ನವಣೆ ಬತವನ್ನು ತಪ್ಪದೇ ಆಚರಿಸಿಕೊಂಡು ಬಂದರು ಎಂಬುವುದು ಈ ಐತಿಹ್ಯ ಕೇತಪ್ಪನ ಕಾವ್ಯ (ಪುರಾಣ)ದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಕ್ಯಾತೆದೇವರ ಕಾವ್ಯದಲ್ಲಿ ಒಂದು ಪದ ಹೀಗಿದೆ.



(ಮಹಿಳೆಯರು ಉಳ್ಳಿ-ನವಣೆ ಕುಟ್ಟುವ ಚಿತ್ರ)

*ಆಲು ಅನ್ನ ಕೊಡುವೆ ತೂಗು ಮಂಚ ಕೊಡುವೆ*

*ನೀವು ಮೂರು ತಿಂಗಳ ಬತ ಹಿಡಿದರೆ ನಿಮಗೆ*

*ಜೋಳಿಗೆ ಹೊನ್ನ ಕೊಡುವೇನು*

*ಆಲು ಅರಿವೇ ಸೊಪ್ಪು ವಾರೀಲಿ ಬರಲೆಂದು*

*ವಾರೀಲಿಸ ಉಳ್ಳಿ ಬಳಸಿದರೆ ಬಕುತರಿಗೆ*

*ಜೋಳಿಗೆ ಹೊನ್ನ ಕೊಡುವೇನು* (ಅಂ.ಹಿ.ಕಾ.ಜ.ಗೀ.)

ದೇವರ ಆಣತಿಯಂತೆ ಬಾಯಿ ಬತದವರು ನವಣೆ-ಹುರುಳಿಯನ್ನು ಬಳಸದೇ ಇರುವ ವಿಧಿ ನಿಷೇಧ ಪ್ರಕ್ರಿಯೆಗಳನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿದ್ದು ಜಾತ್ರಾ ಸಂದರ್ಭದಲ್ಲಿ ಪ್ರಸಾದ ಸ್ವೀಕರಣೆಯ ನಂತರ ಅವನ್ನು ಬಳಸುವ ಪದ್ಧತಿ ಇದೆ.ಇಂದಿಗೂ ಈ ಆಚರಣೆ ಸಾಂಸ್ಕೃತಿಕ ಒಳ ನೋಟಕ್ಕೆ ಎಡೆ ಮಾಡಿ ಕೊಡುತ್ತದೆ.

**ಗುಡಿಕಟ್ಟು ಮತ್ತು ಕಟ್ಟೆ ಮನೆಗಳು**

ಕಾಡುಗೊಲ್ಲ ಸಮುದಾಯದ ಒಂದೊಂದು ಬೆಡಗಿನವರು ಒಂದೊಂದು ದೇವರುಗಳನ್ನು ಮನೆ ದೇವರುಗಳನ್ನಾಗಿ ರೂಪಿಸಿಕೊಂಡಿದ್ದಾರೆ. ಆ ದೇವರ ನೆಲೆಯನ್ನು

ಅನುಕೂಲಕ್ಕಾಗಿ ತಾವುಗಳಲ್ಲಿಯೇ ಸ್ಥಾಪಿಸಿಕೊಂಡಿರುತ್ತಾರೆ. ಇವುಗಳನ್ನು ಅಂಬುಕೊಂಬುಗಳೆಂದು ಕರೆಯುತ್ತಾರೆ. ಒಂದು ಬೆಡಗಿನ ಎಂಟು–ಹತ್ತು ಅಂಬುಗಳು ಸೇರಿ ಗುಡಿಕಟ್ಟುಗಳೆನಿಸುತ್ತವೆ. ಒಂದು ಗುಡಿ ಕಟ್ಟಿನ ವ್ಯಾಪ್ತಿಯಲ್ಲಿ ಬರುವ ಗೊಲ್ಲರ ಸಂಪ್ರದಾಯ ಆಚರಣೆಗಳಲ್ಲಿ ವಿಧಿ ವಿಧಾನಗಳು ಸಾಮಾನ್ಯವಾಗಿ ಏಕೀಕೃತವಾಗಿರುತ್ತವೆ. "ಗುಡಿ ಗೌಡ" ಗುಡಿ ಕಟ್ಟಿನ ಎಲ್ಲಾ ಆಡಳಿತಾತ್ಮಕ ವ್ಯವಹಾರಗಳನ್ನು ನೋಡಿಕೊಳ್ಳುತ್ತಾನೆ. ಒಂದೇ ಕುಲ ಮೂಲದ ಹಲವು ಗುಡಿಕಟ್ಟುಗಳು ಸೇರಿ ಒಂದು ಕಟ್ಟೆ ಮನೆಯಾಗುತ್ತದೆ. ಕಟ್ಟೆಮನೆ ವ್ಯಾಪ್ತಿಯಲ್ಲಿ ಜನಾಂಗದ ನ್ಯಾಯ ತೀರ್ಮಾನಗಳು ಜರುಗುತ್ತವೆ. ಅದು ಗುಡಿಕಟ್ಟುಗಳ ತುತ್ತ ತುದಿಯ ನಿಯಂತ್ರಣ ಕೇಂದ್ರವೂ ಆಗಿರುತ್ತದೆ. ಕಟ್ಟೆಮನೆಯ ಯಜಮಾನನಿಗೆ ಎಲ್ಲಿಲ್ಲದ ಗೌರವ ಸ್ಥಾನಮಾನವಿರುತ್ತದೆ. ಆಂಧ್ರದ ರೇಪಲ್ಲಿ–ಮಾಪಲ್ಲಿಗಳು ಆರಂಭಿಕ ಕಟ್ಟೆಮನೆಗಳೆಂದು ಭಾವಿಸಲಾಗಿದೆ. ನಂತರದಲ್ಲಿ ಬೆಸ್ತರಹಳ್ಳಿ ಕಟ್ಟೆಮನೆ ರೂಪುಗೊಂಡು ತದ ನಂತರದಲ್ಲಿ ಕರಿಯೋಬೇನಹಳ್ಳಿ ಕಟ್ಟೆಮನೆ ಚಿತ್ತಮುತ್ತಿ ಕುಲದವರಿಗೆ, ತಾಳವಟ್ಟಿ ಕಟ್ಟೆಮನೆ ಚಂದ್ರಮುತ್ತಿ ಕುಲದವರಿಗೆ, ರಾಮನಹಳ್ಳಿ ರಾಮೇಗೌಡನ ಕುಲದೊಂದಿಗೆ ರೂಪುಗೊಂಡವು. ತಾಳವಟ್ಟಿ ಕಾಲಾಂತರದಲ್ಲಿ ಸ್ಥಗಿತಗೊಂಡು ಯರಬಳ್ಳಿಗೆ ಸ್ಥಳಾಂತರ ಹೊಂದಿತು. ಹಾಗೇ ರಾಮನಹಳ್ಳಿ ಗ್ರಾಮ ಬೇಚರಕ್ ಆಗಿ ಮರಡಿಹಳ್ಳಿಗೆ ಸ್ಥಳಾಂತರ ಹೊಂದಿತು. ಪ್ರಾಚೀನ ಈ ಮೂರು ಕಟ್ಟೆಮನೆಗಳು ಚಿತ್ರದುರ್ಗದಲ್ಲಿರುವುದು ವಿಶೇಷವಾಗಿದೆ. ತದ ನಂತರದ ದಿನಗಳಲ್ಲಿ ಗೊಲ್ಲರು ಚದುರಿ ವಲಸೆ ಹೋದಲ್ಲೂ ದೂರದ ಅಣ್ಣ ತಮ್ಮಂದಿರುಗಳು ಮೂಲ ಕಟ್ಟೆಮನೆಗೆ ಬರಲಿಕ್ಕಾಗದೆ ತಾವಿರುವಲ್ಲಿಯೇ ಉಪ ಕಟ್ಟೆಮನೆಗಳನ್ನು ರಚಿಸಿಕೊಂಡಿದ್ದಾರೆ. ಆಧುನಿಕ ಬದುಕಿನ ಈ ಹೊತ್ತಿನಲ್ಲಿ ಕಾಡುಗೊಲ್ಲರ ಕಟ್ಟೆಮನೆಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿವೆ. ಇವುಗಳು ನಾಮಕಾವಸ್ಥೆ ಸ್ಥಿತಿಗೆ ಬಂದು ತಲುಪಿವೆ. ಅವುಗಳ ಬಗೆಗಿದ್ದ ಗುಣ ಗೌರವಗಳು ಕ್ಷೀಣಿಸಿದೆ. "ಕಟ್ಟೆಗೆ ಕಟ್ಟಿಲ್ಲ" ಎಂಬ ಮಾತು ಕಟ್ಟೆಮನೆಗಳ ಅಳಿವಿನ ದ್ಯೋತಕವಾಗಿದೆ.

**ಹಾಲ್ಕಂಬಿ**

ಅಲೆಮಾರಿ ಮತ್ತು ಅರೆಅಲೆಮಾರಿ ಬುಡಕಟ್ಟು ಸಮುದಾಯಕ್ಕೆ ಸೇರಿದ ಕಾಡುಗೊಲ್ಲರು ಮೂಲತಃ ಪ್ರಕೃತಿ ಪ್ರಿಯರು. ಗುಡ್ಡ, ಬೆಟ್ಟ, ನದಿ, ಕಣಿವೆ, ಗಿಡ, ಮರಗಳನ್ನು ಅತೀವ ಪ್ರೀತಿ ಹಾಗೂ ಗೌರವದಿಂದ ಕಂಡವರು. ಆದ್ದರಿಂದಲೇ ತಮ್ಮ ಕುಲ, ಬಳ್ಳಿ, ಬೆಡಗುಗಳಿಗೆ ಗಿಡಮರಗಳ ಹೆಸರನ್ನೇ ಇಟ್ಟುಕೊಂಡಿದ್ದಾರೆ. ದನಕರು–ಕುರಿಗಳನ್ನು ಸಾಕಾಣೆ, ಪೋಷಣೆ ಮಾಡಿಕೊಳ್ಳುತ್ತಾ ಅವುಗಳ ಮೂಲಕ ತಮ್ಮ ಅಸ್ಥಿತ್ವವನ್ನು ಕಂಡುಕೊಂಡವರು. ಪ್ರಕೃತಿಯಲ್ಲಿ ಬೆಳೆದ ಗಿಡ,ಮರ ಕಡಿಯುವ ಪ್ರಸಂಗ ಬಂದಾಗ ಇವರು ಆ ಮರವನ್ನು ಪೂಜಿಸಿ ಕಡಿಯುವ ಪದ್ಧತಿಯಿದೆ. ಈ ಪದ್ಧತಿ ಕೇತಪ್ಪನ ಜಾತ್ರೆಯಲ್ಲಿ ಒಂದು ವಿಶಿಷ್ಟ

ಸಂಪ್ರದಾಯವಾಗಿ ಬೆಳೆದು ಬಂದಿದೆ. ಇಂಥವರೇ ಪೂಜೆ(ದೇವರ)ಮರವನ್ನು ಕಡಿಯಬೇಕು ಎಂಬ ಸಾಮಾಜಿಕ ಕಟ್ಟುಪಾಡು ಇವರಲ್ಲಿದೆ. ಈ ಮರ ಕಡಿಯುವರನ್ನು ಮರವಾಯಿ ಬೆಡಗಿನ ಗೊಲ್ಲರು ಎಂದು ಕರೆಯುತ್ತಾರೆ.

ಜಾತ್ರೆ, ಹಬ್ಬ ಹರಿದಿನಗಳಲ್ಲಿ ತಮ್ಮ ಆರಾಧ್ಯ ದೈವಗಳಿಗೆ ಸಲ್ಲಿಸುವ ಹಲವು ಬಗೆಯ ವಿಶಿಷ್ಟ ಸೇವೆಗಳಲ್ಲಿ ಇದು ಒಂದು. ಕಂಬಿ ಎಂದರೆ ಅಡ್ಡೆಯಂತಿರುವ ಒಂದು (ಉದ್ದದ ಕಟ್ಟಿಗೆಯ) ಸಾಧನ. ಈ ಕಂಬಿಯ ಎರಡು ಕಡೆಗಳಲ್ಲಿ ಅದರ ತುದಿಗೆ ಈಚಲು ಅಥವಾ ಪುಂಡಿನಾರಿನ ನೆಲುವುಗಳನ್ನು ಕಟ್ಟಿ ಅದರಲ್ಲಿ ಮೀಸಲು ಹಾಲುತುಂಬಿದ ಮಣ್ಣಿನ ಗಡಿಗೆ(ಹರಿವೆ)ಗಳನ್ನು ಹೊತ್ತು ತರುವ ಪದ್ಧತಿಯಿದೆ. ಜಾತ್ರೆ ಸಮಯದಲ್ಲಿ ಪ್ರತಿ ಗುಡಿಕಟ್ಟಿನಿಂದಲೂ ಕೇತಪ್ಪ ಹಾಗೂ ಎತ್ತಪ್ಪ ದೈವಗಳಿಗೆ ಹಾಲ್ಕಂಬಿಗಳನ್ನು ಹೆಗಲ ಮೇಲೆ ಹೊರುವ ಭಕ್ತರು ತಣ್ಣೀರು ಸ್ನಾನ ಮಾಡಿರಬೇಕು. ಉಪವಾಸ ವ್ರತ ಪಾಲನೆ ಮಾಡಬೇಕು. ಕಂಬಳಿಬ ಕೊಪ್ಪೆ ಹಾಕಿಕೊಂಡು ಅಡ್ಡೆಯನ್ನು ಹೆಗಲಿಗೆ ಹಾಕಿಕೊಂಡು ಬರಿಗಾಲಲ್ಲಿ ನಡೆದು ಹೋಗಬೇಕು. ಹಾಲ್ಕಂಬಿ ಹೊತ್ತು ನಡೆಯುವಾಗ ಯಾರೊಬ್ಬರ ಹತ್ತಿರ ಮಾತನಾಡಬಾರದು ಎಂಬ ಕಟ್ಟುನಿಟ್ಟಿನ ನಿಯಮವಿದೆ. ಒಂದು ವೇಳೆ ಮಾತನಾಡಿದರೆ ಮೀಸಲು ಕೆಡುತ್ತದೆ ಎಂಬ ನಂಬಿಕೆ ಅವರಲ್ಲಿದೆ.



**(ಪೂಜಾರಿ ಕ್ಯಾತಪ್ಪನ ಹಾಲುಕಂಬಿ ಹೊತ್ತಿರುವ ಚಿತ್ರ)**

ಹಾಲ್ಕಂಬಿ ಆರಾಧಕ ಪ್ರಮುಖ ದೈವಗಳೆಂದರೆ ಚನ್ನಮ್ಮನಾಗತಿಹಳ್ಳಿಯ ಹಾಲುಕ್ಯಾತೇಲಿಂಗ, ಚಿತ್ರದುರ್ಗದ ಹಿರೆ ಹಾಲಕ್ಯಾತೇಲಿಂಗ, ವೇಣುಕಲ್ಲುಗುಡ್ಡದ ಎತ್ತಪ್ಪ, ಯರಬಳ್ಳಿಯ ಹಾಲುಕುಡಿದಪ್ಪ, ಹಾಲ್ಗುಡಿದಪ್ಪ. ಈ ದೈವಗಳ ಹಬ್ಬ, ಉತ್ಸವ ಹಾಗೂ

ಜಾತ್ರಾ ಆಚರಣೆಯಲ್ಲಿ ಭಕ್ತರು ಹಾಲ್ಕಂಬಿ ಸೇವೆಯನ್ನು ತಪ್ಪದೇ ಸಲ್ಲಿಸುತ್ತಾರೆ. ಇದರಲ್ಲಿ ಎರಡು ವಿಧ ಚಿಕ್ಕ ಹಾಲ್ಕಂಬಿ ಮತ್ತು ದೊಡ್ಡ ಹಾಲ್ಕಂಬಿ. ಗಜ ಭೂತಾಳಿ, ರಕ್ತ ಭೂತಾಳಿ, ಹಾಲು ಭೂತಾಳಿ, ಕರಿ ಭೂತಾಳಿ, ಬಿಳಿ ಭೂತಾಳಿ, ನಾಗ ಭೂತಾಳಿ, ಬ್ರಹ್ಮ ಭೂತಾಳಿ, ಉಗ್ರ ಭೂತಾಳಿ ಮರಗಳಲ್ಲಿ ಹಾಲ್ಕಂಬಿ ಮಾಡಲಿಕ್ಕೆ ರಕ್ತ ಭೂತಾಳಿಯೇ ಶ್ರೇಷ್ಠ. ಈ ಮರ ದೊರೆಯದಿದ್ದಲ್ಲಿ ಹಾಲು ಭೂತಾಳಿ ಇಲ್ಲವೆ ಬ್ಯಾಟೆಮರ ಆದರೂ ಬಳಸುತ್ತಾರೆ. ದೇವರ ಹೇಳಿಕೆ ಕೇಳಿಯೇ ಮರ ಕಡಿಯಲು ಹೊರಡಬೇಕು. ಭಾನುವಾರ ಅಮಾವಾಸೆ ದಿನ ಹಗಲೊತ್ತಿನಲ್ಲಿ ಕಟ್ಟುನಿಟ್ಟಿನ ಉಪವಾಸ ವ್ರತವಿದ್ದ ಒಂದೇ ಹೆಸರಿನ ಇಬ್ಬರು ವ್ಯಕ್ತಿಗಳು ಗಂಡು ಗೊಡಲಿಯಿಂದ ಮರದ ಕೊಂಬೆಗೆ ಒಂದೊಂದು ಕಚ್ಚು ಹಾಕಿ ಕಡಿಯಬೇಕು. ಆ ಕೊಂಬೆ ನೆಲಕ್ಕೆ ತಾಗದಂತೆ ಹೊತ್ತು ತರಬೇಕು. ದೇವರ ಗರ್ಭಗುಡಿ ಮುಂದೆ ಕರಿಕಂಬಳಿ ತೆರೆಕಟ್ಟಿ ತಂದ ಭೂತಾಳಿ ಮರದ ಕೊಂಬೆಯಲ್ಲಿನ ಕವೆಗಳನ್ನು ನೀಟಾಗಿ ಸವರಿ ಐದಿಂಚು ಅಗಲ, ಏಳು ಅಡಿ ಉದ್ದ ಅಳತೆಗೆ ತಕ್ಕಂತೆ ಮರದ ಕಟ್ಟಿಗೆ(ದೆಬ್ಬೆ)ಯನ್ನು ಕಡಿದು ಕಂಬಿಯನ್ನು ತಯಾರಿಸುತ್ತಾರೆ.

ಆ ಕಂಬಿಗೆ ಮೀಸಲು ಹಸಿಹಾಲು, ಗೋಗಂಜಲು, ಜೇನುತುಪ್ಪ ಮತ್ತು ಅರಿಶಿಣಪುಡಿ ಮಿಶ್ರಣ ಮಾಡಿ ಆ ಕಟ್ಟಿಗೆಗೆ ಸುತ್ತಲೂ ಲೇಪನ ಮಾಡಿದ ನಂತರ ಆ ಕಂಬಿಗೆ ಸುತ್ತಲೂ ಕೆಂಪು ಬಣ್ಣದ ಬಟ್ಟೆ ಸುತ್ತಿ, ಅದಕ್ಕೆ ಅಲ್ಲಲ್ಲಿ ಬೆಳ್ಳಿಯ ಪಟ್ಟಿ ಕಟ್ಟಿಸುತ್ತಾರೆ. ಏಳು ತೊರೆಯ ನೀರು, ಏಳು ಬಾವಿ ನೀರು, ಏಳು ತರದ ಹೂವು ತಂದು ವಿಶೇಷ ಪೂಜೆ ಮಾಡಿದ ನಂತರ ಆ ಕಂಬಿಗೆ ರುದ್ರಾಕ್ಷಿ, ಬೆಳ್ಳಿ, ತಾಮ್ರದ ಲೋಹದಿಂದ ಲಿಂಗ ಮತ್ತು ಪ್ರಭಾವಳಿ ಮಾಡಿಸಿ ಅದಕ್ಕೆ ಕಟ್ಟುತ್ತಾರೆ. ಇದಕ್ಕೆ ಹೆಣ್ಣುಮಕ್ಕಳ ನೆರಳು ಸೋಕಬಾರದು, ಸೋಕಿದರೆ ಹಾಲ್ಕಂಬಿಯ ಶಕ್ತಿ ಕುಂದುತ್ತದೆ ಎಂಬ ನಂಬಿಕೆ ಇದೆ. ಹೀಗೆ ವಿಶಿಷ್ಟ ರೀತಿಯಲ್ಲಿ ತಯಾರಿಸಿದ ಕಂಬಿಯನ್ನು ಗರ್ಭಗುಡಿಯ ಪೆಟ್ಟಿಗೆ ದೇವರ ತಲೆ ಮೇಲೆ ಅಡ್ಡವಾಗಿ ಕಟ್ಟಿ ಅದನ್ನು ನಿತ್ಯ ಪೂಜಿಸುತ್ತಾರೆ. ಕಾಡುಗೊಲ್ಲರ ಕೆಲ ಬೆಡಗಿನವರು ಈ ಕಂಬಿಯನ್ನೇ ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಹಾಲ್ಕಂಬಿ ದೇವರೆಂತಲೂ ಪೂಜಿಸುತ್ತಿದ್ದಾರೆ. ಈ ಆಚರಣೆ ಕಾಡುಗೊಲ್ಲರಲ್ಲಿ ಮಾತ್ರ ವಿಶೇಷವಾಗಿ ಕಂಡು ಬರುತ್ತದೆ.

**ಕಳ್ಳೆಮುಳ್ಳಿನ ಗುಡಿ ನಿರ್ಮಾಣ ಮತ್ತು ಕಳಶ ಪ್ರತಿಷ್ಠಾಪನೆ**

ಹದಿಮೂರು ಗುಡಿಕಟ್ಟುಗಳ ಭಕ್ತರು ಜಾತ್ರೆಯ ಇಪ್ಪತ್ತೊಂದನೆ ದಿನವಾದ ಬುಧವಾರದಂದು ಚಳ್ಳಕೆರೆ ತಾಲ್ಲೂಕು ಪುರ್ಲೆಹಳ್ಳಿ ವಸತಿ ದಿಬ್ಬದ ರೀ.ಸ.ನಂ.೫೬-೫೭ರ ಹದಿನೈದು ಎಕರೆ ಬಯಲು ಪ್ರದೇಶದಲ್ಲಿ ಸೇರಿಕೊಳ್ಳುತ್ತಾರೆ. ಈಗಾಗಲೆ ಆ ಸ್ಥಳಕ್ಕೆ ಕೊಂಡೊಯ್ದಿದ್ದ ಕಳ್ಳೆಮುಳ್ಳು ಇತರೆ ವಸ್ತುಗಳನ್ನು ಗುಡಿ ನಿರ್ಮಾಣಕ್ಕೆ ಸಜ್ಜುಗೊಳಿಸುತ್ತಾರೆ.

ಗುಡಿಕಟ್ಟಲು ನಿಗದಿ ಮಾಡಿದ ಸ್ಥಳವನ್ನು ಸ್ವಚ್ಛಗೊಳಿಸುವ ಪ್ರಕ್ರಿಯೆ ಆರಂಭವಾಗುತ್ತಿದ್ದಂತೆ, ಜಮಾಯಿಸಿದ್ದ ಮುಳ್ಳುಕಳ್ಳೆಯ ಕೊಂಬೆಗಳನ್ನು ಒಂದೊಂದಾಗಿ ಜೋಡಿಸುತ್ತಿರುತ್ತಾರೆ. ೧೩*೧ಳ ಅಡಿ ಅಗಲದ ಜಾಗದಲ್ಲಿ ಬಾರೆಮುಳ್ಳಿನ ರೆಂಬೆ-ಕೊಂಬೆಗಳನ್ನು ಕಟ್ಟಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಎಳೆದು ನೀರಿನಿಂದ ರೊಳ್ಳೆ ಮಾಡಿ ಅದನ್ನು ಮುಳ್ಳುಕಳ್ಳೆಯ ಮೂಲಕ ನೆಲವನ್ನು ಸಾರಿಸಿ ಗಟ್ಟಿಗೊಳಿಸುತ್ತಾರೆ. ಪ್ರತಿ ವರ್ಷವೂ ಒಂದೇ ಜಾಗದಲ್ಲಿ ಗುಡಿ ಕಟ್ಟುವ ಪದ್ಧತಿ ಇಲ್ಲ. ವರ್ಷ ವರ್ಷವೂ ಜಾಗವನ್ನು ಬದಲಿಸುವ ಪದ್ಧತಿ ಇದೆ.

ಕಾಡುಗೊಲ್ಲರ ಪ್ರಮುಖ ಬೆಡಗುಗಳ ಮುಖ್ಯಸ್ಥರು ಗುಡಿ ನಿರ್ಮಾಣದ ಜವಬ್ದಾರಿಯನ್ನು ಹೊತ್ತಿರುತ್ತಾರೆ. ಗುಡಿ ಕಟ್ಟುವುದನ್ನು ಎರಡು ಭಾಗ ಮಾಡಿಕೊಳ್ಳುತ್ತಾರೆ. ಉತ್ತರ ಮತ್ತು ದಕ್ಷಿಣ. ಉತ್ತರದ ಭಾಗ ದಿಕ್ಕಿನದು ಕೋಣನ ಬೆಡಗಿನದು, ದಕ್ಷಿಣ ದಿಕ್ಕಿನ ಭಾಗ ಬೊಮ್ಮನ ಬೆಡಗಿನವರದು ಎಂದು. ವಸತಿದಿಬ್ಬದ ಬಯಲಲ್ಲಿ ರಾತ್ರಿಯೆಲ್ಲಾ ಅಲ್ಲಲ್ಲಿ ಬೆಂಕಿ ಹೊತ್ತಿಸಿಕೊಂಡು ಆ ಸ್ಥಳದಲ್ಲಿ ಜಮಾಯಿಸಿದ್ದ ಬಾರೆ, ಕಳ್ಳೆ, ಕವಳಿ, ತುಗ್ಗಲಿ ಮೋರು ಹಾಗೂ ಕರಿಜಾಲಿಯ ಹಸಿ ಕಟ್ಟಿಗೆಯ ಗಟ್ಟಿಕವೆಗಳನ್ನು ಆ ಬೆಂಕಿಯಲ್ಲಿ ಹದಕ್ಕೆ ಬರುವಾಗೆ ಸುಟ್ಟು ಕಳ್ಳೆಕಂಟೆಗಳನ್ನು ಬಾಗಿಸುತ್ತಾರೆ. ಅಂಕೊಡೊಂಕಾದ ಕೆಲವನ್ನು ಕತ್ತಿ,ಕೊಡಲಿ ಇತರೆ ಆಯುಧಗಳಿಂದ ಸವರಿಕೊಳ್ಳುತ್ತಾ, ಸಾಪು ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಗಳಗಳನ್ನು ಅಲ್ಲಲ್ಲಿ ಕಟ್ಟಲಿಕ್ಕೆ ಅಥವಾ ಇಂಡಿಗೆ ಬಿಗಿಯಲಿಕ್ಕೆ ಆಸದನಾರು ಮತ್ತು ಹಸಿ ಆಪು ಸಿವುಡುಗಳನ್ನು ಬಿಚ್ಚಿ ಎಳೆ ಎಳೆಯಾಗಿ ಜೋಡಿಸಿಕೊಳ್ಳುತ್ತಿರುತ್ತಾರೆ.



(ಕ್ಯಾತಪ್ಪನ ಕಳ್ಳೆಮುಳ್ಳಿನ ಗುಡಿ ಮೇಲೆ ಈರಗಾರರು ಕಳಸ ಪ್ರತಿಷ್ಠಾಪಿಸುತ್ತಿರುವ ಚಿತ್ರ)

ಒಂದು ಗುಂಪು ದಾಸೋಹದ ಜವಬ್ದಾರಿವಹಿಸಿಕೊಂಡು ಭಕ್ತರು ತಂದಿದ್ದ ಮೀಸಲು ಕುಂಬಳ ಮತ್ತು ಬೆಲ್ಲದಿಂದ ಕುಂಬಳಿಕಾಯಿ ಬಜ್ಜ(ತೊಗೆ) ಮತ್ತು ರಾಗಿ ಮುದ್ದೆಯ ಆಹಾರವನ್ನು ತಯಾರಿಸುತ್ತಾರೆ. ಬೆಳಗಿನ ಜಾವ ನಾಲ್ಕೈದು ಗಂಟೆ ಸಮಯದಲ್ಲಿಯೇ ದಾಸೋಹಕ್ಕೆ ತಯಾರು ಮಾಡಿಕೊಂಡು ಎಡೆ ಹಾಕಲು ದೇವರಿಗಾಗಿ ಕಾಯುತ್ತಿರುತ್ತಾರೆ. ಅತ್ತ ಬೆಳಗಿನ ಜಾವ ಕೋಳಿ ಕೂಗುವ ಮುನ್ನ ಮೂರು ಗಂಟೆ ಸುಮಾರಿನಲ್ಲಿ ಚನ್ನಮ್ಮನಾಗತಿಹಳ್ಳಿಯಲ್ಲಿ ಪಟ್ಟದ ಪೂಜಾರಿಗಳು, ದಾಸಯ್ಯಗಳು ಮತ್ತು ಗೌಡರು ಕ್ಯಾತೆದೇವರಿಗೆ ಪೂಜೆ ಸಲ್ಲಿಸಿ ಗುಡಿಯೊಳಗೆ ಇದ್ದ ಬಸವ ಕಂಚಿನ ವಿಗ್ರಹ, ಪಂಚಕಳಸ, ಕಡೆಗೋಲು ಹಾಗೂ ಘಂಟೆ, ಧೂಪದಾರತಿ ಇತರೆ ಪೂಜಾ ಪರಿಕರಗಳನ್ನು ಹೊಸ ಬಿದಿರ ಪುಟ್ಟಿಗೆಯಲ್ಲಿ ತೆಗೆಕೊಂಡು ವಸತಿ ದಿಬ್ಬಕ್ಕೆ ಬರುವಾಗ ಪೂಜಾರಿಯ ಕಾಲಿಗೆ ನೀರಿನ ಸೆಳೆವು ಕೊಟ್ಟು ಸಾಗಾಕುತ್ತಾರೆ. ದೇವರ ಪರಿಕರಗಳನ್ನು ಹೊತ್ತು ವಸತಿದಿಬ್ಬಕ್ಕೆ ಕಾಲ್ನಡಿಯಲ್ಲಿಯೇ ಹೋಗಬೇಕು. ಸುಮಾರು ಐದಾರು ಗಂಟೆಗೆ ದೇವರು ವಸತಿ ದಿಬ್ಬಕ್ಕೆ ಹೋಗುತ್ತದೆ. ಅಲ್ಲಿ ದೈವಕೆ ಪೂಜೆಯೊಂದಿಗೆ ಕುಂಬಳ ಕಾಯಿ ಮತ್ತು ರಾಗಿಮುದ್ದೆಯ ದಾಸೋಹವನ್ನು ನೆರವೇರಿಸಿದ ನಂತರ ಗುಡಿ ಕಟ್ಟುವ ಕಾರ್ಯ ಆರಂಭಿಸುತ್ತಾರೆ. ಹಿರಿಯರು ಗೊತ್ತುಪಡಿಸಿದ ಅರವತ್ತು ಅಡಿ ಹೊರ ಮತ್ತು ಒಳ ಸುತ್ತಳತೆಯ ಜಾಗದ ಮಧ್ಯಭಾಗದಲ್ಲಿ ಅರ್ಧಅಡಿ ಅಗಲ, ಒಂದುವರೆ ಅಡಿ ಆಳಕ್ಕೆ ಗುಂಡಿ ತೋಡುತ್ತಾರೆ. ಕೇತೇದೇವರ ಪೂಜಾರಿ ಅರಿಶಿಣದ ಪುಡಿ, ಮೀಸಲು ಹಾಲು, ಬಾಳೆಹಣ್ಣು ಕಲಸಿ ಗುಂಡಿ(ತಗ್ಗು)ಯ ಸುತ್ತಲೂ ವೃತ್ತಾಕಾರದಲ್ಲಿ ಮಂಡಲ ಬರೆದು ಪೂಜೆ ಮಾಡುತ್ತಾನೆ. ಗುಂಡಿಯೊಳಕ್ಕೆ ಮೀಸಲು ಹಾಲು, ಎಲೆ, ಅಡಕೆ, ಬಾಳೆಹಣ್ಣು ಮತ್ತು ದಕ್ಷಿಣೆ(ದುಡ್ಡು)ಯನ್ನು ಹಾಕಿದ ನಂತರ ಒಂಬತ್ತು ಮೊಳ (ಹದಿನೆಂಟು ಅಡಿ) ಎತ್ತರದ ಪೂಜೆ(ದೇವರ)ಮರದ ತೊಗಟೆಯನ್ನು ತೆಗೆದು ಹರಳೆಣ್ಣೆ, ಅರಿಶಿಣಪುಡಿ, ಮೀಸಲು ಹಾಲು, ಜೇನುತುಪ್ಪ, ಗೋ-ಗಂಜಲು ಹಾಗೂ ಬಾಳೆಹಣ್ಣು ಕಲಸಿ ಆ ಪೂಜೆ ಮರಕ್ಕೆ ಬಳಿದು ಅದನ್ನು ನೆಡುತ್ತಾರೆ.

ಬಲ ಭಾಗದ ಗುಡಿ ಬೊಮ್ಮನ ಗೌಡರ ಒಕ್ಕಲಿವರದು, ಎಡ ಭಾಗದ್ದು ಕೋಣನಗೌಡರ ಒಕ್ಕಲಿವರದ್ದು ಎಂದು ಗುಡಿ ನಿರ್ಮಾಣವನ್ನು ಎರಡು ಭಾಗ ಮಾಡಿಕೊಂಡಿರುತ್ತಾರೆ. ಪೂಜಾರಿ ಹಾಗೂ ಗೌಡರು ಒಪ್ಪಿಗೆ ನೀಡಿದ ತಕ್ಷಣವೇ ನೂರಾರು ಜನರು ತುಗ್ಗಲಿಮೊರು, ಕರಿಯಜಾಲಿಯ ಕಟ್ಟಿಗೆ, ಕಾರೆಕವೆಕೋಲು ಹಾಗೂ ಮರದ ರೆಂಬೆ ಕೊಂಬೆಗಳನ್ನು ಅಲ್ಲಲ್ಲಿ ಎಳೆದು ತಂದು ಜೋಡಿಸುತ್ತಾರೆ. ಮರಕ್ಕೆ ಹೊಂದಿಕೊಂಡಂತೆ ತುಗ್ಗಲಿ ಹಾಗೂ ಸಗಸೆ ಮರದ ಹದಿನೆಂಟು ಗಳ, ಪ್ರತಿ ಗಳಕ್ಕೂ ನಾಲ್ಕೈದು ಅಡಿ ಅಂತರವಿರುವ ಹಾಗೇ ಒಂದೊಂದು ಗಳಕ್ಕೂ ಅವುಗಳ ಆಶ್ರಯಕ್ಕಾಗಿ

ಮೂರು ಅಡಿ ಉದ್ದದ ಎರಡೆರಡು ಕವೆಕಟ್ಟಿಗೆಗಳನ್ನು ಮತ್ತು ತುಗ್ಗಲಿ ಸೀಬುಗಳನ್ನು ನೆಲಕ್ಕೆ ನೆಟ್ಟು ಗಳಗಳಿಗೆ ಜೋಡಿಸಿ ಕಟ್ಟುತ್ತಾರೆ. ಜೋಡಿಸಿದ ಗಳಗಳು ಜರುಗದಂತೆ ಗುಡಿಯ ಒಳ ಮತ್ತು ಹೊರಭಾಗದ ಗಳಗಳಿಗೆ ಅಲ್ಲಲ್ಲಿ ಆಸದ ನಾರಿನಿಂದ ಹಿಂಡಿಗೆಗಳನ್ನು ಬಿಗಿಯುತ್ತಾರೆ. ಸುತ್ತಲು ತ್ರಿಕೋನಾಕಾರದಲ್ಲಿ ಜೋಡಿಸಿದ ಗಳಗಳ ಮೇಲೆ ಮೇಲಿಂದ ಕೆಳ ಭಾಗಕ್ಕೆ ಮೊದಲು ಬಂದ್ರೆಸೊಪ್ಪು ಹೊದಿಸಿ ಮುಚ್ಚುತ್ತಿರುವಾಗಲೇ ಅದರ ಮೇಲೆಯೇ ಜಾಲಿ ಹಾಗೂ ಕಾರೆಕಳ್ಳೆಯನ್ನು ಗುಡಿಯ ಸುತ್ತಲು ಬಡಿಯುತ್ತಾರೆ. ನಂತರ ಮೇಲ್ಭಾಗಕ್ಕೆ ಸುತ್ತಲೂ ಬಾರೆ ಕಳ್ಳೆಯನ್ನು ಹೊದಿಸುವುದರ ಮೂಲಕ ಗುಡಿ ಪೂರ್ಣಗೊಳಿಸುತ್ತಾರೆ.

**ಬೆರಗು**

ಬೆರಗು ಅಂದರೆ ಮುಳ್ಳುಕಳ್ಳೆ ಮತ್ತು ಹಸಿ ಬಂದ್ರೆಸೊಪ್ಪಿನಿಂದ ಕಟ್ಟಿಕೊಂಡ ಚಿಕ್ಕ ಗುಡಿಸಲು (ಗುಬ್ಬ) ಟೆಂಟ್, ತಾತ್ಕಾಲಿಕ ವಾಸದ ಗುಡ್ಲು ಎಂದರ್ಥ.ಇದನ್ನೇ ಬೆರಗು ಎಂದು ಕರೆಯುತ್ತಾರೆ. ಇವುಗಳನ್ನು ಜಾತ್ರೆ ನಡೆಯುವ ಸಂದರ್ಭದಲ್ಲಿ ವಿವಿಧ ಆಚರಣೆಗಳನ್ನು ಜರುಗಿಸಲು ಗೌಡರು, ಪೂಜಾರಿಗಳು ಮತ್ತು ಅವರ ಕುಟುಂಬದವರು ವಸತಿ ದಿಬ್ಬದಲ್ಲಿ ಉಳಿದುಕೊಳ್ಳಲು ಕಳ್ಳೆ ಮುಳ್ಳಿನ ಗುಡಿ ಪಕ್ಕದಲ್ಲಿಯೇ ತುಗ್ಗಲಿ ಮೋರು, ಹಸಿರು ಬಂದ್ರೆ ಸೊಪ್ಪು, ಕಳ್ಳೆಮುಳ್ಳು, ರೆಂಬೆಗಳಿಂದ ತಮ್ಮದೇ ಆದ ರೀತಿಯಲ್ಲಿ ಪ್ರತ್ಯೇಕವಾದ ಬೆರಗುಗಳನ್ನು ತಿರುವಿಕೊಳ್ಳುತ್ತಾರೆ. ಆ ಬೆರಗುಗಳ ಒಳಗೆ ಆಹಾರ ಧಾನ್ಯ, ಬಟ್ಟೆಬರೆ ಹಾಗೂ ಪಾತ್ರೆ ಇತರೆ ಪರಿಕರಗಳನ್ನು ಇಟ್ಟುಕೊಂಡು ಅದರಲ್ಲಿಯೇ ಮಲಗುತ್ತಾರೆ. ಆ ಬೆರಗುಗಳ ಸುತ್ತಲೂ ಕಿರಿದಾದ ಕಳ್ಳೆಮುಳ್ಳಿನ ಬೇಲಿಯನ್ನು ನಿರ್ಮಿಸಿಕೊಂಡಿರುತ್ತಾರೆ. ದಳವಾಯಿ ಗೊಲ್ಲರು, ಮರವಾಯಿಗೊಲ್ಲರು, ಭೂಮಪ್ಪಗಳು, ದ್ಯಾವರಾರು, ಸಜ್ಜೆಯೋರು, ಕೋಟೆಚಿತ್ತಮ್ಮನೋರು, ತಾಳಿಕೇರೊರು, ಚನ್ನಮ್ಮನಾಗತಿಹಳ್ಳಿಯವರು ಹೀಗೆ ಹದಿಮೂರು ಗುಡಿಕಟ್ಟಿನ ಪ್ರಮುಖ ಬೆಡಗಿನವರು ಬೆರಗುಗಳನ್ನು ಕಟ್ಟಿಕೊಂಡಿರುತ್ತಾರೆ. ಜಾತ್ರಾ ಸ್ಥಳದಲ್ಲಿ ಕಲ್ಲಿನಿಂದ ನಿರ್ಮಿಸಿದ ಮೂರು ಕಟ್ಟೆಗಳಿವೆ. ಒಂದು ಬೊಮ್ಮನಗೌಡರ ಕಟ್ಟೆ, ಎರಡು ಕೋಣನಗೌಡರ ಕಟ್ಟೆ ಮೂರನೆಯದು ದೇವರೋರುವರ ಕಟ್ಟೆ. ಇವು ಕಳ್ಳೆಮುಳ್ಳಿನ ಗುಡಿ ನಿರ್ಮಿಸುವ ಬಲ ಭಾಗದಲ್ಲಿ ಕಂಡುಬರುತ್ತವೆ.

**ವಿವಿಧ ದೇವರುಗಳು ಜಾತ್ರೆಗೆ ಸೇರುವುದು**

ಬಂಜಗೆರೆ ಗ್ರಾಮದ (ವೀರಣ್ಣ)ಈರಣ್ಣ ಯಾನೆ ಕಾಟಮಲಿಂಗ, ಕ್ಯಾತಪ್ಪ (ನಿಂಗಣ್ಣ)ಯಾನೆ ಬತವಿನ ದೇವರು, ಈರಬಡಕ್ಕ ಮತ್ತು ಗುರುವಾರ ಆಂಧ್ರಪ್ರದೇಶದ

ಐಗಾರ್ಲಹಳ್ಳಿ ತಾಳಿದೇವರು, ಟಿ.ಎನ್.ಕೋಟೆಯ ಕೊಂಡದ ಚಿತ್ತಮ್ಮ, ಕೋಣದದ ದೇವರು, ಕ್ಯಾತಗೊಂಡನಹಳ್ಳಿ ಕದರಿನರಸಿಂಹ ಸೇರಿದಂತೆ ವಿವಿಧ ದೇವರುಗಳು ಕೇತಪ್ಪನ ಜಾತ್ರಾ ಆಚರಣೆಗೆ ಬಂದು ಸೇರುತ್ತವೆ.



**ಪರಿವಾರದ ದೇವರುಗಳ ಚಿತ್ರ**

ಬಂಜಗೆರೆ ಈರಣ್ಣ, ಬತವಿನ ದೇವರು ಮತ್ತು ತಾಳಿ ದೇವರು ಈ ಮೂರು ದೇವರುಗಳು ಅಣ್ಣ ತಮ್ಮಂದಿರುಗಳು ಎಂಬುದು ಜನರ ನಂಬಿಕೆ. ಬಂಜಗೆರೆ ಈರಣ್ಣ ಅಮವಾಸೆ ದೇವರು ಬಂಜಗೆರೆ. ಬತವಿನ ದೇವರು, ವ್ರತದ ದೇವರು, ಬಂಜಗೆರೆ. ತಾಳಿದೇವರು, ವಾರದ ದೇವರು, ಐಗಾರ್ಲಹಳ್ಳಿ(ಆಂಧ್ರಪ್ರದೇಶ) ಕೇತಪ್ಪ–ಮನೆ ದೇವರು ಚನ್ನಮ್ಮನಾಗತಿಹಳ್ಳಿ ಕದರಿ ನರಸಿಂಹ ,ಆಚಾರದ ದೇವರು. ಮಡಿವಾಳ ಸಮುದಾಯದವರು ನೆಡೆ ಮಡಿಬಟ್ಟೆಗಳನ್ನಾಸಿ ದೇರಿಗೆ ಸೇವೆ ಸಲ್ಲಿದರೆ, ಮಣೆಗಾರರ ಚಪ್ಪಲಿಗಳಿಲ್ಲದೆ ದೇವರು ಹುದಿ ಬಾಗಿಲು ದಾಟುವುದಿಲ್ಲ. ದ್ಯಾವರನಹಳ್ಳಿ ಮಣೆಗಾರರು ವ್ರತದಿಂದ ಹೊಲಿದು ತಂದ ಚರ್ಮದ ಹೊಸ ಚಪ್ಪಲಿಯನ್ನು ಕ್ಯಾತಪ್ಪ ದೇವರ ಪಟ್ಟದಪೂಜಾರಿ, ಯಜಮಾನ ಪೂಜಾರಿ, ಅಮವಾಸೆ ಪೂಜಾರಿಯ ಕಾಲಿಗೆ ತೊಡಿಸಿ ಹಾಕುತ್ತಾರೆ. ಭಕ್ತರು ಕಡಲೆಕಾಯಿ, ಮಂಡಕ್ಕಿ, ಇತರೆ ಧಾನ್ಯ ಸೇರಿದಂತೆ ಸೂರುಬೆಲ್ಲ, ಮೆಣಸುಗಳನ್ನು ದೇವರ ಪೆಟ್ಟಿಗೆಗಳ ಮೇಲೆ ಎಸೆಯುವುದರ ಮೂಲಕ ತಮ್ಮ ತಮ್ಮ ಹರಕೆಗಳನ್ನು ತೀರಿಸುತ್ತಾರೆ. ಹೀಗೆ ವಿವಿಧ ಬಗೆಯ ಭಕ್ತರ ಸೇವೆಗಳನ್ನು ಸ್ವೀಕರಿಸುತ್ತಾ, ದೇವರುಗಳು ಪುರ್ಲೆಹಳ್ಳಿ ಗ್ರಾಮಕ್ಕೆ ಬಂದು ಸೇರುತ್ತವೆ. ದೇವರಿಗೆ ವೀಳ್ಯೆದೆಲೆ, ಕಡಲೆಕಾಯಿ, ಮಂಡಕ್ಕಿ, ಬಾಳೆಹಣ್ಣು, ಸೂರುಬೆಲ್ಲ ಅರ್ಪಿಸುತ್ತಾರೆ. ನಂತರ ಎಲ್ಲಾ ದೇವರುಗಳು ಹೊಳೆ ಪೂಜೆ ಹೋಗುತ್ತವೆ.



ಜಾತ್ರೆಗೆ ಬಂದು ಸೇರುವ ವಿವಿಧ ಪರಿವಾರದ ಪೆಟ್ಟಿಗೆ ದೇವರುಗಳ ಚಿತ್ರ

ಜನಪದ ಸಂಪ್ರದಾಯಗಳಲ್ಲಿ 'ನೀರು' ಶುದ್ಧ, ಪವಿತ್ರ, ನಿರ್ಮಲವಾದುದು. ಅದು ಕೂಡಿಸುವ ಮತ್ತು ಬೇರ್ಪಡಿಸುವ ಸಂಕೇತವಾಗಿಯೂ ಬಳಕೆಯಲ್ಲಿದೆ. ಜನರ ಮೈಲಿಗೆಯನ್ನು ಕಳೆದು ಮಡಿ ಮಾಡಲು ಕೂಡಾ ನೀರೇ ಬೇಕು. ಆದ್ದರಿಂದ ಜೀವನಾವರ್ತದ ಆಚರಣೆಗಳಲ್ಲಾಗಲೀ 'ನೀರು' ವಿಶೇಷವಾದ ಆರಾಧನೆಗೆನ ಒಳಪಡುತ್ತದೆ. ಗಂಗಾಪೂಜೆ ಇಲ್ಲದೆ ಯಾವ ದೈವಗಳಿಗೂ ಆಚರಣೆ, ಹಬ್ಬ, ಉತ್ಸವ ಹಾಗೂ ಜಾತ್ರೆ ನಡೆಯಲಾರದು. ನೀರಿಗೆ ಎಲ್ಲ ಬಗೆಯ ಮೈಲಿಗೆಗಳನ್ನು ಕಳೆಯುವ ಶಕ್ತಿ ಇರುವುದರಿಂದ ನೀರಿಗೆ ತುಂಬಾ ಮಹತ್ವವಿದೆ. ಹಾಗಾಗಿ ಸ್ನಾನವಿಲ್ಲದೆ ಯಾವುದೇ ಜನಪದ ಆಚರಣೆಗಳಿಲ್ಲ. ಗುಡ್ಡ,ಬೆಟ್ಟ, ನದಿ,ಕಣಿವೆ, ಹಳ್ಳ, ಕೊಳ್ಳ, ಕೆರೆ ಮತ್ತು ಬಾವಿ ಹೀಗೆ ನೀರು ಹರಿಯುವ ಹಾಗೂ ನೀರು ಇರುವ ತಾಣಗಳು ಪಾವಿತ್ರ್ಯತೆಯಿಂದ ಕೂಡಿರುತ್ತವೆ ಎಂಬುವುದು ಬುಡಕಟ್ಟು ಸಮುದಾಯಗಳ ನಂಬಿಕೆ. ನೀರು ಶುದ್ಧತೆಯ ಸಂಕೇತವಾಗಿರುವುದರಿಂದ ಅವರು ತಮ್ಮ ದೇವರುಗಳನ್ನು ಶುದ್ಧಿ ಮಾಡಲು ಹಳ್ಳ ಹಾಗೂ ತೊರೆ(ಹೊಳೆ)ಗಳಿಗೆ ಕೊಂಡೊಯ್ಯುತ್ತಾರೆ. ಅದೇ ರೀತಿ ಕಾಡುಗೊಲ್ಲರು ಪ್ರತಿ ವರ್ಷ ಹಬ್ಬ ಹರಿದಿನ, ಜಾತ್ರೆ, ಉತ್ಸವದ ಸಂದರ್ಭದಲ್ಲಿ ತಮ್ಮ ಆರಾಧ್ಯ ದೈವ ಕ್ಯಾತಪ್ಪ ಹಾಗೂ ಇತರೆ ಪರಿವಾರದ ದೇವರುಗಳನ್ನು ಪುರ್ಲೆಹಳ್ಳಿ ಬಳಿ ವಸತಿ ದಿಬ್ಬದ ಅಕ್ಕಮ್ಮಗಳ ದೇವಸ್ಥಾನದ ಮಜ್ಜನಬಾವಿ ಅಥವಾ ವೇದಾವತಿ ನದಿಗೆ ಕೊಂಡೊಯ್ಯುತ್ತಿರುತ್ತಾರೆ.

ಮಧ್ಯರಾತ್ರಿಯಲ್ಲಿ ಪಟ್ಟದಪೂಜಾರಿಗಳು ತಮ್ಮ ತಮ್ಮ ದೈವಗಳಿಗೆ ಹಾಕಿದ್ದ ಆಭರಣ, ಹೂವಿನಾರಗಳನ್ನು ತೆಗೆದು ಹಾಕಿ ದೈವಗಳ ಪೆಟ್ಟಿ??ಗಳನ್ನು ಬಿಚ್ಚಿಡುತ್ತಾರೆ. ದಾಸಯ್ಯಗಳು, ಗೌಡರು, ಲಿಂಗಾಯಿತ ಅಯ್ಯಗಳು ಎಲ್ಲರೂ ಸೇರಿಕೊಂಡು ಮಜ್ಜನಬಾವಿ ದಿಬ್ಬದ

ಮೇಲೆ ಐದು (ಕಲ್ಲಿನ) ಬೆನವ (ಬೆನಕ) ತಂಬಿಟ್ಟನ್ನು (ಅಕ್ಕಿಟ್ಟು ಮತ್ತು ಬೆಲ್ಲದಿಂದ ಕಲಸಿದ ಮಿದಿಕೆ) ಒಂಬತ್ತು ಉಂಡೆ ಮಾಡುತ್ತಾರೆ. ಕಬ್ಬಿನ ಕೋಲು, ಎಲೆ,ಅಡಿಕೆ,ಬಾಳೆಹಣ್ಣು, ನಿಂಬೆಕಾಯಿ, ಕರಿ ಮತ್ತು ಬಿಳಿ ಎಳ್ಳುಬೆಲ್ಲ ಹಾಗೂ ಜೇನುತುಪ್ಪ ಅಕ್ಕುಸ್ತಿ, ಅರಿಶಿಣ ಕುಂಕುಮ, ಭಂಡಾರ, ಹಸಿಹಾಲು, ಮೀಸಲು ತುಪ್ಪ, ಮೊಸರು, ಹೊಂಬಾಳೆ ಇತ್ಯಾದಿಗಳನ್ನು ವಿಳ್ಯದೆಲೆ ಮೇಲೆ ಇಟ್ಟು ಗಂಗಾ ಪೂಜೆ ನೆರವೇರಿಸುತ್ತಾರೆ. ಮೀಸಲು ಹಾಲು, ಗೋ-ಗಂಜಲು, ಉತ್ತುತ್ತಿ ಹಣ್ಣು, ವಿಭೂತಿ ಉಂಡೆ, ಬಾಳೆಹಣ್ಣು, ಜೇನುತುಪ್ಪ, ಪಾದರಸ, ಸಾಲಿಗ್ರಾಮ ಹಾಗೂ ಪಂಚಲೊಹವನ್ನು ಪಟ್ಟದ ಪೂಜಾರಿಗಳು ದೈವಗಳ ಪೆಟ್ಟಿಗೆಯೊಳಕ್ಕೆ ಇಡುತ್ತಾರೆ. ದೇವರ ಮುಂದೆ ಕರಿಕಂಬಳಿ ಜಾಡಿ ಹಾಸಿ ಹೂ, ಹಣ್ಣ, ಕಾಯಿ, ಧೂಪದೀಪಗಳಿಂದ ಪೂಜಿಸಿದ ನಂತರ ಐನೂರು ಇವರಿಂದ ತಿರುಮಂತ್ರವನ್ನು ವಾಚನ ಮಾಡಿಸುತ್ತಾರೆ. ಇದನ್ನು ಪುಣ್ಯ ಮಾಡಿಸುವುದು ಎಂದು ಕರೆಯುತ್ತಾರೆ. ಹೀಗೆ ದೇವರುಗಳಿಗೆ ಹಲವಾರು ಅಭಿಷೇಕದ ನಂತರ ಐದು ಜನ ಪೂಜಾರಿಗಳ ಕೈಗೆ ಕಂಕಣಧಾರಣೆ ಮಾಡಿ ಮಹಾ ಮಂಗಳಾರತಿ ಮಾಡುತ್ತಾರೆ.

ಹಿಂದೆ ದೇವೇಂದ್ರ ನಮ್ಮ ಹಿರಿಯಜ್ಜಗಳಿಗೆ ಹಿರೇಜಾಡಿ ಕೊಟ್ಟಿದ್ದ ಎಂಬ ನಂಬಿಕೆ ಅವರಲ್ಲಿದೆ. ಇದನ್ನು ದೇವೇಂದ್ರ ಕೊಟ್ಟ ಜಾಡಿ ಎನ್ನುತ್ತಾರೆ. ಅದರ ಸ್ಮರಣೆಗಾಗಿ ಕರಿಯ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ವೀರಗಾರರ ಅಲಗು ಮತ್ತು ರಾಂಬಣ(ತ್ರಿಶೂಲ), ಚಾಟಿ ಮತ್ತು ಇತರೆ ಆಯುಧಗಳನ್ನು ಇಟ್ಟು ಪೂಜೆ ಮಾಡಿದ ನಂತರ ಐದು ಜನ ಪೂಜಾರಿಗಳು ಬಾಯಿಗೆ ಬಿಳಿ ವಸ್ತ್ರ ಕಟ್ಟಿಕೊಂಡು ಮೂರು ಸಲ ಬಗ್ಗಿ ಬಗ್ಗಿ ಭೂಮಿಗೆ ನಮಸ್ಕಾರ ಮಾಡುತ್ತಾರೆ. ದೇವರ ಪೂಜೆಗಿಂತ ಮುಂಚಿತವಾಗಿ ಈ ಗಡಿಗೆಯಲ್ಲಿ ನೀರು ತುಂಬಿಟ್ಟಿರುತ್ತಾರೆ. ಸಾಮಾನ್ಯವಾಗಿ ಇವು ಮಣ್ಣಿನ ಗಡಿಗೆ ಅಥವಾ ತಾಮ್ರದ ಗಡಿಗೆಗಳಾಗಿರುತ್ತವೆ.ಅದರಲ್ಲಿ ಮಡಿನೀರು ತುಂಬಿರಿರುತ್ತಾರೆ. ಈ ಹರಿವೆಗಳನ್ನು ಹಿರಿಯರೇ ಹೊರಬೇಕು. ಹೊರುವವರ ಮಡಿಲಿಗೆ ಇಪ್ಪತ್ತೊಂದು ಬಾಳೆಹಣ್ಣುಗಳನ್ನು ಇಟ್ಟು ಮಡಿಲು ತುಂಬುತ್ತಾರೆ. ಇದನ್ನು ದೇವರ ಜೊತೆಯಲ್ಲಿಯೇ ಕಳ್ಳೆಮುಳ್ಳಿನ ಗುಡಿಗೆ ಹೊತ್ತೊಯ್ಯಬೇಕು. ಬಾನ್ದಾರವಿ ಹೊತ್ತವರು ಕಟ್ಟು ನಿಟ್ಟಿನಿಂದ ಇರಬೇಕು.

ದೇವರ ಆಚರಣಾ ಕಾರ್ಯಗಳಿಗೆ ಈ ಉರುಮೆ (ಹರೆ) ವಾದ್ಯಗಳನ್ನು ಬಳಸಿಕೊಳ್ಳುವುದರಿಂದ ಕರಿಯ ಕಂಬಳಿ ಜಾಡಿ ಹಾಸಿ ಉರುಮೆ ವಾದ್ಯಗಳನ್ನು ಇಟ್ಟು ಅವುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಕೆಲ ವಾದ್ಯಗಳನ್ನು ಜಾಡಿ ಮೇಲೆ ಇಟ್ಟು ಮಣೇವು ಹಾಕುವುದರ ಮೂಲಕ ಅವುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ದೇವರು ಹೊಳೆಪೂಜೆ ಮುಗಿಸಿಕೊಂಡು ಬರುವ ದಾರಿ ಮಧ್ಯದ ಹಳ್ಳದಲ್ಲಿ ದೇವರಿಗೆ ಬಟ್ಟೆ

ತೆರೆ ಕಟ್ಟಿ ಕುರಿ ಅಥವಾ ಮೇಕೆ ಮರಿಯನ್ನು ತಳವಾರನ ಮೂಲಕ ಬಲಿ ಕೊಡುತ್ತಾರೆ. ಮೊಸರನ್ನು ಹಾಗೂ ಓಕುಳಿಯನ್ನು ದೇವರಿಗೆ ನಿವಾಳಿಸಿ ಚೆಲ್ಲುತ್ತಾರೆ. ಆಗ ದೇವರು ಮೈದುಂಬಿಕೊಳ್ಳುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಬಲಿ ಕೊಟ್ಟ ಮರಿಯನ್ನು ಮಡಿವಾಳರು ಅಥವಾ ಚಲವಾದಿಗಳು ತೆಗೆದುಕೊಂಡು ಹೋಗುತ್ತಾರೆ. ಕೆಲವು ಸಲ ಬಲಿ ಮರಿಯನ್ನು ಗುಂಡಿಗೆ ಹಾಕಿ ಮುಚ್ಚುತ್ತಾರೆ. ದೇವರಿಗೆ ಬಲಿ ಕೊಡುವ ಮರಿಯನ್ನೇ ದೂಳಮರಿ ಅಥವಾ ಹೊಳೆಮರಿ ಮತ್ತು ವಾಸೆ ಕೊಯ್ಯೋದು ಎಂತಲೂ ಕರೆಯುವ ವಾಡಿಕೆ ಇದೆ. ಮಧ್ಯರಾತ್ರಿ ಹನ್ನೆರಡು ಗಂಟೆ ನಂತರ ವ್ರತದ ನವಣೆಯನ್ನು ಕುಟ್ಟುವ ಶಾಸ್ತ್ರ ಪ್ರಾರಂಭಿಸುತ್ತಾರೆ. ಕೋಣನ, ಬೊಮ್ಮನ ಹಾಗೂ ಅಜ್ಜೇರ ಬೆಡಗಿನ ಗೊಲ್ಲರು ನವಣೆ ಕುಟ್ಟುವ ಆಚರಣೆಯನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಒಂಬತ್ತು ನಿಂಬೆಹಣ್ಣು, ಒಂಬತ್ತು ಎಲೆಅಡಿಕೆ, ಒಂಬತ್ತು ಮಣ್ಣಿನ ಹೊಸ ಮಡಿಕೆ (ಕುಡಿಕೆ)ಗಳನ್ನು ತೆಗೆದುಕೊಂಡು ಹೋಗಿ, ಒಂಬತ್ತು ಜನ ಪಟ್ಟದ ಪೂಜಾರಿಗಳು ಮಜ್ಜನ ಬಾವಿಯಲ್ಲಿ ಒಟ್ಟಿಗೆ ನೀರು ತುಂಬಿಕೊಂಡು ಎರಡು ಬಾರಿ ಬಾವಿಗೆ ಸುರಿದು ಪುನಃ ಮೂರನೆ ಬಾರಿ ಎಲ್ಲರೂ ಒಟ್ಟಿಗೆ ಮಡಿಕೆಗಳಲ್ಲಿ ನೀರು ತುಂಬಿಕೊಂಡು ಬರುತ್ತಾರೆ. ಬರುವಾಗ ಯಾರೊಬ್ಬರ ಜೊತೆ ಮಾತನಾಡುವುದಿಲ್ಲ. ಪೂಜಾರಿಗಳು ತಂದ ನೀರಿನಿಂದ ಹತ್ತು ಜನ ಮಹಿಳೆಯರು ಒನಕೆ ತೊಳೆಯುತ್ತಾರೆ. ಏಳೆಂಟು ಜನ ಮಹಿಳೆಯರು ನವಣೆ ಧಾನ್ಯವನ್ನು ಹಸನ ಮಾಡುತ್ತಾರೆ. ನಂತರ ಮಡಿ ನೀರಿನಿಂದ ನೆಲ ಸಾರಿಸಿ ಒರಳಿನಾಕಾರದಲ್ಲಿ ಐದು ದೊಡ್ಡಗುಣಿ(ಕುಳಿ) ಎರಡು ಚಿಕ್ಕ ಗುಣಿ ನಿರ್ಮಾಣ ಮಾಡುತ್ತಾರೆ. ಗುಳಿಗೆ ನವಣೆ ತುಂಬಿಸಿ ಗೌಡ, ಪೂಜಾರಿ ಮನೆತನದ ಹನ್ನೊಂದು ಜನ ಹೆಂಗಸರು ದೇವರ ಬಗೆಗಿನ ಪದಗಳನ್ನು ಹೇಳಿಕೊಂಡು ಮಣ್ಣಿನ ಒರಳಲ್ಲಿಯೇ ನವಣೆ ಕುಟ್ಟಿ ನವಣೆ ಕುಟ್ಟಿ ಅಕ್ಕಿ ಮತ್ತು ಹಿಟ್ಟನ್ನು ತಯಾರಿಸುತ್ತಾರೆ.

ಕರಿ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ಒಳ ಮರವನ್ನು ತಂದಿಡುತ್ತಾರೆ. ಆ ಮರದ ಒರಳಲ್ಲಿ ನವಣೆ ತುಂಬಿಸಿ ಐದು ಜನ ಪೂಜಾರಿಗಳು ಮತ್ತು ಹೆಣ್ಣು ಮಕ್ಕಳು ಮೊರದಲ್ಲಿ ತಂದ ನವಣೆಯನ್ನು ನಾಲ್ಕು ಬಾರಿ ಇಷ್ಟಿಷ್ಟು ಹಾಕಿಕೊಂಡು ನಂತರ ಒನಕೆಯಿಂದ ನವಣೆ ಕುಟ್ಟುವ ಶಾಸ್ತ್ರ ಮಾಡುತ್ತಾರೆ. ಕುಟ್ಟಿದ ನವಣೆ ಅಕ್ಕಿಯಿಂದ ಅನ್ನ ತಯಾರಿಸಿ ರಾಶಿ ಮಾಡುತ್ತಾರೆ. ಬಾಳೆಹಣ್ಣು, ಮೊಸರು, ಕಲಸಿ ತಯಾರಿಸಿದ ಬೆಲ್ಲದ ಪಾನಕವನ್ನು ನವಣೆ ಅನ್ನದ ಜೊತೆ ಕಲಸಿ ಪ್ರಸಾದವನ್ನು ಮೊದಲು ದೇವರಿಗೆ ಅರ್ಪಿಸುತ್ತಾರೆ ದಾಸೋಹದ ಮೂಲಕ ನವಣೆಯಿಂದ ತಯಾರಿಸಿದ ಅನ್ನವನ್ನು ಜಾತ್ರೆಯಲ್ಲಿ ನೆರೆದಿದ್ದ ಎಲ್ಲ ಜನರೂ ಸ್ವೀಕರಿಸುವ ಮೂಲಕ ಹಿಡಿದಿದ್ದ ನವಣೆ ವ್ರತ(ಬತ)ವನ್ನು ಅಳಿಯುತ್ತಾರೆ. ಮಣ್ಣಿನ ಒರಳಲ್ಲಿ ಕುಟ್ಟಿದ ನವಣೆ ಅನ್ನವನ್ನು

ತಿನ್ನುವಾಗ ಬಾಯಿಯಲ್ಲಿ ಕಲ್ಲು ಹಾಗೂ ಮಣ್ಣು ಸಿಕ್ಕರೂ ಅದನ್ನು ಹಾಗೆಯೇ ನುಂಗುತ್ತಾರೆ. ಕಲ್ಲು ಮತ್ತು ಮಣ್ಣು ಸಿಕ್ಕಿತು ಎಂದರೆ ದೇವರು ಕಣ್ಣು ಕಳೆಯುತ್ತಾನೆ ಎಂಬ ಭಯ ಭಕ್ತರಲ್ಲಿದೆ. ಆದ್ದರಿಂದ ಅನ್ನದಲ್ಲಿ ಕಲ್ಲು,ಮಣ್ಣು ಸಿಕ್ಕರೂ ಸಹ ಅನ್ನದಲ್ಲಿ ಏನೂ ಸಿಗಲ್ಲ ಎಂದು ಹೇಳುತ್ತಾರೆ. ನವಣೆ ಕುಟ್ಟಿ ಹಿಟ್ಟು ತಯಾರಿಸುತ್ತಾರೆ. ಅದನ್ನು ಮೀಸಲು ಹಿಟ್ಟು ಎಂದು ಕರೆಯುತ್ತಾರೆ. ಆ ಹಿಟ್ಟಿಗೆ ಮೀಸಲು ಜನಿಗೆ ಹಾಲು ಮತ್ತು ಬೆಲ್ಲ ಮಿಶ್ರಣ ಮಾಡಿ ಆ ಪುಡಿಯಿಂದ ತಮ್ಟುವನ್ನು ತಯಾರಿಸಿ ಒಂದು ಬಿದಿರಿನ ಪುಟ್ಟಿಯಲ್ಲಿ ತುಂಬಿಡುತ್ತಾರೆ. ಕಳಸ ಕೀಳುವ ದಿನ ದೇವರ ದರ್ಶನಕ್ಕೆ ಬಂದ ಕರಡಿಗೊಲ್ಲ ಹೆಣ್ಣು ಮಕ್ಕಳಿಗೆ ಮೀಸಲು ತಮ್ಟುವನ್ನು ವಿತರಿಸುತ್ತಾರೆ. ಅವರು ಅದನ್ನು ಪ್ರಸಾದವೆಂದು ಸ್ವೀಕರಿಸಿ ಹುರುಳಿ ಕೈ ತೊಳೆಯದಿರುವ ತಪ್ಪಿಗಾಗಿ ಆ ಬೆಡಗಿನರು ತಪ್ಪು ಕಾಣಿಕೆಯೆಂದು ನಾಲ್ಕಾಣೆ ದುಡ್ಡನ್ನು ಕಟ್ಟಿಸಿಕೊಳ್ಳುತ್ತಾರೆ. ಉಳಿದ ಹಿಟ್ಟನ್ನು ಭಕ್ತರಿಗೆ ಪ್ರಸಾದವಾಗಿ ಹಂಚುವ ಪದ್ಧತಿ ಇದೆ.

ಕ್ಯಾತೇದೇವರು ಮತ್ತು ಹಾಲು ಕುಡಿದಪ್ಪ ದೇವರ ಪೂಜಾರಿಗಳು ಕಟ್ಟುನಿಟ್ಟಿನ ವ್ರತ ನಿಷ್ಠರಾಗಬೇಕಾಗುತ್ತದೆ. ಈ ವ್ರತವನ್ನು ಆಚರಿಸುವ ಇತರೇ ಕಾಡುಗೊಲ್ಲರಂತೆ ವರ್ಷದಲ್ಲಿ ಒಂದು ಸಲ ನಡೆಯುವ ಹಬ್ಬ, ಜಾತ್ರೆ ಸಂದರ್ಭದಲ್ಲಿ ಹುರುಳಿ–ನವಣೆ ಬಳಸುತ್ತಾರೆ. ಕ್ಯಾತೇದೇವರು, ಕಾಟಮದೇವರು ಮತ್ತು ಪಾತೇದೇವರ ಪೂಜಾರಿಗಳು ಪಟ್ಟಕಟ್ಟುವ ಮೊದಲು ಹುರಳಿ–ನವಣೆಯಿಂದ ಮಾಡಿದ ಆಹಾರ ತಿನ್ನುತ್ತಾರೆ. ಆ ಪೂಜಾರಿಗಳು ಸತ್ತಾಗ ದನಗಳ ಸಗಣಿಯಲ್ಲಿ ಬೆಳೆಸಿದ ಕಾಡುಹುರುಳಿ ಹಾಗೂ ಕಾಡುನವಣೆಯನ್ನು ತೇಯ್ದು ಅದನ್ನು ಅವರ ಬಾಯಿಗೆ ನೆಕ್ಕಿಸಿ ಬಾಯಿ ಬತ ಬಿಡುತ್ತಾರೆ. ಹುರುಳಿ–ನವಣೆ ಇವು ಬಾಯಿ ಬತ ಎಂದು ಕರೆಯುತ್ತಾರೆ. ಬಾಯಿ ಬತದವರು ಇನ್ನೊಬ್ಬರ ಮನೆಯಲ್ಲೂ ಏನನ್ನೂ ತಿನ್ನಕೂಡದು. ಮತ್ತು ಕುಡಿಯ ಕೂಡದು ಎಂಬ ನಿಯಮವೂ ಇದೆ. ಜಾತ್ರೆಗೆ ಕಂಕಣ ಕಟ್ಟುವ ಸಮಯದಲ್ಲಿ ಹಿಡಿದ ನವಣೆ ವ್ರತವನ್ನು ವಿಸರ್ಜಿಸಲು ಅಥವಾ ಬತ ಬಿಡಲು ನವಣೆಯನ್ನು ಕುಟ್ಟಲಾಗುತ್ತದೆ. ನವಣೆ ಕುಟ್ಟುವ ಕಾರ್ಯವು ಜಾತ್ರೆಯ ಆಚರಣೆಗಳ ವಿಶೇಷತೆಗಳಲ್ಲಿ ಇದು ಒಂದು. ಮಣ್ಣಿನ ಒರಳಿನಲ್ಲಿ ಮಧ್ಯರಾತ್ರಿ ಹೆಣ್ಣುಮಕ್ಕಳು ಪದಗಳನ್ನು ಹಾಡುತ್ತಾ ನವಣೆಯನ್ನು ಕುಟ್ಟುತ್ತಾರೆ. ಈ ದೃಶ್ಯವನ್ನು ನೋಡಲು ಹೊರ ರಾಜ್ಯದಿಂದ ಅಪಾರ ಸಂಖೆಯಲ್ಲಿ ಭಕ್ತರು ಸೇರುತ್ತಾರೆ.

ಕಳ್ಳೆಮುಳ್ಳಿನ ಗುಡಿಯೊಳಗೆ ಹಾಸಿದ ಅತ್ತಿಯಮರವನ್ನು ಒಳಮರ ಎಂದು ಕರೆಯುತ್ತಾರೆ. ಪುರ್ಲೆಹಳ್ಳಿ ತಳವಾರ(ನಾಯಕ ಜನಾಂಗ)ದವರು ಕಟ್ಟುನಿಟ್ಟಿನ ವ್ರತದ ಆಚರಣೆ ಮತ್ತು ಮಡಿ ಮೈಲಿಗೆಯಿಂದ ಈ ಮರವನ್ನು ಕಡಿದು ತರುತ್ತಾರೆ. ಆ

ಮರವನ್ನು ಬಾಳ್ಸಿಯಿಂದ ಕೆತ್ತಿ ಅದರಲ್ಲಿ ಏಳು ಒರಳು(ಗುಳಿ)ಗಳನ್ನು ನಿರ್ಮಾಣ ಮಾಡಿರುತ್ತಾರೆ. ಆ ಗುಣಿಗಳಿಗೆ ಐದು ಜನ ಪಟ್ಟದಪೂಜಾರಿಗಳು ಬಿದಿರಿನ ಹೊಸ ಮೊರವದಲ್ಲಿ ನವಣೆಯನ್ನು ತುಂಬಿಕೊಂಡು ಮರದ ಆ ಗುಳಿಯೊಳಕ್ಕೆ ಇಷ್ಟಿಷ್ಟು ಹಾಕುತ್ತಾರೆ. ಶಾಸ್ತ್ರಕ್ಕೆ ಎಂಬಂತೆ ಪೂಜಾರಿಗಳು ಮತ್ತು ಮಹಿಳೆಯರು ಸೇರಿದಂತೆ ಏಳೆಂಟು ಜನ ಒನಕೆ ತೆಗೆದುಕೊಂಡು ನವಣೆಯನ್ನು ಕುಟ್ಟುವ ಆಚರಣೆ ನಡೆಯುತ್ತದೆ. ಒಳಮರಕ್ಕೆ ಬಂಜಗೆರೆ ಬತವಿನ ದೇವರ ಪೂಜಾರಿ ಒಂದೊಂದು ಗುಳಿಯೊಳಕ್ಕೆ ಮೂರು ಬಾರಿ ಇಷ್ಟಿಷ್ಟು ನವಣೆ ಹಾಕಿ ಒನಕೆ ಹಿಡಿದುಕೊಂಡು ಒಳಮರದ ಸುತ್ತಲೂ ಸುತ್ತುತ್ತಿರುತ್ತಾರೆ. ಇನ್ನುಳಿದವರು ದೇವರ ಮೇಲೆ ಪದಗಳನ್ನು ಹೇಳುತ್ತಾ ಒನಕೆ ಹಿಡಿದುಕೊಂಡು ಸುತ್ತುವರೆದು ನಡೆಯುತ್ತಿರುತ್ತಾರೆ. ಇದನ್ನೇ ನವಣೆ ಕುಟ್ಟುವ ಸಂಪ್ರದಾಯ ಎನ್ನುತ್ತಾರೆ. ಬೆಳಗಿನ ಜಾವ ಹೊತ್ತುಟ್ಟುವ ಸಂದರ್ಭದಲ್ಲಿ ಮಡಿನೀರನ್ನು ಹುತ್ತದ ಸುತ್ತ ಹಾಗೂ ಮೇಲ್ಭಾಗಕ್ಕೂ ಹಾಕುತ್ತಾರೆ. ಮಣ್ಣಿನ ಹೊಸ ಮಡಿಕೆಯಲ್ಲಿ ತಯಾರಿಸಿದ ನವಣೆ ಅನ್ನ, ಒಂಬತ್ತು ತೆಂಗಿನಕಾಯಿ, ನೂರಏಳು ಎಲೆಅಡಿಕೆ, ಹನ್ನೊಂದು ನಿಂಬೆಹಣ್ಣು, ಬಿಳಿವಸ್ತ್ರ, ಅರಿಶಿಣಕೊಂಬು, ನೂರವೊಂದು ಉತ್ತುತ್ತಿಹಣ್ಣು, ನೂರವೊಂದು ಕಬ್ಬಿನಕೋಲು, ಐದು ಸಿವುಡು ನವಣೆ ತೆನೆಯ ಹುಲ್ಲು ಇಟ್ಟು ಪೂಜಿಸುತ್ತಾರೆ. ಹಸಿಟ್ಟು, ನವಣೆ ಅನ್ನ, ಹಾಲು ಮೀಸಲು, ಗೋಗಂಜಲು, ಜೇನುತುಪ್ಪ, ಎಲ್ಲವನ್ನು ಹುತ್ತದ ಕೊಮೆಯೊಳಕ್ಕೆ ಬಿಡುತ್ತಾರೆ. ಈ ಆಚರಣೆಯನ್ನು ಹೆಣ್ಣುಮಕ್ಕಳು ನೋಡಬಾರದು ಎಂದು ಕರಿಕಂಬಳಿ ತೆರೆ ಕಟ್ಟುತ್ತಾರೆ.

ಗುರುಗಳು, ದಾಸಯ್ಯಗಳು, ಪೂಜಾರಿಗಳು ಮತ್ತು ಒಕ್ಕಲು ಮಕ್ಕಳಿಗೆ ಸೇರಿದಂತೆ ನೂರಾ ಒಂದು ವಿಳ್ಯೆದೆಲೆ ಎತ್ತಿ ಕೂಗಿಕೊಡುವ ಪದ್ಧತಿ ಇಂದಿಗೂ ನಡೆಯುತ್ತದೆ. ಈ ಕಾರ್ಯವನ್ನು ಬೊಮ್ಮನಗೌಡ ಮಾಡುತ್ತಾನೆ. ಪೂರ್ವಿಕರ ವ್ರತಗಳ ಅನುಸರಣೆಯಂತೆ ರೆಡ್ಡಿಗಳು ಈ ಹಿಂದೆ ಕೇತೇದೇವರನ್ನು ನವಣೆ-ಹುರುಳಿ ಕಣಜದಲ್ಲಿಟ್ಟು ಪೂಜೆ ಮಾಡುತ್ತಿದ್ದರು. ಅದೇ ರೀತಿ ಕಳ್ಳೆಮುಳ್ಳಿನ ಗುಡಿಯ ಮುಂಭಾಗದ ಪೂರ್ವದಿಕ್ಕಿಗೆ ನೂರು ಮೀಟರ್ ಅಂತರದ ಬಯಲು ಪ್ರದೇಶದಲ್ಲಿ ಎಡುವರೆ ಅಡಿ ಆಳ ಮತ್ತು ಒಂದು ಅಡಿ ಅಗಲ, ವೃತ್ತಕಾರದ ಗುಂಡಿ(ಕುಣಿ)ಯನ್ನು ತೋಡಿ ನೆಲ ಸಾರಿಸಿ ಅರಿಶಿಣಪುಡಿ, ಒಳ್ಳೆಣ್ಣೆ, ಬಾಳೆಹಣ್ಣು, ನವಣೆ ಹಿಟ್ಟು ಮತ್ತು ಹಾಲು ಮಿಶ್ರಣ ಮಾಡಿ ಗುಂಡಿಯ ಸುತ್ತಲೂ ರಂಗೋಲಿ ಹಾಕುತ್ತಾರೆ. ಕೇತೇದೇವರ ಪೂಜಾರಿ ಗುಳಿಯ ಸುತ್ತ ಮಂಡಲ ಬರೆದು ನೂರವೊಂದು ಎಡೆ, ಮೂವತ್ತೊಂದು ತೆಂಗಿನ ಕಾಯಿ, ಹನ್ನೊಂದು ನಿಂಬೆಹಣ್ಣು, ನವಣೆ ತಂಬಿಟ್ಟು, ಹೊಂಬಾಳೆ ಕಟ್ಟು, ಒಂಬತ್ತು ಕಬ್ಬಿನಕೋಲು, ಹೂ, ಹಣ್ಣು ಮತ್ತು ನವಣೆ ಬಾನ(ಅನ್ನ) ಇಟ್ಟು ಪೂಜಿಸುತ್ತಾರೆ. ಅನ್ನ ನೈವೇದ್ಯ

ಮುಗಿದಮೇಲೆ ಗುಡಿಕಟ್ಟಿನ ಪೂಜಾರಿಗಳು, ದಾಸಯ್ಯಗಳು ಸೇರಿದಂತೆ ಭಕ್ತರು ಮೀಸಲು ಹಾಲನ್ನು ಗುಂಡಿಯೊಳಕ್ಕೆ ಬಿಡುತ್ತಾರೆ. ನಂತರ ಕರಿಕಂಬಳಿ ಜಾಡಿಮೇಲೆ ಇಟ್ಟಿದ್ದ ಹಾಲು, ಹಣ್ಣು, ಕಾಯಿ ಪ್ರಸಾದವನ್ನು ಗುಂಡಿಗೆ ಹಾಕಿ ಮುಚ್ಚುತ್ತಾರೆ. ಕೊಣದ ಮುಂದಿಟ್ಟಿದ್ದ ಹಾಲು ಅನ್ನ, ಹಣ್ಣಿನ ಪ್ರಸಾದವನ್ನು ಎತ್ತಿ ಬೊಮ್ಮನಗೌಡರ ಸಂಬಂಧಿಕರ ಮಡಿಲಿಗೆ ಕಟ್ಟುತ್ತಾರೆ. ಇದನ್ನೇ ದೊಡ್ಡಬುತ್ತಿ ಅಥವಾ ದೊಡ್ಡೆಡೆ ಎಂದು ಕರೆಯುತ್ತಾರೆ.

ಈ ದೊಡ್ಡಬುತ್ತಿಯನ್ನು ಮಡಿಲಿಗೆ ಕಟ್ಟಿಕೊಂಡ ಬೊಮ್ಮನಗೌಡ ಭಯ, ಭಕ್ತಿಯಿಂದ ಕಾಲ್ನೆಡಿಗೆಯ ಮೂಲಕ ಹೊಳಲ್ಕೆರೆ ತಾಲ್ಲೂಕು ಚಿಕ್ಕಜಾಜೂರು ಹೋಬಳಿ ಗುಂಜಿಗನೂರಿಗೆ ಹೋಗಿ ಅಲ್ಲಿನ ಹಿರೇನರಸಿಂಹಸ್ವಾಮಿ ದೇವರಿಗೆ ಅರ್ಪಿಸಿ ವಿಶೇಷ ಪೂಜೆ ಸಲ್ಲಿಸುತ್ತಾನೆ. ದೇವರ ಬುತ್ತಿಯನ್ನು ಬೊಮ್ಮನಗೌಡನಿಂದ ಸ್ವೀಕರಿಸಿದ ದೇವರ ಒಕ್ಕಲಿನ ಜನರು ಆತನಿಗೆ ಹೊಸ ಬಟ್ಟೆ ಉಡುಗೋರೆ ನೀಡಿ ವಿಶೇಷ ಗೌರವದಿಂದ ಕಂಡು ಆತನನ್ನು ತಮ್ಮೂರಿಗೆ ಕಳುಹಿಸಿ ಕೊಡುತ್ತಾರೆ. ದೊಡ್ಡ ಬುತ್ತಿಯನ್ನು ದೇವಸ್ಥಾನದಲ್ಲಿಟ್ಟುಕೊಂಡು ಯುಗಾದಿ ಹಬ್ಬದ ಮೊದಲ ದಿನ ದೊಡ್ಡಬುತ್ತಿ ಎಡೆಯನ್ನು ತಿಂದ ನಂತರ ಬೇವು ಬೆಲ್ಲ ತಿನ್ನುವ ಪದ್ಧತಿ ಇಂದಿಗೂ ಗುಂಜಿಗನೂರಿನಲ್ಲಿ ಕಂಡುಬರುತ್ತದೆ. ಕೇತೇದೇವರ ಜಾತ್ರಾ ಆಚರಣೆಯಲ್ಲಿ ಪ್ರತಿ ವರ್ಷವೂ ಗುಂಜಿಗನೂರಿಗೆ ದೊಡ್ಡಬುತ್ತಿ ಕಳುಹಿಸಿಕೊಡುವ ಸಂಪ್ರದಾಯವಿದೆ.

'ಗೂಡು' ಅಂದರೆ ರೊಪ್ಪ, ದನಕರುಗಳನ್ನು ಕೂಡುವ ಜಾಗ. ಕಳ್ಳೆಬೇಲಿಯ ರಕ್ಷಣೆಯೊಳಗೆ ಇರುವ ದನ,ಕರುಗಳನ್ನು ಕೂಡುವ ಜಾಗ(ಸ್ಥಳ)ವನ್ನೇ ಗೂಡು ಎಂದು ಕರೆಯುತ್ತಾರೆ. ಆ ಗೂಡಿನೊಳಗಿರುವ ದನ, ಕುರಿ, ಹಸುಗಳ 'ಹಿಂಡು ಹೆಚ್ಚಲಿ' ಎಂದು ನಡೆಸುವ ಫಲ ಸಮೃದ್ಧಿಯ ಹಬ್ಬವಿದು. ಗೂಡಿನ ಹಬ್ಬ ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ ಹಾಗೂ ಕೇತಪ್ಪನ ನೆಲೆಗಳಲ್ಲಿರುವ ಎಲ್ಲಾ ಊರುಗಳಲ್ಲಿ ನಡೆಯದಿದ್ದರೂ ಇದೇ ಕೇತಪ್ಪನ ಜಾತ್ರಾ ಆಚರಣೆಯ ಇಪ್ಪತ್ನಾಲ್ಕನೆ ದಿನವಾದ ಶನಿವಾರ ಬೆಳಿಗ್ಗೆ ವಸತಿ ದಿಬ್ಬದಲ್ಲಿರುವ ಅಕ್ಕಮ್ಮಗಳ ದೇವಸ್ಥಾನದ ಹತ್ತಿರ ಕಲ್ಲಿನ ಗೂಡಿನಲ್ಲಿರುವ ಕಲ್ಲಿನ ಬೆನವಗಳಿಗೆ ಹಾಲು ಮೀಸಲು ಎಡೆ ಮಾಡಿ ಅರ್ಪಿಸುತ್ತಾರೆ. ಹಾಲುಕಂಬಿ, ನಾರಿಕಲ್ಲು, ಚಿಪ್ಪುಕೊಡಲಿ, ಉಳಿಬಾರುಕೋಲು ಹಾಗೂ ಬಿದಿರಕೋಲುಗಳನ್ನಿಟ್ಟು ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ವಸ್ತುಗಳು ಕಾಡುಗೊಲ್ಲರ ಪಶುಪಾಲಕ ಸಂಸ್ಕೃತಿಯ ಕುರುಹುಗಳೇ ಆಗಿವೆ.

ವಿವಿಧ ಊರುಗಳಿಂದ ಆಗಮಿಸಿದ ಕೋಲಾಟದ ತಂಡಗಳು, ಭಜನೆ, ಚೌಡಿಕೆ, ತಮಟೆ ಹಾಗೂ ಉರುಮೆ ಕಲಾ ತಂಡಗಳು ಜಾತ್ರೆಯಲ್ಲಿ ಕಲಾ ಪ್ರದರ್ಶನಗಳು ನೀಡುತ್ತಿರುತ್ತವೆ. ಕಲಾವಿದರು ಕೇತೇದೇವರ ಮೇಲಿನ ಗಗ್ಗರ ಪದ, ಪುರಾಣಗಳನ್ನು

ಹಾಡಿನ ಮೂಲಕ ಅಭಿವ್ಯಕ್ತಿಸುತ್ತಿರುತ್ತಾರೆ. ಮಹಿಳೆಯರು ಸೋಬಾನೆ ಪದಗಳನ್ನು ಹಾಡುತ್ತಿರುತ್ತಾರೆ. ಹಲವು ದೇವರುಗಳನ್ನು ಪ್ರತಿಷ್ಠಾಪಿಸಿದ ಕಳ್ಳೆಮುಳ್ಳಿನ ಗುಡಿಯಲ್ಲಿ ಆದಿನ ನಿರಂತರ ದೇವರ ಆರಾಧನೆ, ಪೂಜೆ ನಡೆಯುತ್ತಿರುತ್ತದೆ. ಪಟ್ಟದ ಪೂಜಾರಿಗಳು ಸ್ವಾಮಿಗೆ ವಿಶೇಷ ಅರ್ಚನೆ ಮಾಡುತ್ತಾರೆ. ಜೋಡೆತ್ತುಗಳಿಗೆ ರೋಗ-ರುಜನಗಳು ಬಾರದಿರಲೆಂದು ಅವುಗಳ ಮೈತೊಳೆದು ಗುಡಿಯ ಸುತ್ತಲೂ ಪ್ರದಕ್ಷಣೆ ಹಾಕಿಸುತ್ತಾರೆ. ಜಾತ್ರಾ ಆಚರಣೆಯ ಸಂಪೂರ್ಣ ಜವಬ್ದಾರಿಯನ್ನು ಗೌಡರೇ ಹೊಂದಿರುತ್ತಾರೆ. ಬಂದ ಭಕ್ತರಿಂದ ಖರ್ಚು-ವೆಚ್ಚ ಅವನೇ ಸ್ವೀಕಾರ ಮಾಡುತ್ತಾನೆ. ರಾಜಕೀಯ ನಾಯಕರ ಆಗಮನ ಸರ್ವೇ ಸಾಮಾನ್ಯವಾಗಿರುತ್ತದೆ. ಇಲ್ಲಿ ಜಾತಿ, ಧರ್ಮ ಮತ್ತು ಪಕ್ಷಭೇದ ಮರೆತು ಪಾಲ್ಗೊಳ್ಳುತ್ತಾರೆ. ಅಂದು ಸಂಜೆ ನಾಲ್ಕೈದು ಗಂಟೆಗೆ ಕಳ್ಳೆಮುಳ್ಳಿನ ಗುಡಿಯಲ್ಲಿರುವ ದೇವರ ಪೆಟ್ಟಿಗೆಗಳನ್ನು ಕರಿಕಂಬಳಿ ಜಾಡಿಯ ಮೇಲೆ ಇಟ್ಟು ಪೂಜೆ ಮಾಡುತ್ತಾರೆ. ಅಕ್ಕಮ್ಮಳಬಾವಿಯ ತಣ್ಣೀರಿನಲ್ಲಿ ಮುಳುಗಿ ನೇಮಿಸಿದ ಎಂಟು ಜನ ಈರಗಾರರು ಕಳಸ ಕೀಳಲು ಬರಿಗಾಲಲ್ಲಿ ಬಂದು ಗೌಡರ ಅಪ್ಪಣೆಗೆ ಕಾದು ನಿಂತಿರುತ್ತಾರೆ. ಕಳಸ ಕೀಳುವುದನ್ನು ನೋಡಲು ಇಡೀ ಜಾತ್ರೆಯ ಜನ ಗುಡಿಯ ಸುತ್ತಲೂ ನಿಂತಿರುತ್ತಾರೆ. ಕೆಲವರು ತಮ್ಮ ತಮ್ಮ ವಾಹನಗಳ ಮೇಲೆ, ಎತ್ತಿನ ಗಾಡಿಯ ಮೇಲೆ ನಿಂತಿರುತ್ತಾರೆ. ಇನ್ನು ಮರ ಹತ್ತಿ ಕುಳಿತಿರುತ್ತಾರೆ. ಕ್ಷಣ ಕ್ಷಣಕ್ಕೂ ತವಕ.! ಜನರಿಗೆ ನೋಡುವ ಕುತೂಹಲ. ಉರುಮೆ ಸದ್ದು, ಜನರ ಶಿಳ್ಳು, ಕೇಕೆ ಈರಗಾರರನ್ನು ಉರಿದುಂಬಿಸುತ್ತಿರುತ್ತವೆ. ಅಪ್ಪಣೆ ದೊರಕಿದ ಕೂಡಲೇ ಆವೇಶಗೊಂಡ ಈರಗಾರರು ಕಳಸ ಕಿತ್ತು ತರಲು ನಾ ಮುಂದು, ತಾ ಮುಂದು ಎಂದು ತುದಿಗಾಲಿನಿಂದಲೇ ಕಳ್ಳೆ ಮುಳ್ಳಿನ ಗುಡಿಯನ್ನು ಓಡೋಡಿ ಹತ್ತುತ್ತಿರುತ್ತಾರೆ. ಹತ್ತುವಾಗ ಕೆಲ ಈರಗಾರರು ಮುಳ್ಳು ಕಳ್ಳೆಯಲ್ಲಿಯೇ ಸಿಕ್ಕಿ ಹಾಕಿಕೊಂಡು ಉರುಳಿ ಬೀಳುತ್ತಾರೆ. ಕೈ, ಮೈ ಪರಚಿಕೊಂಡರೂ ತಮಗರಿವಿಲ್ಲವೆಂಬಂತೆ ಗುಡಿಯ ತುದಿಗೆ ಹತ್ತಿ ಕಳಸ ಕೀಳುತ್ತಾರೆ. ಕಿತ್ತು ಕೈಯಲ್ಲಿನ ಕಳಸಗಳನ್ನು ಒಬ್ಬರಿಗೊಬ್ಬರು ಕೊಸರಿ ಕಸಿದುಕೊಳ್ಳುತ್ತಿರುತ್ತಾರೆ. ಕಳಸ ಕಿತ್ತ ನಂತರ ಈರಗಾರರು ಗುಡಿಯಿಂದ ಕೆಳಕ್ಕೆ ಇಳಿಯುತ್ತಿದ್ದಂತೆ ಅವರನ್ನು ಎತ್ತಿಕೊಂಡು ಗುಡಿ ಸುತ್ತಲೂ ಹಾಗೂ ದೇವರ ಮುಂದೆ ಪ್ರದರ್ಶನ ಮಾಡಿ ಅವನನ್ನು ಗೌರವದಿಂದ ಕಾಣುತ್ತಾರೆ. ಮೊದಲ ಕಳಸ ಕೀಳುವುದು ತಮ್ಮ ಬೆಡಗಿನ ಪ್ರತಿಷ್ಠೆಯೂ ಆಗಿರುತ್ತದೆ. ಕಳಸ ಕೀಳುವ ಈ ರೋಚಕ ಕ್ರಿಯೆ ಕೆಲವೇ ನಿಮಿಷಗಳಲ್ಲಿ ನಡೆದು ಹೋಗುತ್ತದೆ. ಕಟ್ಟಿದ್ದ ಕಾರೆಮುಳ್ಳು, ಬಾರೆಮುಳ್ಳು, ಎರದಕಳ್ಳೆ ಮುಳ್ಳಿನ ರಾಶಿಯ ಅಡಿಯಲ್ಲಿ ದೇವರುಗಳನ್ನು ಮತ್ತು ಮುಳ್ಳಿನ ರಾಶಿಯ ತುದಿಯಲ್ಲಿ ಕಳಸ ಸ್ಥಾಪಿಸಿರುವ ಹಾಗೂ ಕೀಳುವ ಸಂಪ್ರದಾಯವಿದೆ. ಇದನ್ನು ನೋಡಲಿಕ್ಕೆ ಬೆಂಗಳೂರು, ಮೈಸೂರು, ಬಳ್ಳಾರಿ, ದಾವಣಗೆರೆ, ತುಮಕೂರು ಜಿಲ್ಲೆಗಳಿಂದಲೂ ಜನ

ಸಾಗರೋಪಾದಿಯಲ್ಲಿ ಭಕ್ತರು ಬಂದು ಸೇರುತ್ತಾರೆ. ನಂತರ ದೇವರ ಪೆಟ್ಟಿಗೆಗಳನ್ನು ವಸತಿ ದಿಬ್ಬದಿಂದ ಮೆರವಣಿಗೆಯ ಮೂಲಕ ಪುರ್ಲೆಹಳ್ಳಿಗೆ ಕರೆ ತರುತ್ತಾರೆ. ಅಲ್ಲಿ ಭಕ್ತರು ದೇವರಿಗೆ ಮಣೇವು ಹಾಕಿಸುತ್ತಾರೆ. ರೋಗ-ರುಜನ ಬಾರದಿರಲೆಂದು, ನನ್ನನ್ನು ಕಾಪಾಡಲೆಂದು ದೇವರ ನೀರನ್ನು ಹಾಕಿಸಿಕೊಂಡು ಉರುಳು ಸೇವೆಯನ್ನು ಅರ್ಪಿಸುತ್ತಾರೆ. ಎಲ್ಲಾ ದೇವರುಗಳು ಚನ್ನಮ್ಮನಾಗತಿಹಳ್ಳಿ ಕ್ಯಾತೆದೇವರ ದೇವಸ್ಥಾನಕ್ಕೆ ಬಂದು ಸೇರುತ್ತವೆ. ರಾತ್ರಿ ಅಲ್ಲಿ ದೇವರ ಮೆರವಣಿಗೆಯಲ್ಲಿ ಭಕ್ತರು ಉರುಮೆ ವಾದ್ಯದ ತಾಳಕ್ಕೆ ತಕ್ಕಂತೆ ಕುಣಿಯುತ್ತಿರುತ್ತಾರೆ. ಬೆಳಗಿನ ಜಾವ ಐದು ಗಂಟೆಯ ನಂತರ ಕರಿಕಂಬಳಿ ಗದ್ದುಗೆ ಹಾಸಿ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪಿಸಿದ ನಂತರ ನವಣೆ ಅನ್ನದ ದಾಸೋಹ ನೆರವೇರುತ್ತದೆ.

ದೇವರ ಗುಡಿಕಟ್ಟಲು ಹಾಕಿದ್ದ ಕಳ್ಳೆಮುಳ್ಳನ್ನು ಕುರಿ ದನಗಳ ಸಾಕಾಣಿಕೆದಾರರು ರೊಪ್ಪ ಅಥವಾ ಕುರಿಹಟ್ಟಿ ನಿರ್ಮಾಣ ಹಾಗೂ ಹೊಲಕ್ಕೆ ಬೇಲಿ ಹಾಕಲು ಕಳ್ಳೆಮುಳ್ಳನ್ನು ಹಾರಾಜಿನ ಮೂಲಕ ಪಡೆಯುತ್ತಾರೆ. ದೇವರ ಮೀಸಲುಕಳ್ಳೆಮುಳ್ಳನ್ನು ಪಡೆದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಕ್ಯಾತಪ್ಪನ ಜಾತ್ರಾ ಆಚರಣೆಗೆ ಆಗಮಿಸಿದ್ದ ಪರಿವಾರದ ದೇವರುಗಳು ಜಾತ್ರಾ ಆಚರಣೆ ಮುಗಿದ ನಂತರ ತಮ್ಮ ತಮ್ಮ ಊರುಗಳನ್ನು ತಲುಪುತ್ತವೆ. ಆ ದಿನ ರಾತ್ರಿ ಹದಿಮೂರು ಗುಡಿಕಟ್ಟಿನ ವ್ಯಾಪ್ತಿಯ ದೇವಸ್ಥಾನಗಳಲ್ಲಿ ಹುರುಳಿ ದಾನ್ಯವನ್ನು ಬೇಯಿಸಿ, ಕಾಳುಗಳನ್ನು ಒರಳಲ್ಲಿ ಕುಟ್ಟಿ ತಕ್ಕು(ಹೂರಣ) ತಯಾರಿಸಿ ಸಂಜೆ ದೇವರಿಗೆ ನೈವೇಧ್ಯ ಮಾಡಿ ಅರ್ಪಿಸುತ್ತಾರೆ. ಇದು ಒಂದು ರೀತಿಯ ಅಪರೂಪದ ಆಚರಣೆಯಾಗಿದೆ. ಇದನ್ನು ಹುರುಳಿ ವಸಲು (ಹುಳ್ಳಿವಸ್ಲು), ಹುರುಳಿವ್ರತ ಅಳಿಯುವುದು ಅಥವಾ ಮರಿಪರಿಷೆ ಎಂತಲೂ ಕರೆಯುತ್ತಾರೆ. ಮರಿಪರಿಷೆ ಎಂದರೆ ಚಿಕ್ಕ ಪರಿಷೆ, ಹಬ್ಬ, ಆಚರಣೆ ಎಂದರ್ಥ. ಜಾತ್ರಾ ಆಚರಣೆ ಅಂತ್ಯಗೊಳ್ಳುವಾಗ ಕೇತೇದೇವರ ಮೂಲ ಕಟ್ಟೆಮನೆಯಾದ ಚನ್ನಮ್ಮನಾಗತಿಹಳ್ಳಿಯ ಕೇತೇದೇವರ ದೇವಸ್ಥಾನದ ಹೊರ ಭಾಗದಲ್ಲಿ ಸಗಣಿಯಿಂದ ನೆಲ ಸಾರಿಸುತ್ತಾರೆ. ದೇವರ ಗುಡಿ ಮುಂದೆ ಏಳೆಂಟು ಅಡಿ ಅಗಲ, ನಾಲ್ಕೈದು ಅಡಿ ಉದ್ದದ ಜಾಗದಲ್ಲಿ ಕಳ್ಳಿಗೂಟ ನೆಡೆಸಿ ಆ ಗೂಟದ ಸುತ್ತಲೂ ತುಗ್ಗಲಿ, ಕಾರೇ ಮೋರುಗಳಿಂದ ಚಿಕ್ಕಗುಡಿ ನಿರ್ಮಿಸಿ ಅದರ ಮೇಲೆ ಕಾರೆ, ಕವಳಿ ಮುಳ್ಳುಕಳ್ಳೆಗಳನ್ನು ಹಾಕಿ ಬಾರೆಕಳ್ಳೆ ರೆಂಬೆಗಳನ್ನು ಹೊದಿಸುತ್ತಾರೆ. ಆ ಗುಡಿಯೊಳಗೆ ಬಸವನ ಕಂಚಿನ ವಿಗ್ರಹ(ಪ್ರತಿಮೆ)ಯನ್ನು ಪ್ರತಿಷ್ಠಾಪನೆ ಮಾಡುತ್ತಾರೆ. ಬಿದಿರಿನ ಪುಟ್ಟಿಯಲ್ಲಿಟ್ಟ ಕಂಚಿನ ಪಂಚಕಳಸಗಳು, ಘಂಟೆ ಧೂಪದಾರತಿ, ಆರತಿ ತಟ್ಟೆ ಮತ್ತು ಏಳೆಂಟು ಒನಕೆ ಮತ್ತು ಮೂರ್‍ನಾಲ್ಕು ಅಡಿ ಉದ್ದದ ಕಡೆಗೋಲು ಇಟ್ಟು ಪೂಜಿಸುತ್ತಾರೆ. ನವಣೆಯಿಂದ ತಯಾರಿಸಿದ ಹಿಟ್ಟನ್ನು ಮಣ್ಣಿನ ಒರಳಿನಲ್ಲಿ

ಹಾಕಿ ಒನಕೆಯಿಂದ ಕುಟ್ಟುವ ಶಾಸ್ತ್ರ ಮಾಡುತ್ತಾರೆ. ಹೊಸ ಬಿದಿರಿನ ಮೊರದಲ್ಲಿ ಹುರುಳಿ ಮತ್ತು ನವಣೆ ಹಿಟ್ಟನ್ನು ತುಂಬಿಕೊಂಡು ಮೂರು ಮೂರು ಬಾರಿ ಬಸವನ ವಿಗ್ರಹ ಹಾಗೂ ಕಳಸದ ಚೆಂಬುಗಳಲ್ಲಿ ಹಾಕಿ ಪುನಃ ಒರಳಿಗೆ ಹಾಕಿ ಮತ್ತೇ ಮೂರು ಬಾರಿ ಇಷ್ಟಿಷ್ಟು ಮೊರಕ್ಕೆ ಹಾಕಿ ಕೊಳ್ಳುವ ಶಾಸ್ತ್ರ ಮಾಡುತ್ತಾರೆ.

ಚಳ್ಳಕೆರೆ ಕಾಟಪ್ಪನಹಟ್ಟಿ ಮತ್ತು ಬಂಜಗೆರೆಯಿಂದ ತಂದಿದ್ದ ಮೀಸಲು ಹಾಲು–ಮೊಸರನ್ನು ಮಣ್ಣಿನ ಹೊಸ ಸೋರೆಗೆ ಸುರಿದು ಪೂಜೆ ಮಾಡಿ ಆಸದನಾರಿನ ಹಗ್ಗವನ್ನು ಕಡೆಗೋಲಿಗೆ ಕಟ್ಟಿ ಪೂಜಾರಿ ಮನೆತನದ ಹೆಣ್ಣುಮಕ್ಕಳು ಮೊಸರು ಕಡೆಯುತ್ತಾರೆ. ದೇವಸ್ಥಾನದ ಆವರಣದಲ್ಲಿ ಒಲೆ ಹೂಡಿ ತಾಮ್ರದ ಎರಡು ಹಂಡೇ(ಪಾತ್ರೆ)ಗಳಲ್ಲಿ ಮೀಸಲು ಹುರುಳಿಕಾಳನ್ನು ಬೇಯಿಸಿ ಆ ಕಾಳುಗಳನ್ನು ಒರಳಿಗೆ ಹಾಕಿ ಹೆಂಗಸರು ಕುಟ್ಟಿ ಹುರುಳಿಹೂರಣ(ತಕ್ಕು)ವನ್ನು ತಯಾರಿಸುತ್ತಾರೆ. ಆ ಪ್ರಸಾದವನ್ನು ಮೊದಲಿಗೆ ನೆಂಟಸ್ಥರಿಗೆ ಇಟ್ಟು ಆಮೇಲೆ ಅವರುಗಳು ಸ್ವೀಕಾರ ಮಾಡುತ್ತಾರೆ. ಆ ಹುರಳಿ ಹೂರಣಕ್ಕೆ ಬೆಲ್ಲದ ಪಾನಕ, ಬಾಳೆಹಣ್ಣು ಮಿಶ್ರಣ ಮಾಡಿ ಹಾಲು ಮೊಸರಿನ ನೈವೇದ್ಯ ಮಾಡಿ ದೇವರಿಗೆ ಅರ್ಪಿಸುವುದರ ಮೂಲಕ ವಿಶೇಷ ಪೂಜೆ ಸಲ್ಲಿಸುತ್ತಾರೆ. ಹಿಡಿದಿದ್ದ ಹುರಳಿ ವ್ರತವನ್ನು ಅಂದು ಅಳಿಯುತ್ತಾರೆ. ಅಂದಿನಿಂದ ಆರೇಳು ತಿಂಗಳು ಹುರುಳಿ ಮತ್ತು ನವಣೆಯನ್ನು ಸ್ವೀಕಾರ ಮಾಡುತ್ತಾರೆ. ಮಾರನೆ ದಿನ ಬೆಳಿಗ್ಗೆ ಕ್ಯಾತೇದೇವರನ್ನು ಪ್ರತಿಷ್ಠಾಪಿಸಿದ ಬೊಮ್ಮಣ್ಣನ ಪ್ರತಿನಿಧಿ ಬೊಮ್ಮನಗೌಡನಿಗೆ ಹುರುಳಿ ಹೂರಣ–ನವಣೆ ನೈವೇದ್ಯದ ಬುತ್ತಿಯನ್ನು ಬಿಳಿಬಟ್ಟೆಯಲ್ಲಿ ಆತನ ಮಡಿಲಿಗೆ ಕಟ್ಟಿ ನೀರಿನ ಸೇಳೇವು ಕೊಡುವುದರ ಮೂಲಕ ಊರಿನ ವಕ್ಕಲು ಮಕ್ಕಳೆಲ್ಲರು ಆತನನ್ನು ಊರ ಹುದಿಬಾಗಿಲವರೆಗೆ ಕಳುಹಿಸಿ ಕೊಡುವ ಪದ್ಧತಿ ಇದೆ. ಪಟ್ಟದ ಪೂಜಾರಿಗಳು ಹಾಗೂ ಗೌಡರುಗಳು ಸಭೆ ಸೇರಿ ಜಾತ್ರೆಗೆ ಸಂಬಂಧಿಸಿದ ಖರ್ಚು–ವೆಚ್ಚ, ಲಾಭ ನಷ್ಟದ ಬಗ್ಗೆ ಕುರಿತು ಚರ್ಚಿಸಿದ ನಂತರ ಗೌಡರಿಂದ ಒಪ್ಪಿಗೆ ಪಡೆದು ಪಟ್ಟದ ಪೂಜಾರಿ ಜಾತ್ರೆ ಆರಂಭದಲ್ಲಿ ಕಟ್ಟಿದ್ದ ಕಂಕಣವನ್ನು ಬಿಚ್ಚುತ್ತಾನೆ. ಭಕ್ತರು ತೀರ್ಥ ಪ್ರಸಾದವನ್ನು ಸ್ವೀಕರಿಸಿ, ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ. ಹೀಗೆ ದೇವರಿಗೆ ಮಹಾ ಮಂಗಳಾರತಿ ಕಾರ್ಯದೊಂದಿಗೆ ಜಾತ್ರೆ ಅಂತ್ಯಗೊಳ್ಳುತ್ತದೆ.

ಇದುವರೆಗೂ ನಡೆದ ಜಾತ್ರೆಯ ಎಲ್ಲಾ ಆಚರಣೆಗಳು ತನ್ನದೇ ಆದ ಪ್ರಾದೇಶಿಕ ಹಿನ್ನಲೆಯನ್ನು ಹೊಂದಿದ್ದು ಆಯಾಯ ಪ್ರಾದೇಶಿಕತೆಯ ಕೆಲವು ಪ್ರಮುಖ ವಿಶೇಷ ಅಂಶಗಳನ್ನೊಳಗೊಂಡು ಪ್ರಖ್ಯಾತಿಯನ್ನು ಪಡೆದಿವೆ. ಇನ್ನು ಕೆಲವು ಆಚರಣೆಗಳು ಅಲ್ಲಲ್ಲಿ ಕಂಡುಬಂದರೂ ಎಲ್ಲೋ ಕೆಲವು ಕಡೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಾಗಿರುವುದನ್ನು ಕಾಣಬಹುದಾಗಿದೆ. ಕೇತೇದೇವರ ಜಾತ್ರೆ ಸಾಂಸ್ಕೃತಿಕವಾಗಿ ತನ್ನದೇ ವಿಶಿಷ್ಟತೆಯನ್ನು

ಹೊಂದಿದ್ದು ಪ್ರಾಕೃತಿಕ ಸಂಪತ್ತು, ವಾಯುಗುಣ, ಜನ ಜೀವನದ ಮೇಲೆ ಅನೇಕ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿದೆ. ಜಾತ್ರೆ ಯಾವುದೇ ಸ್ಥಳದಲ್ಲಿ ನಡೆದರೂ, ಸಾಮಾನ್ಯವಾಗಿ ಅದು ಕೇವಲ ಒಂದು ಜಾತಿ ಜನಾಂಗದವರಿಂದ ನಡೆಯುವುದಿಲ್ಲ. ಬದಲಾಗಿ ವಿವಿಧ ಜಾತಿ ಜನಾಂಗದವರರೆಲ್ಲರೂ ಸೇರಿ ಜಾತ್ರೆ ನಡೆಸುತ್ತಾರೆ. ಆದರೆ ಬುಡಕಟ್ಟು ಸಂಸ್ಕೃತಿಯ ಕ್ಯಾತೇದೇವರ ಜಾತ್ರಾ ಆಚರಣೆ ಒಂದೇ ಸಮುದಾಯದ ಕೆಲವೇ ಬೆಡಗಿನವರು ಸೇರಿ ಆಚರಿಸಿದರೂ, ಇಲ್ಲಿ ಎಲ್ಲಾ ಬೆಡಗಿನರು, ವಿವಿಧ ಜಾತಿ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಾರೆ. ಏಕೆಂದರೆ ಒಂದೊಂದು ಸಮುದಾಯದ ಒಳಗೆ ಹಲವು ಬೆಡಗುಗಳಿರುತ್ತವೆ. ಜಾತಿಗೂ ಒಂದೊಂದು ಸಂಸ್ಕೃತಿ ಇದ್ದಂತೆ, ಒಂದೊಂದು ಬೆಡಗಿಗೂ ತನ್ನದೇ ಆದ ವೈಶಿಷ್ಟ್ಯತೆ ಇರುತ್ತದೆ. ಆದ್ದರಿಂದ ಜಾತ್ರೆಯನ್ನು ಎಲ್ಲಾ ಸಂಸ್ಕೃತಿಯವರು ಸಹಕಾರ ಮತ್ತು ಸಹ ಬಾಳ್ವೆಯಿಂದ ನಡೆಸುವುದರ ಮೂಲಕ ಸಂಸ್ಕೃತಿ ಸಂಗಮ ಏರ್ಪಡುತ್ತದೆ. ಸಾಮಾಜಿಕ ಸೌಹಾರ್ಧ ಸ್ನೇಹತ್ವದ ನೆಲೆಯೂ ರಚನೆಗೊಂಡಿರುವುದರ ಮೂಲಕ ಈ ಬುಡಕಟ್ಟು ಸಂಸ್ಕೃತಿಯ ಜಾತ್ರೆ ತನ್ನ ಮಹತ್ವವನ್ನು ಇಂದಿಗೂ ಉಳಿಸಿಕೊಂಡಿರುವುದು ವಿಶೇಷವೆನ್ನಬಹುದು. ಹೀಗೆ ಜನಪದರು ತಮ್ಮ ಬದುಕಿನಲ್ಲಿ ಮಾನಸಿಕ ನೆಮ್ಮದಿಗಾಗಿ ಇಂತಹ ಆಚರಣೆ ಸಂಪ್ರದಾಯಗಳನ್ನು ಅಳವಡಿಸಿಕೊಂಡಿದ್ದಾರೆ. ಇವುಗಳನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅವಲೋಕಿಸಿದಾಗ ಮೌಢ್ಯತೆ, ಅಂಧಾನುಕರಣೆ, ಮೂಢನಂಬಿಕೆಯ ಅಂಶಗಳು ಕಂಡುಬಂದರೂ ಇವುಗಳ ಅನುಷ್ಠಾನದಿಂದ ಜನಪದ ಜೀವನದಲ್ಲಿ ಆತ್ಮತೃಪ್ತಿ ಕೊಡು–ಕೊಳ್ಳುವಿಕೆ, ಸಹ ಬಾಳ್ವೆ ನಡೆಸಲು ಇಂಥ ಜಾತ್ರೆಗಳು ಪೂರಕವಾಗುತ್ತವೆ.

**ಕಳ್ಳೆ ಮುಳ್ಳಿನ ಆಚರಣಾ ವಿಶಿಷ್ಟತೆ**

ಪುರ್ಲೆಹಳ್ಳಿ ಬಳಿ ಕ್ಯಾತೇದೇವರ ಮುಳ್ಳಿನ ಗುಡಿ ನಿರ್ಮಿಸಲು ಮಾರ್ಘಶಿರ ಮಾಸ ವಾಗಿಯು ಚಳಿ ಬೆಳಗಿನ ಜಾವ ವಸತಿ ದಿಬ್ಬದಲ್ಲಿ ಸುಮಾರು ಎರಡು ಕಿ.ಮೀ.ದೂರದವರೆಗೂ ಉರುಮೆ ಸದ್ದು, ಜನರ ಶಿಳ್ಳು, ಕೇಕೆ, ಕೂಗು, ಗದ್ದಲ, ಗಲಾಟೆ ಕೇಳಿಬರುತ್ತದೆ. ಮುಳ್ಳುಗಳು ಕೈ, ಮೈ ಪರಚಿಕೊಂಡರು ಅರಿವಿಲ್ಲ ಎಂಬಂತೆ ಭಕ್ತರು, ತರಾ ತುರಿಯಲ್ಲಿ ಕವಳಿ, ಕಾರೆ, ಬಾರೆಕಳ್ಳೆ ಮುಳ್ಳಿನ, ಉದ್ದುದ್ದದ ರೆಂಬೆ, ಕೊಂಬೆಗಳನ್ನು ಹಿಡಿದಿಡಿದು ಎಳೆದು ಬರೀಗಾಲಲ್ಲಿ ಓಡೋಡಿ ಗುಡಿಯ ಮೇಲಕ್ಕೆ ಆವೇಶದಿಂದ ಎಸೆದು ಗುಡಿ ನಿರ್ಮಾಣದ ಕೆಲಸ ಕೆಲ ನಿಮಿಷಗಳಲ್ಲೇ ಮುಗಿದೇ ಹೋಗುತ್ತದೆ. ಇದು ಸಾಹಸಮಯ ಕೆಲಸವಾದರೂ, ಪವಾಡ ಸದೃಶ್ಯವೆಂಬಂತೆ ಕೆಲವೇ ಕೆಲವು ಕ್ಷಣದಲ್ಲಿ ಸುಮಾರು ಇಪ್ಪತ್ತು ಅಡಿ ಎತ್ತರದ ಗುಡಿ ನಿರ್ಮಾಣ ಗೊಳ್ಳುತ್ತದೆ. ತಕ್ಷಣ ಅಕ್ಕಳಬಾವಿಯ ತಣ್ಣೀರಿನಲ್ಲಿ ಮಿಂದು ಈರಗಾರರಿಬ್ಬರು ಪೂಜಾರಿ

ಕೊಟ್ಟ ಕಂಚಿನ ಕಳಸಗಳನ್ನು ಕರಿಕಂಬಳಿಯಲ್ಲಿ ಇಟ್ಟುಕೊಂಡು ತದೇಕ ಚಿತ್ತದಿಂದ ಉತ್ಸಾಹದಿಂದ ನಾ ಮುಂದು ತಾ ಮುಂದು ಎಂದು ಮುಳ್ಳಿನಗುಡಿ ಹತ್ತಿ ಭಕ್ತಿಯಿಂದ ಕಳಸ ಪ್ರತಿಷ್ಠಾಪಿಸುತ್ತಾರೆ.

ಅಪ್ಪಟ ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಈ ಜನರಲ್ಲಿ ಪರಸ್ಪರ ಹೊಂದಾಣಿಕೆ, ಪ್ರೀತಿ, ಸೌಹಾರ್ದತೆ ಹಾಗೂ ಸಹಕಾರದ ಜೊತೆಗೆ ಒಗ್ಗಟಿನ ಪ್ರದರ್ಶನವೂ ಕಂಡು ಬರುತ್ತದೆ. ಸುಮಾರು ಒಂದು ವಾರದ ಕಾಲ ನಿರ್ಮಾಣ ಮಾಡಬೇಕಾದ ಕಳ್ಳೆ ಮುಳ್ಳಿನ ಗುಡಿಯನ್ನ. ಗಂಟೆಯೊಳಗೆ ಪೂರ್ಣಗೊಳಿಸುತ್ತಾರೆ. ಈ ಕಳ್ಳೆ ಮುಳ್ಳಿನ ಆಚರಣೆಯ ಮೂಲಕ ಈ ಸಮುದಾಯ ತನ್ನ ಬುಡಕಟ್ಟು ಸಂಸ್ಕೃತಿಯ ಜೀವಂತಿಕೆಯನ್ನು ಸದಾ ಕಾಪಿಟ್ಟುಕೊಂಡು ಬಂದಿದೆ. ನಿಜವಾದ ಜಾತ್ರಾ ಆಚರಣೆಯೆಂದರೆ ಕಳ್ಳೆ ಮುಳ್ಳಿನ ಗುಡಿ ನಿರ್ಮಾಣದ ಕಾರ್ಯ. ಈ ಕ್ರಿಯೆ ರೋಚಕವಾಗಿದ್ದು ನೋಡುಗರಲ್ಲಿ ರೋಮಾಂಚನವನ್ನುಂಟು ಮಾಡುತ್ತದೆ. ಈ ದೃಶ್ಯ ನೋಡಲು ಕೊರೆಯುವ ಚಳಿಯಲ್ಲಿಯೇ ಅಪಾರ ಸಂಖ್ಯೆಯಲ್ಲಿ ಭಕ್ತ ಸಮೂಹವೇ ವಸತಿ ದಿಬ್ಬದಲ್ಲಿ ನೆರೆದಿರುತ್ತದೆ. ನಿರ್ಮಾಣಗೊಂಡ ಕಳ್ಳೆ ಮುಳ್ಳಿನ ಗುಡಿ ನೋಡಿದರೆ ಥೇಟ್ ಪಿರಾಮಿಡ್ ಆಕಾರದಲ್ಲಿರುತ್ತದೆ. "ಪೂರ್ವಜರ ಆತ್ಮಗಳು ಅಂದರೆ ಅತಿಮಾನುಷ ಶಕ್ತಿಗಳು ಆಗಾಗ ಅತಿ ಎತ್ತರದ ಗುಡಿಯೊಳಗೆ ಬಂದು ಹೋಗುತ್ತಿದ್ದರು ಎನ್ನುವ ಎರಿಕ್ ವೋನ್ ಡಾನಿಕನ್ ರವರ ಕಾಲ್ಪನಿಕ ಚಿಂತನೆಯಂತೆ"[೩೪] ಸಾಂಸ್ಕೃತಿಕ ವೀರ ಕೇತಪ್ಪನ ಆತ್ಮಶಕ್ತಿಯ ದೈವೀಗುಣ ನಮ್ಮೆಲ್ಲರನ್ನು ರಕ್ಷಿಸುತ್ತದೆ ಎನ್ನುವ ನಂಬಿಕೆಯಿಂದ ಪ್ರತಿ ವರ್ಷ ಕಾಡುಗೊಲ್ಲ ಬುಡಕಟ್ಟಿನವರು ಆಚರಿಸುವ ಕೇತಪ್ಪನ ಕಳ್ಳೆ ಮುಳ್ಳಿನ ವಿಶಿಷ್ಟ ಆಚರಣೆ ಸಂಶೋಧನೆಗೆ ತಾತ್ವಿಕತೆ ಒದಗಿಸುತ್ತದೆ ಎನ್ನಬಹುದು.

ಕರ್ನಾಟಕದಲ್ಲಿ ಸಾಮಾನ್ಯವಾಗಿ ನಡೆಯುವ ಎಲ್ಲಾ ದೈವಗಳ ಆರಾಧನೆ ಹಾಗೂ ಜಾತ್ರೆಗಳು ಆಯಾ ದೈವಗಳ ನಂಬಿಕೆ, ಸಂಪ್ರದಾಯ ಮತ್ತು ತಳಹದಿಯ ಮೇಲೆ ಜರುಗುತ್ತವೆ. ಆಯಾ ಜನಾಂಗ ಮತ್ತು ಧರ್ಮ ಹಾಗೂ ದೈವ ಮತ್ತು ದೇವರುಗಳನ್ನು ಕುರಿತಂತೆ ಇರುವ ಪೌರಾಣಿಕ ಹಿನ್ನಲೆಯಲ್ಲಿ ಆಚರಣೆ ಮತ್ತು ಜಾತ್ರೆ ಹಾಗೂ ಉತ್ಸವಗಳನ್ನು ನಡೆಸಲಾಗುತ್ತದೆ. ಇದರಲ್ಲಿ ಪಾಲ್ಗೊಂಡ ಪ್ರತಿಯೊಬ್ಬರಲ್ಲೂ ಒಂದಲ್ಲ ಒಂದು ರೀತಿಯ ಸಾಮಾಜಿಕ ಸಹಿಷ್ಣುತೆ ಹಾಗೂ ಭಾವೈಕ್ಯತೆಯನ್ನು ಕಾಪಾಡಿಕೊಂಡು ಬರುವಲ್ಲಿ ಇವು ಪ್ರಧಾನ ಪಾತ್ರವಹಿಸುತ್ತಿವೆ. ಕ್ಯಾತಪ್ಪ ದೈವಗಳ ಆರಾಧನಾ ನೆಲೆಗಳ ವ್ಯಾಪ್ತಿಯೊಳಗೆ ಕೃಷಿ ವರ್ಗದವರು ಹೆಚ್ಚಿನ ಸಂಖ್ಯೆಯಲ್ಲಿದ್ದು ಇಲ್ಲಿನ ಜನತೆಯ ಭಾಷೆ, ಊಟ, ಉಡುಗೆ, ತೊಡಿಗೆ, ಸಂಪ್ರದಾಯ, ಆಚರಣೆ ಹೀಗೆ ಪ್ರತಿಯೊಂದರಲ್ಲಿಯೂ ವಿಶೇಷತೆ ಇದ್ದು ಜನ ಸಾಮಾನ್ಯರನ್ನು ಅವು ಸೆಳೆಯುತ್ತಿವೆ.

ಜನಪದರು ಹೆಚ್ಚಾಗಿ ಕಂಡುಬರುವಲ್ಲಿ ಮೌಖಿಕ ಸಾಹಿತ್ಯವೂ ಉಗಮವಾಗುತ್ತದೆ. ಇದರಲ್ಲಿ ಜನಪದ ಗೀತೆಗಳು, ಸೋಬಾನೆ ಪದಗಳು ಹಾಗೂ ಗಗ್ಗದ ಪದಗಳು ಪ್ರಮುಖವಾದ ಸಾಹಿತ್ಯ ಪ್ರಕಾರಗಳಾಗಿವೆ. ನಾಡಿನಾದ್ಯಂತ ವಿವಿಧ ಜಾತ್ರೆ ಹಾಗೂ ಉತ್ಸವಗಳು ನಡೆಯುತ್ತವೆ. ಇವುಗಳಲ್ಲಿ ಬುಡಕಟ್ಟು ದೈವಗಳ ಆಚರಣೆ ಹಾಗೂ ಉತ್ಸವಗಳು ವಿಶಿಷ್ಟವಾದದ್ದಾಗಿದೆ. ಇಲ್ಲಿ ನಡೆಯುವ ಎಲ್ಲಾ ಆಚರಣೆ, ಉತ್ಸವ ಹಾಗೂ ಜಾತ್ರೆಗಳು ಪೌರಾಣಿಕ ಅಂಶಗಳನ್ನು ಒಳಗೊಂಡಿದ್ದರೂ, ಆಯಾ ಜನಾಂಗದ ಪ್ರಾದೇಶಿಕತೆಯೊಂದಿಗೆ ಅವರ ಆಶೋತ್ತರಗಳನ್ನು ಅವು ಪ್ರಕಟಿಸುತ್ತವೆ. ಅಲ್ಲದೆ ಶಿಷ್ಟ ಸಂಸ್ಕೃತಿಯ ಪ್ರಭಾವದಿಂದ ಜಾತ್ರೆಗಳು ನಮ್ಮಲಿಂದು ಆಚರಣೆಗಳ ರೂಪದಲ್ಲಿ ಜರುಗುತ್ತಿವೆ. ಜಾತ್ರೆಯಲ್ಲಿ ನಡೆಯುವ ಪ್ರತಿಯೊಂದು ಧಾರ್ಮಿಕ ಆಚರಣೆಗಳು ದೈವಸಂಕೇತವಾಗಿ ಸಂಸ್ಕೃತಿಯ ಮಹತ್ವವನ್ನು ಪಡೆದುಕೊಂಡಿವೆ. ಇಲ್ಲಿ ನಡೆಯುವ ದೇವರಪೂಜೆ, ಪ್ರತಿಷ್ಠಾಪನೆ, ದೇವತಾಸ್ತೋತ್ರಾ, ಬಲಿ, ಉರುಳುಸೇವೆ ಹರಕೆಗಳೆಲ್ಲವೂ ನಡೆಯುತ್ತವೆ. ಇವುಗಳನ್ನು ನಡೆಸಬೇಕಾದರೆ ಕೆಲವೊಂದು ನೀತಿ ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಇವುಗಳೆಲ್ಲವೂ ಒಂದು ರೀತಿಯ ದೈವಿಕ ಭಾವನೆಯನ್ನು ಹೆಚ್ಚಿಸುತ್ತಿವೆ.

ಕ್ಯಾತಪ್ಪನ ಆಚರಣೆಗಳು ಧಾರ್ಮಿಕವಾಗಿ ಮಾನ್ಯತೆ ಪಡೆದಿದ್ದರೂ, ಸಾಂಸ್ಕೃತಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ. ಪ್ರಾಕೃತಿಕ ಸಂಪತ್ತು, ವಾಯುಗುಣ, ಜನಜೀವನದ ಮೇಲೆ ಅನೇಕ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿದೆ. ಜಾತ್ರೆ ಮತ್ತು ಆಚರಣೆಗಳು ಯಾವುದೇ ಪ್ರದೇಶದಲ್ಲಿ ನಡೆದರೂ ಅಲ್ಲಿ ವಿವಿಧ ಜಾತಿ ಜನಾಂಗದವರು ಸೇರಿಕೊಳ್ಳುತ್ತಾರೆ. ಒಂದೊಂದು ಜಾತಿಗೂ ಒಂದೊಂದು ಸಂಸ್ಕೃತಿ ಇದ್ದು ಅವರಲ್ಲಿ ಪರಸ್ಪರ ಸಹಕಾರ, ಸೌಹಾರ್ದತೆ, ಸ್ನೇಹತ್ವ ನೆಲೆಗೊಂಡಿರುವುದರ ಮೂಲಕ ಕ್ಯಾತಪ್ಪನ ಆಚರಣೆಗಳು ತಮ್ಮದೇ ಆದ ಮಹತ್ವವನ್ನು ಉಳಿಸಿಕೊಂಡಿರುವುದು ವಿಶೇಷವೆನ್ನಬಹುದು.

**ಅಡಿ ಟಿಪ್ಪಣಿ**

೧. ಸುಭಾಷಚಂದ್ರ ನಾಟೀಕಾರ, ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ ಪುಟ೨೦ ಮತ್ತು ೨೧.

೨. ಗಂಗಾನಾಯಕ್,(ಸಂ) ಕನ್ನಡ ಜಾನಪದ. ಮೈಸೂರು ವಿ.ವಿ. ಪುಟ ೯೩ ಮತ್ತು ೯೪.

೩. ಸುಭಾಷಚಂದ್ರ ನಾಟೀಕಾರ, ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ ಪುಟ ೨೧.

೪. ರಾಜಶೇಖರನ್ ಜಾನಪದ ಸಂಭ್ರಮ ೨೦೦೩ ಪುಟ ೪೮.

೫. ಜವರೇಗೌಡ, ಜಾನಪದ ಅಧ್ಯಯನ ಪುಟ ೨೪೩.

೬. ಚಕ್ಕೆರೆ ಶಿವಶಂಕರ್, ಜಾನಪದ ತಿಳಿವಳಿಕೆ, ಪುಟ ೨೦೫.

೭. ಸಿದ್ದಲಿಂಗಯ್ಯ, ಗ್ರಾಮದೇವತೆಗಳು ಪುಟ ೭೨.

೮. ಸುಭಾಷಚಂದ್ರ ನಾಟೀಕಾರ, ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ ಪುಟ ೨೩.

೯. ನಾಗರಾಜ.ಓ. ತುಮಕೂರು ಜಿಲ್ಲೆಯ ಗ್ರಾಮ ದೇವತೆಗಳು ಪುಟ ೩೨೯.

೧೦. ಹೆತ್ತಗೋನಹಳ್ಳಿ ಮಾಯಮ್ಮ ಚೇತನ ಎಚ್.ಆರ್. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ ಬೆಂಗಳೂರು ಪುಟ ೨೯.

೧೧. ಸತೀಶ ಎಚ್. ನಾಯಕನಹಟ್ಟಿ ತಿಪ್ಪೇಸ್ವಾಮಿ ಸಾಂಸ್ಕೃತಿಕ ಅಧ್ಯಯನ ಪುಟ೧೨೧

೧೨. ಶಿವಕುಮಾರ್, ಟಿ.ಸಿ,ಮಂಡ್ಯ ಜಿಲ್ಲೆಯ ಗ್ರಾಮ ದೇವತೆಗಳು ಒಂದು ಅಧ್ಯಯನ ಪುಟ ೧೬೩.

೧೩. ಮುತ್ತಯ್ಯ ಎಂ.ಎಸ್.ಕಂಪಳ ಪುಟ ೫೦.

೧೪. ಬ್ರಹ್ಮದೇವ ಹದಳಗಿ– ಜಾನಪದದಲ್ಲಿ ವರ್ಗ ಸಂಘರ್ಷದ ಸಂಕಥನಗಳು ಪುಟ ೮.

೧೫. ಸಿದ್ದೇಶ್ವರಿ ಎ.ಎನ್.ಬಳ್ಳಾರಿ ಜಿಲ್ಲೆಯ ಆಚರಣೆಗಳು ಪುಟ ೨೬.

೧೬. ಮೀರಾಸಾಬಿಹಳ್ಳಿ ಶಿವಣ್ಣ ಪಿ.ಬಿ., ಸಿರಿಯಜ್ಜಿ ಸಂಸ್ಕೃತಿ ಕಥನ ಪುಟ ೬೮.

೧೭. ತಿಮ್ಮಪ್ಪ ಎ.ಕೆ. ಶಿವಮೊಗ್ಗ ಜಿಲ್ಲೆಯ ಜಾತ್ರೆಗಳು, ಪುಟ ೧೮೬.

೧೮. ಉದ್ಧೃ:ಚ.ನ.ಶಂಕರರಾವ್, ಸಮಾಜಶಾಸ್ತ್ರ ಜೈ ಭಾರತ್ ಪ್ರಕಾಶನ, (ಸಂ–೧)ಪುಟ ೪೫.

೧೯. ಡಿ.ವಿ.ಗುಂಡಪ್ಪ, ಸಂಸ್ಕೃತಿ, ಕಾವ್ಯಾಲಯ, ಮೈಸೂರು ಪುಟ ೧೫–೧೬.

೨೦. ಶಶಿಕಲಾ ಎಂ.ಆರ್. ಟಿ.ನರಸೀಪುರ ತಾಲ್ಲೂಕಿನ ಹಬ್ಬ ಮತ್ತು ಜಾತ್ರೆಗಳು ಪುಟ ೧೦೩.

೨೧. ಮೀರಾಸಾಬಿಹಳ್ಳಿ ಶಿವಣ್ಣ ಪಿ.ಬಿ., ಸಿರಿಯಜ್ಜಿ ಸಂಸ್ಕೃತಿ ಕಥನ ಪುಟ ೬೯.

೨೨. ವಿರೂಪಾಕ್ಷಪ್ಪ.ಜಿ. ಸಂವಾದ ಮಾಸ ಪತ್ರಿಕೆ, ಫೆಬ್ರವರಿ ಸಂಚಿಕೆ ಪುಟ ೨೩–೨೪.

೨೩. ಸತೀಶ.ಎಚ್,ನಾಯಕನಹಟ್ಟಿ ತಿಪ್ಪೇಸ್ವಾಮಿ ಒಂದು ಅಧ್ಯಯನ, ಪುಟ.೧೨೩.

೨೪. ನಾಗೇಶ ಎಂ.ಎಚ್., ಮದ್ದೂರು ಒಂದುಸಾಂಸ್ಕೃತಿಕ ಅಧ್ಯಯನ ಪುಟ ೧೫೫–೧೫೬.

೨೫. ವಿ.ವಿಜಯಮ್ಮ, ಗೊಲ್ಲರ ಸಂಸ್ಕೃತಿ ಪುಟ ೧೫.

೨೬. ಶಿವಣ್ಣ.ಪಿ.ಬಿ., ಬುಡಕಟ್ಟು ವೀರರು ಪುಟ೨೭.

೨೭. ಮೀರಾಸಾಬಿಹಳ್ಳಿ ಪಿ.ಬಿ.ಶಿವಣ್ಣ, ಗೊಲ್ಲ ಕಡಗ, ಪುಟ ೭೦–೭೧.

೨೮. ಮುತ್ತಯ್ಯ ಎಂ.ಎಸ್.ಕಂಪಳ ಪುಟ ೩೭.

೨೯. ಶಿವಣ್ಣ,(ಸಂ) ರಾಯದುರ್ಗ ನುಂಕಿಮಲೆ ಸ್ಮರಣ ಸಂಚಿಕೆ ಪುಟ ೭೪.

೩೦. ಅಜ್ಜಯ್ಯ ಎಚ್.ಕಾಡುಗೊಲ್ಲರ ಸಮಾಜಶಾಸ್ತ್ರೀಯ ಅಧ್ಯಯನ ಪುಟ ೧೩೭.

೩೧. ದೇವುಡು, ಕರ್ನಾಟಕ ಸಂಸ್ಕೃತಿ, ೧೯೩೫ ಪುಟ ೧೮.

೩೨. ಬೋರಲಿಂಗಯ್ಯ ಹಿ.ಚಿ.(ಸಂ)ಕರ್ನಾಟಕ ಜನಪದ ಕಲೆಗಳ ಕೋಶ ಪುಟ ೭೮.

೩೩. ತಿಮ್ಮಪ್ಪ ಎ.ಕೆ. ಶಿವಮೊಗ್ಗ ಜಿಲ್ಲೆಯ ಜಾತ್ರೆಗಳು ಪುಟ ೧೯೩.

೩೪. ಶಂಕರನಾರಯಣ ತೀನಂ ಕಾಡುಗೊಲ್ಲರ ಆಚರಣೆ ಮತ್ತು ಸಂಪ್ರದಾಯಗಳು ಪುಟ ೧೪೭.

೩೫. ಗೌಡಪ್ಪ ಜಿ.ಇ.–ಚಿತ್ರದುರ್ಗ ಜಿಲ್ಲೆಯ ಬುಡಕಟ್ಟಿನ ಜಾತ್ರೆಗಳು, ಪುಟ ೨೦೭.

ಅಧ್ಯಾಯ : ಆರು

# ಬಹುಸಂಸ್ಕೃತಿ ಮತ್ತು (ಕ್ಯಾತಪ್ಪ) ದೇಶಿ ಜಾತ್ರೆಯ ಮಹಾಲೋಕೋಕ್ತಿ

೬.೧. ಜಾತ್ರೆಯ ಸ್ಪಷ್ಟತೆ ಮತ್ತು ಸ್ವಾರಸ್ಯ

೬.೨. ಜಾತ್ರೆಯ ಸಾಂಸ್ಕೃತಿಕ ಸ್ಥಿರತೆ

೬.೩. ಕ್ಯಾತಪ್ಪದೈವದ ಸಾಂಘಿಕ ಸಂಘಟನೆ

೬.೪. ಜಾತ್ರೆಯ ವರ್ತಮಾನದ ತಲ್ಲಣಗಳು, ಸವಾಲುಗಳು ಮತ್ತು ಪರಿಹಾರಗಳು

೬.೫. ಕ್ಯಾತಪ್ಪನ ಧ್ಯಾನ ಜ್ಞಾನಪರಂಪರೆಯ ಮುನ್ನೋಟ

ಅಧ್ಯಾಯ ೬

# ಬಹುಸಂಸ್ಕೃತಿ ಮತ್ತು (ಕ್ಯಾತಪ್ಪ)ದೇಶಿ ಜಾತ್ರೆಯ ಮಹಾಲೋಕೋಕ್ತಿ

ಯಾವುದೇ ಒಂದು ಜಾನಪದೀಯ ಅಧ್ಯಯನ ಕೈಗೊಂಡಾಗ ಅದನ್ನು ಸಮಕಾಲೀನತೆಯೊಂದಿಗೆ ತುಲನಾತ್ಮಕವಾಗಿ ನೋಡದೇ ಹೋದರೆ ಅದು ಅರ್ಥವಿಲ್ಲದ ಅಧ್ಯಯನವಾಗುತ್ತದೆ. ಆಧುನಿಕತೆಯ ಆಕರ್ಷಣೆ, ಮಾನವನ ಜೀವನಶೈಲಿ, ಅಭಿರುಚಿ ಮತ್ತು ಆಸಕ್ತಿಗನುಗುಣವಾಗಿ ಬದುಕಿನ ವಿಧಿ ವಿಧಾನಗಳಲ್ಲೂ ಸಾಕಷ್ಟು ಬದಲಾವಣೆ ಕಂಡು ಬರುತ್ತದೆ. ಮಾನವನು ಹೊಸ ಆವಿಷ್ಕಾರಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳುತ್ತ ಪ್ರಸ್ತುತ ವಿದ್ಯಮಾನಗಳ ವಿಚಾರಗಳಿಗೆ ತೆರೆದುಕೊಳ್ಳುತ್ತಿದ್ದಾನೆ. ಅಲ್ಲದೆ ತನಗೆ ತಿಳಿಯದೇ ಆಗೆ ವಿಜ್ಞಾನ ಮತ್ತು ತಂತ್ರಜ್ಞಾನದ ವಿಷಯುಗಳಿಗೆ ಒಳಗಾಗುತ್ತಿರುವುದಲ್ಲದೆ, ಮೋಜಿನ ಜೀವನಕ್ಕೆ ಶರಣನಾಗುತ್ತಿರುತ್ತಾನೆ. ಈಗಾಗಲೇ ತನ್ನ ಬದುಕಿನಲ್ಲಿ ರೂಢಿಸಿಕೊಂಡಿದ್ದ ಬದುಕಿನ ವಿಧಿ-ವಿಧಾನಗಳು ಬದಲಾವಣೆಗೊಳ್ಳಲು ಆಧುನಿಕತೆಯೇ ಮುಖ್ಯ ಕಾರಣವಾಗುತ್ತಿದೆ.

ಯಾವುದೇ ಹೊಸತನ್ನು ಸ್ವೀಕರಿಸುವಾಗ ಅವು ವಿವಿಧ ರೂಪಗಳು ಪಡೆಯುತ್ತಿರುತ್ತವೆ. ಇದರಿಂದಾಗಿ ಬದಲಾವಣೆಯೂ ಸಹಜವಾಗಿಯೇ ಆಗಿರುತ್ತದೆ. ಹೀಗೆ ಮನುಷ್ಯನು ತನ್ನ ಬದುಕಿನ ಬದಲಾವಣೆಗೆ ಒಳಗಾಗುವ ಸಂದರ್ಭದಲ್ಲಿ ಕಣ್ಣಿಗೆ ಕಂಡದ್ದನ್ನು ಸ್ವೀಕರಿಸುತ್ತಾನೆ. ಇದು ಕೆಲವೊಮ್ಮೆ ಮಂದಗತಿ, ಇನ್ನು ಕೆಲವೊಮ್ಮೆ ತೀವ್ರತರವಾಗಿ

ಸಾಗುತ್ತಿರುತ್ತದೆ. ಜಾತ್ರೆಯು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಆರ್ಥಿಕ ಜಿಜ್ಞಾಸೆಗೆ ಹೇಗೆ ಬೆಸೆದುಕೊಂಡಿದೆ ಎನ್ನುವುದನ್ನು ಕಾಣಬಹುದು. ಆಧುನಿಕತೆಯು ಉಂಟುಮಾಡಿದ ಬದಲಾವಣೆಯಲ್ಲಿ ಮನುಷ್ಯನ ಮೂಲ ಸಂಸ್ಕೃತಿ ನಾಶವಾಗದಂತೆ ನಾವು ಇಂದು ತಡೆಯಬೇಕಿದೆ.

ಆಧುನಿಕತೆ ಎಂಬ ಪದ ನಗರಕ್ಕೆ ಮಾತ್ರ ಸಂಬಂಧಿಸಿದ್ದು, ವಿದ್ಯಾವಂತ ಹಾಗೂ ಶಿಷ್ಟರ ಜಗತ್ತಿಗೆ ಸೇರಿದ್ದು, ಅದು ಪ್ರಗತಿಪರವಾದುದು. ವೈಜ್ಞಾನಿಕವಾದುದು ಹಾಗೂ ವೈಚಾರಿಕವಾದುದು ಎಂಬ ಮೊದಲಾದ ಅರ್ಥಗಳನ್ನು ಪಡೆದುಕೊಂಡಿದೆ. ಈ ಎಲ್ಲಾ ಅರ್ಥಗಳು ಒಂದಕ್ಕೊಂದು ಪರಸ್ಪರ ಪೂರಕವಾಗಿವೆ. ಈ ಎಲ್ಲಾ ಅರ್ಥಗಳನ್ನು ಒಳಗೊಂಡ ಇಡೀ ಆಧುನಿಕತೆ ಎಂಬ ಪರಿಕಲ್ಪನೆ ವಸಹಾತೀಕರಣ, ಕೈಗಾರಿಕರಣ, ನಗರಿಕರಣಗಳ ಜೊತೆಯಲ್ಲಿ ಭಾರತಕ್ಕೆ ಬಂದಿರಬಹುದು. ಭಾರತೀಯರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನೊಳಗೆ ತನ್ನ ಕ್ರಿಯಾಶೀಲತೆಯನ್ನು ಅದು ಪ್ರದರ್ಶಿಸಿದೆ. ಆಧುನಿಕತೆಯನ್ನು ಹುಟ್ಟುಹಾಕಿದ ಜನ ದೇಶಬಿಟ್ಟು ಹೋದರೂ ಸಹ ಅದು ಬದುಕನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ತನಗಿಷ್ಟ ಬಂದಂತೆ ಆಟವಾಡಿಸುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಇಂದು ಜನಪದ ಆಚರಣೆಗಳು ಸಡಿಲಗೊಳ್ಳುತ್ತಿವೆ. ಹಳೆಯ ತಲೆಮಾರಿನ ಜನ ತಮ್ಮದೆ ಆದ ನಂಬಿಕೆಗಳಿಂದ ನೆಮ್ಮದಿಯನ್ನು ಕಂಡುಕೊಳ್ಳುತ್ತಿದ್ದರು. ಗ್ರಾಮೀಣ ಪ್ರದೇಶದಲ್ಲಿ ಜನ ಸಾಂಸಾರಿಕ ಜೀವನದಲ್ಲಿ ಸುಖ, ಸಂತೋಷವನ್ನು ಕಂಡುಕೊಳ್ಳಲು ಪೂಜೆ–ಪುರಸ್ಕಾರ ಮಾಡುವುದರ ಮೂಲಕ ಹರಕೆಗಳ ರೂಪದಲ್ಲಿ ಹಲವಾರು ಆಚರಣೆಗಳನ್ನು ಮಾಡುತ್ತಾರೆ. ಅದಕ್ಕಾಗಿಯೇ ಮೊದಲಿಗೆ ತಮ್ಮ ಮನೆ ದೇವರು, ಕುಲದೇವರು, ವಾರದ ದೇವರು, ಹುಣ್ಣಿಮೆ ದೇವರು, ಅಮವಾಸೆ ದೇವರು ಮತ್ತು ಗ್ರಾಮದ ಆರಾಧ್ಯ ದೈವಗಳನ್ನು ತಪ್ಪದೇ ನೆನೆದು ನಿತ್ಯ ಎಲ್ಲಾ ಕೆಲಸ ಕಾರ್ಯಗಳನ್ನು ನೆರವೇರಿಸುತ್ತಾರೆ. ಒಮ್ಮೊಮ್ಮೆ ಜಾತ್ರಾ ಆಚರಣೆಗಳನ್ನು ಕೈಗೊಳ್ಳುತ್ತಾರೆ. ಈ ಎಲ್ಲಾ ಅಂಶಗಳು ಸಮಕಾಲೀನತೆಯೊಂದಿಗೆ ತಳಕು ಹಾಕಿಕೊಂಡು ಬಂದಿವೆ.

### ೬.೧ ಜಾತ್ರೆಯ ಸ್ಪಷ್ಟತೆ ಮತ್ತು ಸ್ವಾರಸ್ಯ

ಬುಡಕಟ್ಟು ಜನರ ಭೌಗೋಳಿಕ ಪರಿಸರ ಹಾಗೂ ಅವರ ಸಂಸ್ಕೃತಿಯನ್ನು ಶೋಧಿಸುತ್ತಾ ಹೋದಂತೆ ಪ್ರಪಂಚದ ಎಲ್ಲಾ ಬುಡಕಟ್ಟುಗಳ ನಡುವೆ ಅವುಗಳದೆ ಆದ ಭಿನ್ನತೆ ಮತ್ತು ಸಾಮ್ಯತೆಗಳು ವಿಶಿಷ್ಟವಾಗಿರುತ್ತವೆ. ಆದಿಮಾನವನಿಂದ ಹಿಡಿದು ಇಂದಿನವರೆಗೆ ಮಾನವನ ಬದುಕಿನಲ್ಲಿ ಹಲವು ಬದಲಾವಣೆಗಳನ್ನು ಕಾಣುತ್ತೇವೆ. ಆಯಾ ಪ್ರಾದೇಶಿಕತೆಗೆ ಅನುಗುಣವಾಗಿ ಭಾಷೆ, ಸಂಸ್ಕೃತಿ, ಆಚಾರ–ವಿಚಾರ, ರೂಢಿ, ಸಂಪ್ರದಾಯ, ಹಬ್ಬ,

ಜಾತ್ರೆ, ಉತ್ಸವ, ಆಚರಣೆಗಳು ಹಾಗೂ ವಿಧಿ ವಿಧಾನಗಳು ಮತ್ತು ಆಧುನಿಕ ಜೀವನಶೈಲಿ ಹೀಗೆ ವಿಕಾಸ ಹೊಂದುತ್ತ ಬಂದಿರುವುದನ್ನು ಕಾಣುತ್ತೇವೆ. "ನಿರಂತರ ಪರಿವರ್ತನಶೀಲವಾದ ಮಾನವ ಸಂಸ್ಕೃತಿಯ ಒಳ ತಿರುಳನ್ನು ಅರಿಯಬೇಕಾದರೆ ಆದಿಮ ಸಂಸ್ಕೃತಿಯ ಕಡೆಗೆ ಗಮನಹರಿಸಬೇಕಾಗುತ್ತದೆ."[೧] ಇಂತಹದ್ದನ್ನು ಅರಿಯಲು ಬುಡಕಟ್ಟು ಜನರ ಆಚರಣೆಯ ಪ್ರಮುಖ ಅಂಗವಾದ ಜಾತ್ರೆಯನ್ನು ವಿಶ್ಲೇಷಿಸಬೇಕಿದೆ. ಜಾತ್ರೆಯ ಆಚರಣೆಗಳು ಏಕಮುಖವಾಗಿರದೆ ವೈವಿಧ್ಯಮಯವಾಗಿದ್ದು ಎಲ್ಲ ಸಮುದಾಯಗಳಲ್ಲೂ ಆಚರಣೆಯಲ್ಲಿವೆ. ಜಾತ್ರೆ ಎಲ್ಲಿ, ಹೇಗೆ, ಯಾವಾಗ ಹುಟ್ಟಿಕೊಂಡವು.? ಎಂದು ಉತ್ತರ ಹೇಳುವುದು ಕಷ್ಟ. ಆದರೂ ಮಾನವಕುಲದ ಬೌದ್ಧಿಕ ವಿಕಾಸ ಹಾಗೂ ಅದರಿಂದ ಪ್ರಭಾವಿತಗೊಳ್ಳುವ ಸಾಮಾಜಿಕ ವಿಕಾಸದ ಪ್ರಕ್ರಿಯೆಗಳನ್ನು ಗುರುತಿಸಿದ್ದಾರೆ.

ಕಾಲ ಬದಲಾದಂತೆ, ಸಮಾಜ ವಿಕಾಸಗೊಂಡಂತೆ ಆದಿಮಾನವನ ತಿಳಿವಳಿಕೆ ಮತ್ತು ಆತನಲ್ಲಿ ವಿಚಾರಶಕ್ತಿ ಬೆಳೆದು ಬಂದಿತು. ಇದರಿಂದ ಮಾನವ ಎಲ್ಲಾ ಪ್ರಾಣಿಗಳಿಗಿಂತ ಭಿನ್ನವೆಂದು ತಿಳಿದುಕೊಂಡ. ಜ್ಞಾನ ಸೃಜಿಸಿತು, ಅವನಲ್ಲಿ ಅರಿವು ಮೂಡಿತು. ಮಾತು ಬಂತು. ಪ್ರಾಣಿಗಳನ್ನು ಬೇಟೆಯಾಡಿ ಹಸಿವು ನೀಗಿಸಿಕೊಂಡ. ಅಲೆಮಾರಿ ಜೀವನ ಬಿಟ್ಟು ಒಂದೆಡೆ ನೆಲೆ ನಿಂತ. ಪ್ರಕೃತಿಯಲ್ಲಿ ಮಳೆ, ಗಾಳಿ, ಗುಡುಗು, ಸಿಡಿಲು, ಭೂಕಂಪ, ಪ್ರವಾಹ ಮುಂತಾದವು ಅವನಲ್ಲಿ ಭಯ ಹಾಗೂ ಭೀತಿ ಉಂಟುಮಾಡಿದವು. ಭಯಗೊಂಡ ಮಾನವ ಪ್ರಕೃತಿಯಲ್ಲಿ ಯಾವುದೋ ಒಂದು ಅದ್ಭುತ ಶಕ್ತಿಯಿದೆ ಎಂದು ಅರಿತುಕೊಂಡ. ಆ ಶಕ್ತಿಯನ್ನು ವಶಮಾಡಿಕೊಳ್ಳಲು ಯತ್ನಿಸಿ ಆ ಶಕ್ತಿಯನ್ನು ದೇವರು ಎಂದು ಪ್ರಾರ್ಥನೆ ಹಾಗೂ ಭಕ್ತಿಯಿಂದ ಆರಾಧಿಸಿ, ಪೂಜಿಸಲು ತೊಡಗಿದ. ಸಾವಿರಾರು ವರ್ಷಗಳಿಂದ ನಮ್ಮೊಡನೆ ಇದ್ದದ್ದು, ಈಗಲೂ ಇರುವುದು ಈ ದೇವರು ಎಂಬ ಕಲ್ಪನೆ."[೨] ಒಂದಲ್ಲ ಒಂದು ರೀತಿಯಲ್ಲಿ ದೇವರ ಕೃಪೆಗೆ ಪಾತ್ರರಾಗಿ ಅವನಿಂದ ತಮ್ಮ ಉದ್ಧಾರಕ್ಕೆ ಪೂರಕ ವಾತಾವರಣವನ್ನು ಕರುಣಿಸುವಂತೆ ಅವನಲ್ಲಿ ಬೇಡಿಕೊಂಡು ಇಡೀ ಸಮೂಹ ಒಂದೆಡೆ ಸೇರಿ ಅವನ ಹೆಸರಿನಲ್ಲಿ ಮಾಡುವ ಧಾರ್ಮಿಕ ವಿಧಿ ವಿಧಾನಗಳ ಆಚರಣೆಗಳೇ ಜಾತ್ರೆಗಳು. "ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಾಮಾಜಿಕ ಮೌಲ್ಯಗಳು ಪ್ರಾಕೃತಿಕ ಘಟನೆಗಳನ್ನು ತಮ್ಮ ಮೂಲ ನೆಲೆಯನ್ನಾಗಿಸಿಕೊಂಡಿವೆ. ಸಾಂಸ್ಕೃತಿಕ ಹಾಗೂ ಧಾರ್ಮಿಕ ಮೌಲ್ಯಗಳೇ ದೇವರು."[೩] ಈ ದೇವರನ್ನು ಕುರಿತ ಆಚರಣಾ ವಿಧಾನಗಳೇ ಜಾತ್ರೆಗಳೆನಿಸಿಕೊಂಡಿವೆ. ದೈವಗಳ ಮೇಲಿನ ನಂಬಿಕೆಯಿಂದ, ಭೀತಿ ನಿವಾರಣೆಗಾಗಿ ಕೈಗೊಂಡ ಭೂತಾರಾಧನೆ, ದೇವತಾರಾಧನೆ ಒಂದು ಪ್ರಮುಖ ಆಚರಣೆಯಾಗಿ ಬೆಳೆದು ಕ್ರಮೇಣ ಅವು ಜಾತ್ರೆಗಳಾಗಿ ಮಾರ್ಪಟ್ಟಿರಬೇಕು.

"ಬುಡಕಟ್ಟು ಸಮುದಾಯದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲೂ ಜಾನಪದ ಬೆರೆತು ಕೊಂಡಿದೆ. ಬೇಟೆ, ಪಶುಪಾಲನೆ, ಕೃಷಿ, ಕುಟುಂಬ, ದೈವಗಳ ನಂಬಿಕೆ, ರೂಢಿ ಹಾಗೂ ಅವರ ಭೌದ್ಧಿಕ ಪರಂಪರೆ ಜೀವಂತಿಕೆಯಿಂದಿದೆ. ಆದ್ದರಿಂದ ಸಾಮಾಜಿಕ ಕ್ರಿಯೆ ಎನ್ನುವುದು ಜಾನಪದದ ಅವಿಭಾಜ್ಯ ಅಂಗವಾಗಿದೆ. ಬುಡಕಟ್ಟು ಸಮುದಾಯದ ಧಾರ್ಮಿಕ ಪದ್ಧತಿಯ ಒಂದು ಪ್ರಧಾನ ಭಾಗವಾಗಿರುವ ಸಾಂಸ್ಕೃತಿಕ ಆಚರಣೆಗಳ ವಿಧಿ ವಿಧಾನಗಳಿಗೆ ಅನುಗುಣವಾಗಿ ಆಚರಣೆಗೆ ತಂದಿರುವ ಜಾತ್ರೆಗಳು ಬುಡಕಟ್ಟು ಸಮುದಾಯದ ಸಂಸ್ಕೃತಿಯ ಉಳಿವಿಗೆ ಕೈಗನ್ನಡಿಯಾಗಿವೆ."[೪] ಜಾತ್ರೆಗಳ ಆಚರಣೆಯ ಸಮಯದಲ್ಲಿ ಅಗತ್ಯ ಆರಾಧನೆಯ ನಡುವೆ ಮಾನವ ಸಂಸ್ಕೃತಿಯ ಸಂಬಂಧ ಬೆಸೆದುಕೊಂಡಿದೆ.

### ೬.೨ ಜಾತ್ರೆಯ ಸಾಂಸ್ಕೃತಿಕ ಸ್ಥಿರತೆ

ಜಾತ್ರೆ ವೈವಿಧ್ಯತೆಗಳ ತಾಣ. ದುಷ್ಟ ಶಕ್ತಿಗಳನ್ನು ನಾಶಮಾಡುವುದರ ಹಿಂದೆ ಭಕ್ತರ ರಕ್ಷಣೆಯ ಉದ್ದೇಶವಿದೆ. ಈ ಕಾರಣಕ್ಕಾಗಿಯೇ ಜಾತ್ರೆಗಳು ಇಂದಿಗೂ ಆಚರಣೆಯಲ್ಲಿವೆ. ಪ್ರತಿ ಸಮುದಾಯದಲ್ಲಿಯೂ ಆಚರಣೆಯಲ್ಲಿರುವ ಎಲ್ಲಾ ಜಾತ್ರೆಗಳು ಒಂದೇ ತೆರನಾಗಿರುವುದಿಲ್ಲ, ಜಾತ್ರೆಗಳ ಲಕ್ಷಣ ಒಂದೇ ಆಗಿದ್ದರೂ ಸಹ ಅವುಗಳ ಸ್ವರೂಪದಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಸಾಮಾಜಿಕ ಸಾಮರಸ್ಯ ಉಂಟುಮಾಡುವುದು ಎಲ್ಲಾ ಜಾತ್ರೆಗಳ ಉದ್ದೇಶ. ಆದರೂ ಅವುಗಳ ಆಚರಣಾ ವಿಧಿ ವಿಧಾನಗಳಲ್ಲಿ ಭಿನ್ನತೆಗಳಿವೆ.

ಜಾತ್ರೆಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿಧಿ ವಿಧಾನಗಳ ಸ್ವರೂಪವನ್ನು ಅನುಸರಿಸಿ ಹಂಪ ನಾಗರಾಜಯ್ಯ ಅವರು ಜಾತ್ರೆಗಳನ್ನು ಶಿಷ್ಟ ದೇವರ ಜಾತ್ರೆಗಳು, ಗ್ರಾಮೀಣ ಜಾತ್ರೆಗಳು ಎಂದು ಎರಡು ವಿಭಾಗಗಳಾಗಿ ಗುರುತಿಸಿದ್ದಾರೆ. "ಶಿಷ್ಟ ಮತ್ತು ಗ್ರಾಮೀಣ ಜಾತ್ರೆಗಳು ಭಿನ್ನವಾಗಿರುತ್ತವೆ ಎಂದು ತಿಳಿಸಿ ಶಿಷ್ಟ ದೇವರ ಜಾತ್ರೆಗಳಿಗೆ ಪಟ್ಟಣದ ಹಿನ್ನೆಲೆ ಇರುತ್ತದೆ. ಪೂಜಾ ವಿಧಾನಗಳು ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಆದರೆ ಗ್ರಾಮ ದೇವತೆಯ ಜಾತ್ರೆಗಳು ಜಾನಪದ ಅಧ್ಯಯನಕ್ಕೆ ಉತ್ತಮ ಅಂಶವನ್ನು ಒದಗಿಸುತ್ತವೆ."[೫] ಎಂಬ ಸೂಕ್ಷ್ಮ ಮಾಹಿತಿಯನ್ನು ನೀಡಿದ್ದಾರೆ. "ಜಾತ್ರೆ" ಎನ್ನುವುದು 'ಯಾತ್ರಾ' ಎಂಬ ಸಂಸ್ಕೃತ ಪದದಿಂದ ಬಂದಿದೆ. ಸಂಸ್ಕೃತದ 'ಯಾತ್ರೆ', ಇಂಗ್ಲಿಷಿನ "ಫೇರ್" ಶಬ್ದಕ್ಕೆ ಸಂವಾದಿಯಾಗಿದೆ ಫೇರ್ ಎಂದರೆ ಹಬ್ಬದೂಟ. ಹಬ್ಬದೂಟ ಮತ್ತು ಜಾತ್ರೆಗೆ ಸಂಬಂಧ ಕಲ್ಪಿಸಲಾಗಿದೆ.ಇದು ಕನ್ನಡದಲ್ಲಿ ಜಾತ್ರೆಯಾಯಿತು."[೬] ಜಾತ್ರೆಯ ಮೂಲ ಪದವಾದ 'ಯಾತ್ರೆ'ಗೆ ಚಲನೆ, ಪ್ರಯಾಣ, ತೀರ್ಥಯಾತ್ರೆ, ಹಬ್ಬ, ಮೆರವಣಿಗೆ, ಮನರಂಜನೆ ಹೀಗೆ ಹಲವು ಅರ್ಥಗಳಿವೆ. ಸಾಮಾನ್ಯವಾಗಿ ಜಾತ್ರೆ ಎಂದರೆ ಧಾರ್ಮಿಕ ಉದ್ದೇಶದಿಂದ ಮಾಡುವ ಪಯಣ, ಪುಣ್ಯಕ್ಷೇತ್ರ ದರ್ಶನ, ತೀರ್ಥಯಾತ್ರೆ, ಹಬ್ಬ,

ಮೆರವಣಿಗೆ ಇತ್ಯಾದಿ ಅರ್ಥಗಳು ಇವೆ. ಯಾತ್ರೆ ಮತ್ತು ಜಾತ್ರೆ ಎಂಬ ಪದಗಳನ್ನಿಂದು ಒಂದೇ ಎಂಬರ್ಥದಲ್ಲಿ ಜನಸಾಮಾನ್ಯರು ಬಳಸುತ್ತಿದ್ದಾರೆ. ಇವೆರಡರ ಮೂಲ ಉದ್ದೇಶಗಳಲ್ಲಿಯೇ ವ್ಯತ್ಯಾಸವಿರುವುದನ್ನು ಗುರುತಿಸಲು ಸಾಧ್ಯವಿದೆ.

ಯಾತ್ರೆ ಎಂಬುವುದು ತಮ್ಮ ಇಷ್ಟ ದೇವರ ಪ್ರಾರ್ಥನೆಯಿಂದಾಗಿ ತಮ್ಮ ಬಯಕೆಗಳು ಫಲಿಸಿದ್ದರ ಕಾರಣಕ್ಕಾಗಿ ಹೊರಡುವ ತೀರ್ಥಯಾತ್ರೆಯಾಗಿದೆ. ಇಲ್ಲವೆ ಭಕ್ತರಿಗೊದಗಿದ ವಿಘ್ನಗಳು ಬಗೆಹರಿದುದರ ಸಲುವಾಗಿ ಆರಾಧ್ಯ ದೇವರ ಮೇಲಿನ ತಮ್ಮ ನಂಬಿಕೆಯ ಪ್ರತೀಕವಾಗಿ ಮತ್ತು ಭವಿಷ್ಯದ ಜೀವನವನ್ನು ಹೀಗೆಯೇ ಕರುಣಿಸು ಎಂಬ ದೂರಾಲೋಚನೆಯ ಕಾರಣಕ್ಕಾಗಿ ದೇವರ ಸನ್ನಿಧಿಗೆ ಪ್ರಯಾಣ ಬೆಳೆಸೋದು ಯಾತ್ರೆಯಾಗಿದೆ. ಜಾತ್ರೆಗಳಲ್ಲಿ ಜನರು ಪುಣ್ಯಕ್ಷೇತ್ರಗಳ ದರ್ಶನದ ಜೊತೆ ಜೊತೆಗೆ ಆಯಾ ಒಪ್ಪಿತ ಮತೀಯ ಮೌಲ್ಯಗಳನ್ನೊಳಗೊಂಡ ಪಾರಂಪರಿಕ ನಿಯಮಾಧಾರಿತ ವಿಧಿಯಾಚರಣೆಗಳನ್ನು ಆಚರಿಸುತ್ತಾರೆ. ಇದರಿಂದಾಗಿ ತಮ್ಮ ಜೀವನದ ಅನೇಕ ಗೊಂದಲಗಳಿಗೆ, ಕಷ್ಟ ಸುಖಗಳಿಗೆ ಬಿಡಿಸಲಾಗದ ಮತ್ತು ವಿವರಿಸಲಾಗದ ಅರ್ಥವನ್ನು ಕಂಡುಕೊಂಡು ಜೀವನವನ್ನು ಸಾರ್ಥಕಗೊಳಿಸಿಕೊಳ್ಳುತ್ತಾರೆ. ಜೊತೆಗೆ ತಮ್ಮ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನಕ್ಕೆ, ಬೇಕು ಬೇಡುಗಳನ್ನು ಪೂರೈಸುವ ವ್ಯಾಪಾರ, ವ್ಯವಹಾರ ಹಾಗೂ ವರ್ಷವಿಡಿ ಕೃಷಿ ಕ್ಷೇತ್ರದಲ್ಲಿ ದುಡಿದು ಬಳಲಿದ ಜೀವಕ್ಕೆ ಇಡಿಯಷ್ಟು ವಿಶ್ರಾಂತಿಯನ್ನು ಇಂತಹದ್ದೇ ಹಲವು ಉದ್ದೇಶಗಳನ್ನು ಜಾತ್ರೆ ಒಳಗೊಂಡಿರುತ್ತದೆ.

"ಜನರಿದ್ದರೆ ಜಾತ್ರೆ" ಎಂಬುವುದು ಈಗ ತದ್ವಿರುದ್ದವಾಗಿದೆ. ಜನರೇ ಜಾತ್ರೆಗೆ ಬಂಡವಾಳ. ಜಾತ್ರೆಯ ಪೂರ್ವಭೂಮಿಕೆಯಾಗಿ ಚರ್ಚಿಸಿ, ನಿಗದಿಪಡಿಸಿದ ದಿನ, ಸಮಯ, ಘಟನೆ, ಮಾಸ, ನಕ್ಷತ್ರ ಇತ್ಯಾದಿ ಸಾಮಾಜಿಕ ನಿಯಮಗಳು ವಿಧಿಯಾನುಸಾರ ಜನಸಾಗರದ ಮಧ್ಯೆ ನಡೆಯುತ್ತವೆ. ಜಾತ್ರೆಯು ಗೊತ್ತುಪಡಿಸಿದ ದಿನದಂದು ವರ್ಷದಲ್ಲಿ ಒಂದು ಬಾರಿ ಮಾತ್ರ ನಡೆಯುತ್ತದೆ. ಇಂತಹ ವೇಳೆಯಲ್ಲೂ ಬುಡಕಟ್ಟು ಜನರು ತಮ್ಮ ಇಷ್ಟದೈವ ಅಥವಾ ಕುಲದೈವ, ಮನೆದೈವ ಮತ್ತು ಗ್ರಾಮ ದೈವಗಳಿಗೆ ಹರಕೆ ತೀರಿಸುವುದು ಇಲ್ಲವೆ ಬಲಿ ಕೊಡುವುದು, ಇಲ್ಲವೆ ಸೇವೆ ಸಲ್ಲಿಸುವುದರ ಮೂಲಕ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುತ್ತಾರೆ. ಇಂತಹ ಜಾತ್ರೆಗೆ ಸಾವಿರಾರು, ಲಕ್ಷಾಂತರ ಜನರು ಸೇರುವ ಸಾಧ್ಯತೆ ಇರುತ್ತದೆ.

ಜಾತ್ರೆ ಎನ್ನವುದು ಯಾತ್ರೆಯ ತದ್ಭವರೂಪ ಎಂದು ಕನ್ನಡ ನಿಘಂಟು ತಜ್ಞ ಕಿಟಲ್ ಅಭಿಪ್ರಾಯಪಟ್ಟಿದ್ದಾರೆ. 'ಜಾತ್ರೆ', ಪರಿಷೆ(ಪರಿಸೆ), ಪರ್ಷೆ ಈ ಶಬ್ದಗಳು ಸಂಸ್ಕೃತ ಮೂಲದಿಂದ ಬಂದಂತವು. ಯಾತ್ರಾದಿಂದ ಜಾತ್ರೆಗೆ ಬಂದಿರುವಂತೆ ಪರಿಷತ್

ಎಂಬ ಪದ ರೂಪಾಂತರಗೊಂಡು ಕಾಲಾಂತರದಲ್ಲಿ ಪರಿಷೆ-ಪರ್ಷೆ ಎಂದು ಬದಲಾವಣೆಗೊಂಡಿರುವ ಸಾಧ್ಯತೆಗಳೆ ಹೆಚ್ಚು. ಜಾತ್ರೆ ಎಂದರೆ ದೈವ ಸನ್ನಿಧಿಗೆ ಪ್ರಯಾಣ ಎಂಬ ಅರ್ಥ ಕೊಡುತ್ತದೆ ಎಂದು ಡಾ.ಜಿ.ಆರ್.ತಿಪ್ಪೇಸ್ವಾಮಿರವರು ಅಭಿಪ್ರಾಯಪಟ್ಟಿದ್ದಾರೆ. ಜನ ಸಾಮಾನ್ಯರ ದೈವಭಕ್ತಿಯ ಪರಾಕಾಷ್ಠತೆಯನ್ನು ಮೆರೆಯಲು ಪರಿಷೆಗಳೇ ಜಾತ್ರೆಗಳಾಗಿವೆ. ಜಾತ್ರೆ ಮತ್ತು ಪರಿಷೆ ಬೇರೆ ಬೇರೆಯಾದವುಗಳಲ್ಲ ಎಂಬುದು ಸಿ.ಎಸ್.ಶಿವಕುಮಾರಸ್ವಾಮಿ ರವರ ಅಭಿಪ್ರಾಯ. ಇದರ ಜೊತೆಗೆ ಜನರ ಆರಾಧ್ಯ ದೈವಗಳ ತಾಣ, ನೆಲೆಗಳಿಗೆ ಪುಣ್ಯಕ್ಷೇತ್ರಗಳೆಂದು ಕರೆಯುತ್ತಾರೆ. ಇವುಗಳನ್ನು ನೋಡಲು ದೂರದಲ್ಲಿರುವ ದೈವಗಳ ಸನ್ನಿಧಿಗೆ ತೆರಳಿ ಪೂಜಾ ವಿಧಾನಗಳನ್ನು ನಡೆಸುತ್ತಾರೆ.

ಇಂಗ್ಲಿಷ್ ಭಾಷೆಯ 'ಫೇರ್'ಎಂಬುದು ಲ್ಯಾಟಿನ್ ಭಾಷೆಯ 'ಫರಿಯಾ' ಎಂಬ ಶಬ್ದದಿಂದ ಬಂದದ್ದು. "ಫೆರಿಯಾ ಶಬ್ದಕ್ಕೆ ಹಬ್ಬದಿನ ಅಥವಾ ರಜಾದಿನ ಎಂಬ ಅರ್ಥವಿದೆ."[೬] ದಿನ ನಿತ್ಯದ ಕೆಲಸಗಳಿಂದ ವಿಶ್ರಾಂತಿ ಹೊಂದಲು ದಣಿದ ಮನಸ್ಸನ್ನು ರಂಜನೆಯಿಂದ ತಣಿಸಲು, ಸುಗ್ಗಿ ಮುಗಿದು ಫಲ ಕೈ ಸೇರಿದ ಖುಷಿಗಾಗಿ ದೇವರಿಗೆ ವಿಶೇಷ ಎಡೆಮಾಡಿ ಒಪ್ಪಿಸಿ ನೀಕೊಟ್ಟ ಕೃಪೆಯಿಂದ ಅಥವಾ ಫಲದಿಂದ ನಾವು ಧನ್ಯರಾದೆವು ಎಂದು ಬಂಧು-ಮಿತ್ರರೊಂದಿಗೆ ಸುಖಬೋಜವನ್ನುಂಡು ಬೇಸರಿಕೆ ಕಳೆದುಕೊಳ್ಳುವ ಸಮಯಗಳೇ ಜಾತ್ರೆಗಳಾಗಿವೆ. ಜಾತ್ರೆಯನ್ನು ಕುರಿತಾದ ಆರಂಭಿಕ ಅಧ್ಯಯನದ ನೆಲೆಯನ್ನು ಇಂಗ್ಲೆಂಡಿನಲ್ಲಿ ಗುರುತಿಸುತ್ತೇವೆ. ಆಂಗ್ಲರು ತಮ್ಮ ಸಮಾಜದಲ್ಲಿ ಆಚರಿಸುತ್ತಿದ್ದ 'ಪೆಸ್ಟಿವಲ್' ಎಂಬುದು ಮೂಲತಃ ಬ್ರಿಟನ್ನಿನ ಮಾತೃ ಪ್ರಧಾನ ಕುಟುಂಬದ, ಸಾಮಾಜಿಕ ಮನಸ್ಥಿತಿಯ ಪ್ರಧಾನ ಅಂಶಗಳಿಂದ ಪ್ರಭಾವಿತವಾದುದು. 'ಪೆಸ್ಟಿವಲ್' ಎಂಬ ಇಂಗ್ಲಿಷ್ ಪದಕ್ಕೆ ಕನ್ನಡದಲ್ಲಿ ಸಂವಾದಿಯಾಗಿ ಬಳಕೆಯಾಗುವ ಪದ ಹಬ್ಬ ಮತ್ತು ಜಾತ್ರೆ. ಆದರೆ ನಮ್ಮ ಜಾತ್ರೆ, ಹಬ್ಬ ಮತ್ತು ಬ್ರಿಟಿಷರ ಪೆಸ್ಟಿವಲ್ಲಿನ ಮೂಲ ಉದ್ದೇಶಗಳಲ್ಲಿಯೇ ವ್ಯತ್ಯಾಸಗಳಿವೆಯಾದರೂ ಜಾತ್ರೆ ಎಂದರೇನು? ಎಂಬುದನ್ನು ತಿಳಿಯಲು ಪೆಸ್ಟಿವಲ್ ಕುರಿತ ಮಾಹಿತಿ ಅತ್ಯವಶ್ಯಕ.

ಬ್ರಿಟಿಷರ ಅಂದಿನ ಸಮಾಜದಲ್ಲಿ ಮಾತೃ ಅಧಿಕಾರ ಪ್ರಬಲವಾಗಿದ್ದಿತು. ಸಮಾಜದ ಎಲ್ಲಾ ಕ್ಷೇತ್ರಗಳ ಮೇಲೆ ತನ್ನ ಹಿಡಿತವನ್ನು ಹೊಂದಿದ ಶಕ್ತಿಯಾಗಿ ಸ್ತ್ರೀ ಇದ್ದಳು. ಇಂತಹ ಶಕ್ತಿಯ ಕೇಂದ್ರ ಬಿಂದುವಾದ ಸ್ತ್ರೀಯರನ್ನು ಅವರು ಪೆಸ್ಟಿವಲ್ ಎಂಬುದಾಗಿ ಆರಾಧಿಸುತ್ತಿದ್ದರು. ಸಾಮಾಜಿಕ ಅವಶ್ಯಕತೆಯಾದ ಲೈಂಗಿಕತೆಯು ಸಮಾಜದ ಎಲ್ಲರಿಗೂ ಮುಕ್ತವಾಗಿ ದೊರೆಯಿತು. ಲೈಂಗಿಕ ಸಂತೃಪ್ತಿ ಹೊಂದಲಿ ಎಂಬುದು ಇದರ ಉದ್ದೇಶವಾಗಿತ್ತು. ಎಲ್ಲರೂ ಸುಖ-ಶಾಂತಿಗಳಿಂದ ಕೃಷಿ ಚಟವಟಿಕೆಗಳಲ್ಲಿ ತೊಡಗುವ ಮೂಲಕ ಫಲವಂತಿಕೆ ವೃದ್ಧಿಯಾದಂತೆ, ಉತ್ತಮ ಫಸಲು ಕೈ ಸೇರುವ ರೀತಿಯಲ್ಲಿ

ಸಮಾಜ ವೃದ್ಧಿಯಾಗಲಿ ಎಂಬ ಆಶಯಗಳು ಆಚರಣೆಯಲ್ಲಿದ್ದವು. ಲೈಂಗಿಕ ಸಮೃದ್ಧತೆ ಮತ್ತು ಫಲವಂತಿಕೆಗೆ ಅನುಗುಣವಾಗಿ ಕೃಷಿಯ ಫಲ ವೃದ್ಧಿಯಾಗಲಿ ಎಂದು ಜನ ಸಾಮಾನ್ಯರು ನಂಬಿ ತಮ್ಮ ಸುಖ ಸಂತೋಷಕ್ಕಾಗಿ ಪೆಸ್ಟಿವಲ್ ರೀತಿಯ ಆಚರಣೆಯನ್ನು ಜಾರಿಗೆ ತಂದರು.

ಇಂದು ಜಾತ್ರೆಗಳನ್ನು ಚಳಿ ಮತ್ತು ಬೇಸಿಗೆ ಕಾಲದ ಸುಗ್ಗಿಯ ಹೊತ್ತಿನಲ್ಲಿ ಮಾಡುತ್ತಾರೆ. ಕಾರಣ ಜನರ ಬಳಿ ಹಣವಿದ್ದು ಆ ಸುಗ್ಗಿಯ ಕಾಲ ಬಿಡುವಿನ ವೇಳೆಯಾಗಿರುವುದರಿಂದ ಸಾಮಾನ್ಯವಾಗಿ ಹೆಚ್ಚು ಜಾತ್ರೆಗಳು ಇಂತಹ ಸಮಯದಲ್ಲೆ ಜರುಗುತ್ತವೆ. ಈ ಸಂದರ್ಭವನ್ನು ಸೂಕ್ಷ್ಮವಾಗಿ ಗಮನಿಸಿದರೆ ಸುಗ್ಗಿಗೂ ಜಾತ್ರೆಗೂ ಅವಿನಾಭಾವ ಸಂಬಧವಿದ್ದಂತೆ ಕಾಣುವುದು. ಎಂದು 'ಜಾತ್ರೆಗಳ ಪೌರಾಣಿಕ ಹಿನ್ನೆಲೆ' ಎಂಬ ಲೇಖನದಲ್ಲಿ ಡಾ.ಚನ್ನಣ್ಣವಾಲಿಕಾರ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಡಾ.ಮಂಜುನಾಥ ಲಠ್ಠೆ ಅವರು ಜಾತ್ರೆಯ ಕುರಿತಾದ ತಮ್ಮ ನಿಲುವಿನಲ್ಲಿ "ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವಾನು ದೇವತೆಗಳನ್ನು ಭಯ ಭಕ್ತಿಗಳಿಂದ ಸಾಮೂಹಿಕವಾಗಿ ಪೂಜಿಸಿ, ಪ್ರಾರ್ಥಿಸುವ ಸಂಭ್ರಮದ ಸಮೂಹವೇ ಜಾತ್ರೆ"[೭] ಎಂದು ವ್ಯಾಖ್ಯಾನಿಸಿದ್ದಾರೆ. ಜಾತ್ರೆಯು ಮತ ಪ್ರಧಾನ ಸಾಮಾಜಿಕ ಹಿನ್ನೆಲೆಗೆ ಬದ್ಧವಾಗಿದೆ. ಜಾತ್ರೆ ಒಂದು ಪ್ರದೇಶದ ಬೇರೆ ಬೇರೆ ಭಾಷೆ, ಜಾತಿ, ವರ್ಗ, ಸಾಮಾಜಿಕ ಅಂತಸ್ತು, ಅಭಿರುಚಿ ಸಮುದಾಯವನ್ನು ಸಮಾವೇಶಗೊಳಿಸಿ ಅದರಲ್ಲಿ ಅನೇಕ ಭಾವನೆಯನ್ನು ಉದ್ದೀಪನಗೊ ಲ್ಲ ಆಸ್ತಿಕರೆಂದಾಗಲಿ, ಬಾರದವರು ನಾಸ್ತಿಕರೆಂದಾಗಲಿ 'ವನ್ನು ಕೆ.ಚಿನ್ನಪ್ಪಗೌಡರು ಮಾಡಿದ್ದಾರೆ. ಆದರೆ ಜಾತ್ರೆಗೆ ಬರುವವರಿರುತ್ತಾರೆ. ಗ್ರಾಮೀಣ ಪ ಇಲ್ಲ. ಈ ಎರಡು ಬಗೆಯ ಜನರು ಜಾತ್ರೆಯಲ್ಲಿ ಸೇಳಿಸುವ ಪ್ರಕ್ರಿಯೆ ಎಂಬ ವ್ಯಾಖ್ಯಾನ್ರದೇಶಗಳಲ್ಲೂ ಹಬ್ಬಗಳು ಮತ್ತು ಜಾತ್ರೆಗಳು ಒಟ್ಟೊಟ್ಟಿಗೆ ನಡೆಯುತ್ತವೆ. ಹಬ್ಬ ಮತ್ತು ಜಾತ್ರೆಯನ್ನು ಬೇರೆ ಬೇರೆಯಾಗಿ ಪರಿಗಣಿಸುವುದು ಕಷ್ಟ. ಜನಸಾಮಾನ್ಯರ ದೃಷ್ಟಿಯಲ್ಲಿ ಹಬ್ಬ ಮತ್ತು ಜಾತ್ರೆಗಳು ಬೇರೆ ಬೇರೆಯಲ್ಲ. ಎರಡು ಒಂದೇ ಅರ್ಥದಲ್ಲಿ ಬುಡುಕಟ್ಟು ಸಮುದಾಯದ ಜನರು ಇವುಗಳ ಆಚರಣೆಯಲ್ಲಿ ತೊಡಗುವುದನ್ನು ಕಾಣಬಹುದು ಎಂಬುದಾಗಿ ಡಾ. ಎಂ.ಜಿ ಈಶ್ವರಪ್ಪ ಅವರು ತಮ್ಮ ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ ಎಂಬ ಮಹಾ ಪ್ರಬಂಧದಲ್ಲಿ ತಿಳಿಸಿದ್ದಾರೆ. ಆದರೆ ಹಬ್ಬದೂಟ ಚೆಂದ ಜಾತ್ರೆ ನೋಟ ಚೆಂದ ಎಂಬ ನಾಣ್ನುಡಿ ಹಬ್ಬ ಮತ್ತು ಜಾತ್ರೆಯನ್ನು ವಿಭಿನ್ನ ಪರಿಕಲ್ಪನೆಗಳನ್ನಾಗಿ ವರ್ಗೀಕರಿಸಿರುವುದನ್ನು ವಿಶ್ಲೇಷಿಸಬಹುದು.

"ಜಾತ್ರೆಗಳು ಮೂಲತಃ ವಲಸೆಗಾರರಾದ ದ್ರಾವಿಡರವು. ಜಾತ್ರೆಗಳ ತಾತ್ಕಾಲಿಕತೆ, ಸಾಮೂಹಿಕವಾಗಿ ಸೇರುವಿಕೆಗಳು ವಲಸೆಗಾರರ ಸ್ವಭಾವಕ್ಕೆ ಅನುಗುಣವಾಗಿವೆ. ಜಾತ್ರೆ

ಪ್ರತ್ಯೇಕ ಹಳ್ಳಿ ಅಥವಾ ಪ್ರದೇಶಗಳಿಗೆ ಸೀಮಿತವಾಗಿದ್ದರೆ, ಹಬ್ಬ ನಾಡಿನಾದ್ಯಂತ ಒಂದೇ ಸಲಕ್ಕೆ ಆಚರಿಸ್ಪಡುವುದು. ಹಬ್ಬಗಳು ಕಡ್ಡಾಯ ಮತ್ತು ನಿಯಮಿತವಾಗಿರುವಂತೆ ಜಾತ್ರೆಗಳಿರುವುದಿಲ್ಲ. ಇದು ಸಹ ವಲಸೆಗಾರರ ಅನಿಶ್ಚಿತ ಬದುಕಿಗೆ ಸಹಜವಾದ ಸ್ಥಿತಿ"[೮] ಎಂದು ಕೃಷಿ ಮತ್ತು ವಲಸೆ ಪ್ರವೃತ್ತಿಗಳನ್ನು ಪ್ರಬಲ ಕಾರಣಗಳನ್ನಾಗಿ ನೀಡುವ ಮೂಲಕ ಹಬ್ಬ ಮತ್ತು ಜಾತ್ರೆಗಳನ್ನು ಆಚರಿಸುವ ಜನರ ಪ್ರವೃತ್ತಿಗಳಲ್ಲಿನ ಭಿನ್ನತೆಗಳನ್ನು ಎಸ್.ಎಸ್.ಹಿರೇಮಠ ಸೂಚಿಸಿದಂತೆ ವಿವಿಧ ಹೆಸರುಗಳಿಂದ ಕರೆಯುವುದು ರೂಢಿಯಾಗಿದೆ. ಜಾತ್ರೆಯನ್ನು ಪರಿಷೆ (ಪರಿಸೆ), ತೇರು, ರಥೋತ್ಸವ, ಉಚ್ಚಾಯ, ಪಲ್ಲಕ್ಕಿ ಈ ಎಲ್ಲಾ ಪದಗಳನ್ನು ಜಾತ್ರೆಯೆಂಬ ಪದಕ್ಕೆ ಸಮಾನ ಪದಗಳಾಗಿ ಬಳಸುವುದು ಇತ್ತೀಚಿನ ದಿನಗಳಲ್ಲಿ ಸರ್ವೇ ಸಾಮಾನ್ಯವಾಗಿ ಕಂಡುಬರುತ್ತದೆ.

### ೬.೩ ಕ್ಯಾತಪ್ಪದೈವದ ಸಾಂಘಿಕ ಸಂಘಟನೆ

ಕರ್ನಾಟಕದ ಬುಡಕಟ್ಟು ಸಮುದಾಯದ ಜಾತ್ರೆಗಳ ಅಧ್ಯಯನದಲ್ಲಿ ಬುಡಕಟ್ಟು ದೈವಗಳ ಕಥೆ ಹಾಗೂ ಪುರಾಣಗಳು ಮಹತ್ವದ ಪಾತ್ರ ವಹಿಸುತ್ತವೆ. ಅವು ಆ ಬುಡಕಟ್ಟು ಸಂಸ್ಕೃತಿಯನ್ನು ರೂಪಿಸಿದ ವ್ಯಕ್ತಿಯನ್ನು ಸಾಂಸ್ಕೃತಿಕ ವೀರ ಎಂದು ಕರೆಯುತ್ತಾರೆ. ಕ್ಯಾತಪ್ಪ, ಜುಂಜಪ್ಪ, ಎತ್ತಪ್ಪ, ಸಿರಿಯಣ್ಣ, ಯರ್‍ರಪ್ಪ ಮುಂತಾದವರೆಲ್ಲರೂ ಒಂದು ಕಾಲದಲ್ಲಿ ಮಾನವರಂತೆ ಬದುಕಿದ್ದು ತಮ್ಮ ಅಸಮಾನ್ಯ ಸಾಧನೆ, ಆದರ್ಶ, ತ್ಯಾಗಗಳಿಂದ ಸಮಾಜದ ಪ್ರೀತಿಗೆ ಒಳತಿಗಾಗಿ ಅವರ ಆರಾಧ್ಯ ದೈವವಾಗಿದ್ದಾರೆ. ಕೆಲವರು ಆ ಸಮುದಾಯದ ಮನೆದೈವ ಹಾಗೂ ಕುಲದೈವವೂ ಆಗಿ ಬಿಟ್ಟಿದ್ದಾರೆ. ಇಂಥವರು ಜಗತ್ತಿನ ಎಲ್ಲಾ ಜಾತಿ ಜನಾಂಗದಲ್ಲಿಯೂ ಇದ್ದಾರೆ. ಇವರನ್ನು ಸಂಸ್ಕೃತಿ ಕೊಟ್ಟವರು ಅಥವಾ ಕುಲ ಕೊಟ್ಟವರು ಎಂದು ಕರೆಯುತ್ತಾರೆ. ಸಾಂಸ್ಕೃತಿಕ ವೀರರ ಬಗೆಗಿನ ಕಥೆ ಮತ್ತು ಪುರಾಣಗಳು ಅವರ ಜೀವನದ ನಡಾವಳಿಗಳನ್ನು ತಿಳಿಸುವುದಲ್ಲದೆ ಆಚಾರ–ವಿಚಾರ, ರೂಢಿ, ಸಂಪ್ರದಾಯ, ಆಚರಣೆ, ನಂಬಿಕೆಗಳಿಗೆ ಸಮರ್ಥನೆಯನ್ನು ನೀಡುತ್ತವೆ. "ಪುರಾಣವು ಆ ಜನಾಂಗದ ದೈವ, ಉಪದೈವ ಮತ್ತು ಪವಾಡ ಪುರುಷರಿಗೆ ಸಂಬಂಧಿಸಿದ ಕಥೆಗಳನ್ನು ಒಳಗೊಂಡಿರುತ್ತದೆ."[೯] ಆದ್ದರಿಂದ ವಿದ್ವಾಂಸರು ಪುರಾಣವನ್ನು ಎರಡು ಅಂಶಗಳಿಂದ ದೃಢಪಡಿಸುತ್ತಾರೆ. ಸಾಂಸ್ಕೃತಿಕವೀರ, ಸಾಂಸ್ಕೃತಿಕ ಮೂಲಾಂಶಗಳು, ಮತ ಅಂಶಗಳನ್ನು ಒಳಗೊಂಡ ಅದರ ಪೂಜಾ ವಿಧಾನಗಳನ್ನು ಪುರಾಣಗಳು ತಿಳಿಸುತ್ತವೆ.

ಚಿತ್ರದುರ್ಗ ಜಿಲ್ಲೆ ಮ್ಯಾಸಬೇಡ ಹಾಗೂ ಕಾಡುಗೊಲ್ಲ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ಕೇಂದ್ರವಾಗಿದೆ. ಇದು ಕರ್ನಾಟಕದ ಎಲ್ಲ ಜಿಲ್ಲೆಗಳಿಗಿಂತ ಭಿನ್ನವಾದ ಸಾಂಸ್ಕೃತಿಕ ನೆಲೆಗಳನ್ನು ಹೊಂದಿದೆ. ಬುಡಕಟ್ಟು ಜನರ ವಿಶಿಷ್ಟ ಆಚರಣೆಗಳ ಒಂದು

ಭಾಗವಾಗಿ ಈ ಪ್ರದೇಶದಲ್ಲಿ ಜಾತ್ರೆಗಳು ಆಚರಣೆಯಲ್ಲಿವೆ. ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಪರಶುರಾಮಪುರ ಹೋಬಳಿ ಚನ್ನಮ್ಮನಾಗತಿಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಪುರ್ಲೆಹಳ್ಳಿ ವಸತಿದಿಬ್ಬದ ರಿ.ಸ.ನಂ.೫೬–೫೭ ರ ಪ್ರದೇಶದಲ್ಲಿ ಕ್ಯಾತಪ್ಪನ ಜಾತ್ರೆ ನಡೆಯುತ್ತದೆ. ಈ ಜಾತ್ರೆ ಹಲವು ಕಾರಣಗಳಿಗಾಗಿ ವಿಶೇಷವಾದುದಾಗಿದೆ. ಶೂನ್ಯ ಮಾಸದಲ್ಲಿ ಈ ಜಾತ್ರೆ ಜರುಗುವುದು ಸಂಪ್ರದಾಯ.



(ಕ್ಯಾತಪ್ಪನ ಜಾತ್ರೆಗೆ ಹೋಗುತ್ತಿರುವುದು)

ಈ ತಿಂಗಳಲ್ಲಿ ಯಾವುದೇ ಮದುವೆ ಮಂಗಳ ಕಾರ್ಯಗಳು ಜರುಗುವುದು ವಿರಳ. ಉದಾಹರಣೆಗೆ ತುಂಬಿದ ಗೆರಸೆ, ವಾಡೇವು, ಗುಡಾಣ, ಚೀಲಕ್ಕೆ ತುಂಬಿದ ಧಾನ್ಯಗಳನ್ನು ಹೊರ ತೆಗೆದು ಹಾಕುವುದಿಲ್ಲ. ಹೊಸ ಬಣವೆಗಳಿಂದ ದನಕರುಗಳಿಗೆ ಮೇವು ಹಾಕುವುದಿಲ್ಲ ಇತ್ಯಾದಿ. ಆದರೂ ಅಪ್ಪಟ ಬುಡಕಟ್ಟು ಸಂಪ್ರದಾಯದ ಶರಣರಾದ ಕಾಡುಗೊಲ್ಲ ಸಮುದಾಯ ಶೂನ್ಯ ತಿಂಗಳಲ್ಲಿ ಜಾತ್ರೆ ಆಚರಿಸುವುದು ಅತ್ಯಂತ ವಿಶಿಷ್ಟವೆನಿಸುತ್ತದೆ. ಈ ಜಾತ್ರಾ ಆಚರಣೆ ಅಷ್ಟೇ ಅಲ್ಲದೆ ಆಚರಣೆಯ ವಿಧಿ-ವಿಧಾನಗಳು ಸಹ ಅಷ್ಟೇ ವೈಶಿಷ್ಟ್ಯದಿಂದ ಕೂಡಿರುತ್ತವೆ. ಈ ರೀತಿಯ ಸಂಪ್ರದಾಯಿಕ ಆಚರಣೆಯ ಬೇರುಗಳು ಜಿಲ್ಲೆ, ರಾಜ್ಯ, ಹೊರ ರಾಜ್ಯವಾದ ಆಂಧ್ರಪ್ರದೇಶಕ್ಕೂ ಹರಡಿಕೊಂಡಿವೆ. ಎರಡು ರಾಜ್ಯಗಳ ಹದಿಮೂರು ಗುಡಿಕಟ್ಟಿನವರು ಸೇರಿ ಒಂದು ತಿಂಗಳ ಕಾಲ ವಿಜೃಂಭಣೆಯಿಂದ ಜಾತ್ರೆ ಆಚರಿಸುತ್ತಾರೆ. ಕೋಮು, ಸೌಹಾರ್ದ, ಸಹಕಾರ, ಸಹಬಾಳ್ವೆ ಈ ಜಾತ್ರೆಯ ಇನ್ನೊಂದು ವಿಶೇಷ. ಈ ಜಾತ್ರೆಯು ಭಿನ್ನ ವೈಶಿಷ್ಟ್ಯವನ್ನು ಒಳಗೊಂಡಿದೆ. ಸಾಮಾನ್ಯವಾಗಿ ಸುಗ್ಗಿ ಮುಗಿದ ನಂತರ ಜಾತ್ರೆಗಳು ಆಚರಿಸುವುದು ರೂಢಿ. ದುಡಿದು ದಣಿದ ರೈತವರ್ಗಕ್ಕೆ ವಿಶ್ರಾಂತಿ ನೀಡುವ ಉದ್ದೇಶದಿಂದ

ಜಾತ್ರೆಗಳು ಅಸ್ತಿತ್ವಕ್ಕೆ ಬಂದಿವೆ. ಒಬ್ಬ ವ್ಯಕ್ತಿಯ ಹಿತ ಆ ಇಡೀ ಸಮುದಾಯದ ಹಿತದಲ್ಲಿ ಅಡಗಿದೆ. ಈ ಕಾರಣದಿಂದಾಗಿ ಇಡೀ ಸಮುದಾಯ ಒಂದುಗೂಡಿ ತಮ್ಮ ಬೇಸರವನ್ನು ಕಳೆದುಕೊಳ್ಳಲು ಜಾತ್ರೆಗಳನ್ನು ಆಚರಿಸತೊಡಗಿರುವ ಸಾಧ್ಯತೆ ಇರುವುದನ್ನು ಗಮನಿಸಬಹುದಾಗಿದೆ.

ಸಾಮಾನ್ಯವಾಗಿ ಬುಡಕಟ್ಟು ಸಂಪ್ರದಾಯದಂತೆ ಪ್ರತಿ ವರ್ಷ ಕಾರ್ತಿಕ-ಮಾರ್ಘಶಿರ ಮಾಸದ ಬಹುಳ ಅಮವಾಸೆ ದಿನಾಂಕ ಡಿಸೆಂಬರ್ ತಿಂಗಳ ಇಪ್ಪತ್ತೊಂಬತ್ತರಿಂದ ಜನವರಿ ಇಪ್ಪತ್ತೆಂಟರವರೆಗೆ ಈ ಜಾತ್ರೆ ಸುಮಾರು ಒಂದು ತಿಂಗಳ ಕಾಲ ವಿಶಿಷ್ಟವಾಗಿ ಜರುಗುತ್ತದೆ. ಕಾಡುಗೊಲ್ಲ ಸಮುದಾಯದ ಹದಿಮೂರು ಗುಡಿಕಟ್ಟಿನ ಪ್ರಮುಖರು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯ ಕ್ಯಾತೆದೇವರ ದೇಸ್ಥಾನದಲ್ಲಿ ಸಭೆ ಸೇರಿ, ಚರ್ಚಿಸಿ ಜಾತ್ರಾ ಆಚರಣಾ ದಿನಾಂಕವನ್ನು ನಿಗಧಿಪಡಿಸುತ್ತಾರೆ. ಮಾರ್ಘಶಿರ-ಪುಷ್ಯ ಮಾಸದಲ್ಲಿ ಈ ಜಾತ್ರೆ ನಡೆಯುತ್ತದೆ. ಜಾತ್ರೆಯ ಕಾರ್ಯಕ್ರಮಗಳು ಗುರುವಾರ ಆರಂಭವಾಗಿ ಗುರುವಾರವೇ ಅಂತ್ಯಗೊಳ್ಳಬೇಕು. ಜಾತ್ರೆ ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಸೋಮವಾರದಂದು ಕಾರ್ಯಕ್ರಮಗಳು ಅಂಭವಾಗುತ್ತವೆ. ಆದರೆ ಜಾತ್ರಾ ಕಾರ್ಯಗಳು ಗುರುವಾರವೇ ಅಂತ್ಯಗೊಳಿಸಬೇಕು ಎಂಬುವುದು ಈ ಸಮುದಾಯದವರ ನಂಬಿಕೆ. ಕ್ಯಾತೇದೇವರು ತಮ್ಮ ಸಮುದಾಯದವರಿಗೆ ಹಿಂದೆ ಈ ರೀತಿಯಾಗಿ ಆಜ್ಞಾಪಿಸಿದ್ದ ಎಂಬ ನಂಬಿಕೆ ಇವರಲ್ಲಿದೆ.



(ಕ್ಯಾತಪ್ಪನ ಜಾತ್ರೆಯಲ್ಲಿ ಎತ್ತಿನಬಂಡಿಯ ಚಿತ್ರ)

**ಜಾತ್ರಾ ವಿಶಿಷ್ಟ ಆಚರಣೆ ಮತ್ತು ವಿವರಣೆ**

- ಜಾತ್ರೆಯ ಮೊದಲ ದಿನ ಗುರುವಾರ ಚನ್ನಮ್ಮನಾಗತಿಹಳ್ಳಿಯಲ್ಲಿ ಹುರುಳಿ ಕೈ ತೊಳೆದು ದೇವರಿಗೆ ಕಂಕಣ ಕಟ್ಟುವುದು.
- ಗುಡಿಕಟ್ಟಿನ ಭಕ್ತಾಧಿಗಳಿಗೆ ಸಾರು ಕೊಡುವುದು.
- ಬಂಜಗೆರೆ ಗ್ರಾಮದ ದೇವರುಗಳ ಆಚರಣೆ.
- ಕ್ಯಾತಗೊಂಡನಹಳ್ಳಿ ಕದರಿನರಸಿಂಹ ದೇವರ ಆಚರಣೆ.
- ಎಲ್ಲಾ ಗುಡಿಕಟ್ಟುಗಳು ಹುರುಳಿ ಕೈ ತೊಳೆಯುವುದು.
- ದೇವರ(ಪೂಜೆ) ಮರವನ್ನು ಕಡಿದು ಪರ್ಲೆಹಳ್ಳಿಯ ರಿ.ಸ.ನಂ. ೫೬-೫೭ ರಲ್ಲಿ ಜಾತ್ರಾ ಸ್ಥಳವಾದ ವಸತಿ ದಿಬ್ಬದಲ್ಲಿಡುವುದು.
- ದೇವಸ್ಥಾನದ ಸುತ್ತಲೂ ಕಳ್ಳೆಬೇಲಿ ಕಟ್ಟಲು ಕಳ್ಳೆಮುಳ್ಳು ಕಡಿದು ಸಂಗ್ರಹಿಸುವುದು.
- ಚನ್ನಮ್ಮನಾಗತಿಹಳ್ಳಿಯ ಕ್ಯಾತೇದೇವರ ದೇವಸ್ಥಾನದ ಸುತ್ತಲೂ ಕಳ್ಳೆಬೇಲಿ (ಪಾರಿಬೇಲಿ) ಕಟ್ಟುವುದು. ಜೂಜಿನ ಕಳ್ಳೆ ಹಾಕುವುದು.
- ಸಾಯಂಕಾಲ ಎರೆದಕಳ್ಳೆ, ತುಗ್ಗಲಿ ಮೋರುಗಳನ್ನು ವಸತಿ ದಿಬ್ಬಕ್ಕೆ ಜಮಾಯಿಸುವುದು.
- ಸಾಯಂಕಾಲ ಎರೆದ ಕಳ್ಳೆ, ಕಾರೆಕಳ್ಳೆ, ಕವಳಿಕಳ್ಳೆ, ಜಾಲಿಕಳ್ಳೆ, ಬಾರೆಕಳ್ಳೆ, ಬಂದ್ರೆಸೊಪ್ಪು, ತುಗ್ಗಲಿಮೋರುಗಳಿಂದ ಗುಡಿಕಟ್ಟುವುದು, ನಂತರ ಕಳಶ ಸ್ಥಾಪನೆ ಮಾಡುವುದು.
- ಬಂಜಗೆರೆ ವೀರಣ್ಣ, ಬತವಿನ ದೇವರು, ಈರಬಡಕ್ಕ, ಕ್ಯಾತಗೊಂಡನಹಳ್ಳಿ ಕದರಿ ನರಸಿಂಹ, ಟಿ.ಎನ್.ಕೋಟೆ ಕೊಂಡದ ಚಿತ್ತಮ್ಮ, ಕೋಣದದೇವರು ಮತ್ತು ಆಂದ್ರಪ್ರದೇಶದ ಅಯ್ಯಗಾರ್ಲಹಳ್ಳಿ ತಾಳಿದೇವರು ಚನ್ನಮ್ಮನಾಗತಿಹಳ್ಳಿ ಕ್ಯಾತೆದೇವರ ದೇವಸ್ಥಾನಕ್ಕೆ ಬಂದು ಸೇರುವುದು.
- ಎಲ್ಲ ದೇವರುಗಳು ಸೇರಿ ಅಕ್ಕಮ್ಮನ ದೇವಸ್ಥಾನದ ಬಳಿ ಮಜ್ಜನಬಾವಿಗೆ ಹೋಗಿ ಗಂಗಾಪೂಜೆ ಪೂರೈಸಿಕೊಂಡು, ಸಾಯಂಕಾಲಕ್ಕೆ ಎಲ್ಲ ದೇವರನ್ನು ಪರ್ಲೆಹಳ್ಳಿಯ ಬಳಿ ಇರುವ ವಸತಿ ದಿಬ್ಬದ ಗುಡಿಯಲ್ಲಿ ಪ್ರತಿಷ್ಠಾಪನೆ ಮಾಡುವುದು.
- ಕಳ್ಳೆಗುಡಿಯ ಹಿಂಭಾಗದಲ್ಲಿ ಬೆಳಿಗ್ಗೆ ಹುತ್ತದ ಪೂಜೆ ಮತ್ತು ಆ ದಿನ ಮಧ್ಯರಾತ್ರಿ ಕೊಣದ ಪೂಜೆ ಮಾಡುವುದು.
- ಏಳು ಮಂದಿ ಅಕ್ಕಮ್ಮಗಳ ದೇವಸ್ಥಾನದ ಬಳಿ ಬೆಳಿಗ್ಗೆ ಆವಿನ ಗೂಡು ಮತ್ತು ಕರವಿನಗೂಡು ಮತ್ತು ಮಜ್ಜನಬಾವಿ ಪೂಜೆ ಮಾಡುವುದು.

- ವಸತಿ ದಿಬ್ಬದ ಕಳ್ಳೆಮುಳ್ಳಿನ ಗುಡಿ ಮುಂದೆ ನವಣೆ ಅನ್ನ ನೈವೇದ್ಯ ದಾಸೋಹದ ಮೂಲಕ ನವಣೆ ವ್ರತ ವಿಸರ್ಜನೆ ಮಾಡುವುದು.
- ಜಾತ್ರೆಗೆ ಬಂದಿದ್ದ ಅಥವಾ ಬರುವ ಭಕ್ತಾಧಿಗಳಿಂದ ಪೂಜಾ ಖರ್ಚು-ವೆಚ್ಚ ಸ್ವೀಕರಿಸುವುದು. ಆ ದಿನ ಸಂಜೆ ನಾಲ್ಕೈದು ಗಂಟೆಗೆ ಕಳ್ಳೆಮುಳ್ಳಿನ ಗುಡಿ ಹತ್ತಿ ಕಳಶ ಇಳಿಸುವುದು.
- ಪರಿವಾರದ ದೇವರುಗಳು ಚನ್ನಮ್ಮನಾಗತಿಹಳ್ಳಿ ಕ್ಯಾತೇದೇವರ ದೇವಸ್ಥಾನಕ್ಕೆ ಸೇರುವುದು. ರಾತ್ರಿ ಮೆರವಣಿಗೆ ನಡೆಸುವುದು. ಪೂಜಾರಿ ಚಂದ್ರಣ್ಣ ಅವರ ಮನೆ ಬಳಿ ಅನ್ನದಾಸೋಹ ನಡೆಸುವುದು.
- ಚನ್ನಮ್ಮನಾಗತಿಹಳ್ಳಿಯಿಂದ ದೇವರುಗಳು ಆಯಾ ಸ್ಥಳಗಳಿಗೆ ಹಿಂದಿರುಗುವುದು.
- ಆ ದಿನ ರಾತ್ರಿ ಚನ್ನಮ್ಮನಾಗತಿಹಳ್ಳಿಯಲ್ಲಿ ಜನಪದ ನಾಟಕ ಪ್ರದರ್ಶನ ನಡೆಸುವುದು.
- ಜಾತ್ರೆಯ ಕಡೇ ದಿನ ಗುರುವಾರ ಹುರುಳಿಧಾನ್ಯ ನೈವೇದ್ಯ ಮಾಡಿ ವ್ರತ, ಕಂಕಣ ವಿಸರ್ಜನೆ ಮಾಡುವುದು.
- ಮಹಾ ಮಂಗಳಾರತಿ ಮತ್ತು ಭಕ್ತಾಧಿಗಳಿಗೆ ತೀರ್ಥಪ್ರಸಾದ ವಿತರಿಸುವುದು.
- ಪ್ರಸಾದ ಸ್ವೀಕರಿಸಲು ಚನ್ನಮ್ಮನಾಗತಿಹಳ್ಳಿ ಕ್ಯಾತೇದೇವರ ದೇವಸ್ಥಾನದಲ್ಲಿ ಸೇರಿದ್ದ ಭಕ್ತಾಧಿಗಳು ತಮ್ಮ ತಮ್ಮ ಊರುಗಳಿಗೆ ಸೇರುವುದು.

ಜಾತ್ರೆ ಆರಂಭ ಗುರುವಾರವೇ ಆಗಬೇಕು. ಆದ್ದರಿಂದ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ರಾಯದುರ್ಗ ತಾಲ್ಲೂಕಿನ ಐಗಾರ್ಲಹಳ್ಳಿ ಗ್ರಾಮದ ಅಭಾರ ಕದ್ರಿದೇವರ ಪಟ್ಟದಪೂಜಾರಿ ಒಳಗೊಂಡಂತೆ, ಬಂಜಗೆರೆ, ಕ್ಯಾತಗೊಂಡನಹಳ್ಳಿ, ಉಪ್ಪಾರಹಟ್ಟಿ, ಚಳ್ಳಕೆರೆ ಕಾಟಪ್ಪನಹಟ್ಟಿಯ ಗೊಲ್ಲರಹಟ್ಟಿ, ಗೌಡರು ಮತ್ತು ಪೂಜಾರಿಗಳು ಚನ್ನಮ್ಮನಾಗತಿಹಳ್ಳಿ ಕ್ಯಾತಪ್ಪದೇವರ ದೇವಸ್ಥಾನಕ್ಕೆ ಬರುತ್ತಾರೆ.

**ಕಂಕಣ ಕಟ್ಟುವುದು**

ಗುರುವಾರ ರಾತ್ರಿ ಒಂಬತ್ತು ಗಂಟೆ ಸುಮಾರಿಗೆ ದೇವಸ್ಥಾನದಲ್ಲಿ ಸಭೆ ಸೇರಿ, ಜಾತ್ರಾ ಆಚರಣೆ ಕುರಿತು ಚರ್ಚಿಸುತ್ತಾರೆ. ನಂತರ ಕ್ಯಾತೇದೇವರ ದೇವಸ್ಥಾನದ ಗರ್ಭ ಗುಡಿಯ ನೆಲ ಸಾರಿಸಿ, ಜೇನುತುಪ್ಪ, ಗೋ-ಗಂಜಲು ಚಿಮುಕಿಸುವ ಮೂಲಕ ಗುಡಿ ಶುದ್ಧಗೊಳಿಸುತ್ತಾರೆ. ಅರಿಶಿಣದ ಪುಡಿಯನ್ನು ಹಸಿ ಹಾಲಿನೊಂದಿಗೆ ಮಿಶ್ರಣ ಮಾಡಿ ಅದನ್ನು ದಾರಕ್ಕೆ ಲೇಪಿಸಿ ಅಂಗುದಾರ ಮಾಡುತ್ತಾರೆ. ಆ ಅಂಗುದಾರವನ್ನು ಸುರಳಿ ಸುತ್ತಿದ ವೀಳ್ಯೆದೆಲೆಗೆ ಕಟ್ಟಿ ಅದನ್ನು ದೇವರ ಪೆಟ್ಟಿಗೆಗೆ ಕಟ್ಟುತ್ತಾರೆ. ಪಶುಪಾಲಕ

ವಲಸೆಗಾರರ ಸಂಸ್ಕೃತಿಯ ಸಂಕೇತವಾಗಿ ಬಸವ(ಎತ್ತು)ನ ಕಂಚಿನ ವಿಗ್ರಹಕ್ಕೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ನವಣೆ ಅನ್ನ, ಮೀಸಲು ಮೊಸರು ಮತ್ತು ಬೆಲ್ಲದ ಹಾಲಿನ ಪಾನಕ ಮಾಡಿ ದೇವರಿಗೆ ಎಡೆಯಿಟ್ಟು ಪೂಜೆ ಮಾಡುತ್ತಾರೆ. ಕೇತೆದೇವರ ಪೂಜಾರಿ, ಬಂಜಗೆರೆಯ ಬತವಿನ ದೇವರ ಪೂಜಾರಿ, ತಾಳಿದೇವರ ಪೂಜಾರಿ, ಕಾಟಮದೇವರ ಪೂಜಾರಿ, ಕ್ಯಾತಗೊಂಡನಹಳ್ಳಿ ಗುಂಜಗನೂರು ಕದರಿದೇವರ ಪೂಜಾರಿಗಳು ಸೇರಿದಂತೆ ಐದು ಜನ ಪಟ್ಟದ ಪೂಜಾರಿಗಳು ಮತ್ತು ಆಯಾ ಗುಡಿಕಟ್ಟಿನ ಪೂಜಾರಿಗಳು ಹಾಗೂ ಗೌಡರುಗಳು ದೇವರ ಹೆಸರಿನಲ್ಲಿ ಕಂಕಣವನ್ನು ತಮ್ಮ ಬಲಗೈಗೆ ಕಟ್ಟಿಕೊಳ್ಳುತ್ತಾರೆ. ಎಲ್ಲರೂ ಜೊತೆಗೂಡಿ ದಾಸೋಹ ನಡೆಸಿದ ನಂತರ ದೇವರಿಗೆ ಮಹಾ ಮಂಗಳಾರತಿ ಸೇವೆ ಅರ್ಪಿಸುತ್ತಾರೆ. ಈ ಕ್ರಿಯೆಯನ್ನೇ ಕಂಕಣ ಕಟ್ಟುವುದು ಎನ್ನುತ್ತಾರೆ. ಕಂಕಣ ಕಟ್ಟಿದ ದಿನದಿಂದಲೇ ಜಾತ್ರಾ ಆಚರಣೆಗಳು ಆರಂಭವಾಗುತ್ತವೆ. ಆ ದಿನವೇ ತಮ್ಮ ತಮ್ಮ ಗುಡಿಕಟ್ಟಿನ ವ್ಯಾಪ್ತಿಯಲ್ಲಿ ತಮ್ಮ ಸಮುದಾಯದೊಳಗೆ ಮಡಿ ಮೈಲಿಗೆ ಸೂತಕದ ಆಚರಣೆಗಳ ಬಗ್ಗೆ ಎಚ್ಚರಿಕೆ ವಹಿಸಿ ಕಟ್ಟುನಿಟ್ಟಿನ ವ್ರತವನ್ನು ಪರಿಪಾಲಿಸುವಂತೆ ಜನರಿಗೆ ಸಲಹೆ ನೀಡುತ್ತಾರೆ. ದೇವರಿಗೆ ಕಂಕಣ ಕಟ್ಟುವ ಮೂಲಕ ಜಾತ್ರೆಯ ಕಾರ್ಯಕ್ರಮಗಳು ನಡೆಯಲು ಚಾಲನೆ ನೀಡುತ್ತಾರೆ. ಮತ್ತೊಂದು ವಿಶೇಷ ಅಂದರೆ ಇದೇ ಈ ಆಚರಣೆಯೊಂದಿಗೆ ಜಾತ್ರಾ ಆಚರಣಾ ಕಾರ್ಯಗಳು ಅಂತ್ಯಗೊಳ್ಳುತ್ತವೆ.

**ಸಾರುವುದು**

ಎಲ್ಲಾ ಸಮುದಾಯದಲ್ಲಿರುವ ಹಾಗೆ ಕಾಡುಗೊಲ್ಲ ಬುಡಕಟ್ಟು ಸಮುದಾಯದಲ್ಲೂ ಸಾರುವ (ಸುದ್ದಿ ಮುಟ್ಟಿಸುವ) ಪದ್ಧತಿ ಇದೆ. ಜಾತ್ರೆ ಆಚರಿಸುವ ಕುರಿತು ಸುದ್ಧಿ ತಮ್ಮ ಸಮುದಾಯದವರಿಗೆ ತಿಳಿಯಲಿ ಎಂಬ ಕಾರಣಕ್ಕೆ ಸಾರುವ ಪದ್ಧತಿ ರೂಢಿಯಲ್ಲಿದೆ. ಆ ದಿನ ಊರಿನ ಗೌಡರು ದೇವಸ್ಥಾನದ ಮುಂಭಾಗದಲ್ಲಿ ಬೆಂಕಿ ಹೊತ್ತಿಸಿ ಚಳಿ ಕಾಯಿಸುತ್ತಾ ಕುಳಿತಿರುತ್ತಾರೆ. ವ್ಯಕ್ತಿಯೊಬ್ಬ ಬೆಳಗಿನ ಜಾವದಲ್ಲಿ ಜಾತ್ರೆ ಆಚರಣಾ ಸುದ್ದಿಯನ್ನು ಆ ಊರಿನ ಪ್ರಮುಖ ಬೀದಿಗಳಲ್ಲಿ ಸಾರುತ್ತಾನೆ. ಮರುದಿನ ಶುಕ್ರವಾರ ಹದಿಮೂರು ಗುಡಿಕಟ್ಟಿನ ಕಾಡುಗೊಲ್ಲ ಸಮುದಾಯದವರಿಗೆ ಮತ್ತು ಒಕ್ಕಲು ಮಕ್ಕಳಿಗೆ ಜಾತ್ರಾ ವಿಷಯ ಹಾಗೂ ಕಾರ್ಯಕ್ರಮಗಳ ವಿವರಗಳು ಎಲ್ಲರಿಗೂ ತಿಳಿಯಲಿ ಮತ್ತು ಎಲ್ಲರು ಪಾಲ್ಗೊಂಡು ದೇವರ ಕಾರ್ಯ ನೆರವೇರಿಸಲಿ ಎಂಬುದು ಸಾರುವ ಉದ್ದೇಶವಾಗಿರುತ್ತದೆ. ಕಾಡುಗೊಲ್ಲ ಸಮುದಾಯದ ದಳವಾಯಿ ವಂಶಸ್ಥರು, ಹೆಳವರು ಮತ್ತು ಗುಡಿ ಗೌಡರುಗಳು ಸಾರುವ ಈ ಕಾರ್ಯವನ್ನು ನಡೆಸಿಕೊಡುತ್ತಾರೆ. ಹೀಗೆ ಸಾರುವುದು ದೇವರ ಕಾರ್ಯ, ಅದೊಂದು ಗೌರವಾನ್ವಿತ(ಕೆಲಸ) ಅಧಿಕಾರ, ನಮ್ಮ ಹಕ್ಕು ಎಂಬ ಭಾವನೆ ಅವರಲ್ಲಿ ಇಂದಿಗೂ ಕಂಡುಬರುತ್ತದೆ. ಸಾರು ಕೊಟ್ಟ

ನಂತರವೇ ಜಾತ್ರಾ ಆರಂಭದ ದೇವರ ಮೊದಲ ಆಚರಣೆ ಎಂದರೆ ಚಳ್ಳಕೆರೆ ತಾಲ್ಲೂಕಿನ ತಳಕು ಹೋಬಳಿಯ ಬಂಜಗೆರೆಯ ಈರಗಾರ ಈರಣ್ಣ, ವ್ರತ(ಬತ)ದ ದೇವರಾದ ಬತವಿನ ಯಾನೆ ನಿಂಗಣ್ಣ ದೇವರು, ಈರಬಡಕ್ಕ ಈ ದೈವಗಳನ್ನು ಹೊಳೆಗೆ ಹೊರಡಿಸಿ ವಿಶೇಷ ಪೂಜೆ ಸಲ್ಲಿಸುತ್ತಾರೆ. (ಹದಿಮೂರು ಗುಡಿಕಟ್ಟುಗಳ ಒಕ್ಕಲು ಮಕ್ಕಳು ಖರ್ಚು-ವೆಚ್ಚ ಹಾಕುವ ಮೂಲಕ ತಪ್ಪದೇ ಈ ದೇವರುಗಳ ಆಚರಣೆಯ ಕಾರ್ಯದಲ್ಲಿ ಪಾಲ್ಗೊಂಡು ಈ ಆಚರಣೆ ನೆರವೇರಿಸುತ್ತಾರೆ.) ಈ ಮಧ್ಯೆ ಜಾತ್ರಾ ವಿವರಣೆ (ಕರಪತ್ರ)ವಿತರಣಾ ಪತ್ರಕ್ಕೆ ತಯಾರಿ ಮಾಡಿಕೊಳ್ಳುತ್ತಿರುತ್ತಾರೆ.

### ಹುರುಳಿ ಕೈ ತೊಳೆಯುವುದು

ಮಾತುಕತೆ ನಡೆಸಿದ ನಂತರದ ಗುರುವಾರವೇ ಕ್ಯಾತೆದೇವರ ನೆಲೆಯಾದ ಚನ್ನಮ್ಮನಾಗತಿಹಳ್ಳಿಯಲ್ಲಿ ಮೊದಲು ಹುರುಳಿ ಕೈ ತೊಳೆಯಲಾಗುತ್ತದೆ. ಈ ಬಗೆಯ ಸಂಪ್ರದಾಯ ಜಾತ್ರೆಯನ್ನು ಆಚರಿಸುವ ಕಾಡುಗೊಲ್ಲ ಬುಡಕಟ್ಟು ಸಮುದಾಯದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. 'ಹುರುಳಿ ಕೈ ತೊಳೆಯುವುದು 'ಎಂದರೆ, ಮೂಲತಃ ಹರುಳಿ-ನವಣೆ ಮುಟ್ಟಿದ ಅಥವಾ ಬಳಸಿದ ಕೈ ತೊಳೆಯುವುದು ಎಂದರ್ಥ. ಆದರೆ ಇಂದು ಹುರುಳಿ ಕೈ ತೊಳೆಯುವುದೆಂದರೆ ತಮ್ಮ ವಾಸದ ಮನೆಯನ್ನು ಶುದ್ಧೀಕರಿಸಿಕೊಂಡು ಜಾತ್ರೆ ನಡೆಯುವ ಒಂದು ತಿಂಗಳ ಕಾಲ ಹುರುಳಿ ಮತ್ತು ನವಣೆ (ಬಳಸದೇ ಇರುವುದು) ಯನ್ನು ಸಂಪೂರ್ಣವಾಗಿ ನಿಷೇಧಿಸಿ ವ್ರತ ಆಚರಿಸುವುದಾಗಿದೆ.

ಅಂದು ಗುರುವಾರದಿಂದ ಹುರುಳಿ, ನವಣೆ ಮತ್ತು ಇತರೆ ಧಾನ್ಯಗಳ ಜೊತೆಗೆ ತಮ್ಮ ಮನೆಯಲ್ಲಿನ ಎಲ್ಲಾ ಪಾತ್ರೆ ಪರಿಕರ ಮುಂತಾದ ವಸ್ತುಗಳನ್ನು ಹೊಸ ನೀರಿನಿಂದ ತಿಕ್ಕಿ ತೊಳೆದು, ಶುದ್ಧಗೊಳಿಸಿ ಅವುಗಳಿಗೆ ಗೋ-ಗಂಜಲು ಹಾಕಿ (ಚುಮುಕಿಸಿ) ಪೂಜೆ ಮಾಡುತ್ತಾರೆ. ನಂತರ ಹುರುಳಿ-ನವಣೆ ಹೊರತುಪಡಿಸಿ ಇನ್ನುಳಿದ ವಸ್ತುಗಳನ್ನು ಮನೆಯ ಒಳಕ್ಕೆ ಎತ್ತಿಟ್ಟುಕೊಳ್ಳುತ್ತಾರೆ. ಬಳಸದೇ ಇರುವ ಹುರುಳಿ-ನವಣೆ ಧಾನ್ಯಗಳನ್ನು ಮಾತ್ರ ಹಟ್ಟಿಯಿಂದ ಹೊರಗಿಡುತ್ತಾರೆ ಮತ್ತು ತಮ್ಮ ದೇವರ ಒಕ್ಕಲಿನವರನ್ನು ಹೊರತುಪಡಿಸಿ ಉಳಿದವರು ಯಾರೂ ಅವರ ಮನೆಯನ್ನು ಪ್ರವೇಶ ಮಾಡುವಂತಿಲ್ಲ. ಒಂದು ವೇಳೆ ಪ್ರವೇಶ ಮಾಡುವ ಸಂದರ್ಭ ಒದಗಿಬಂದರೆ ಕೈ ಕಾಲು ಮುಖ ತೊಳೆದು, ಗೋ-ಗಂಜಲು ಚುಮಕಿಸಿಕೊಂಡು ಮನೆ ಪ್ರವೇಶ ಮಾಡಬೇಕು. ಅಥವಾ ಅವರುಗಳೇನಾದರೂ ಬೇರೆಯವರ ಹಾಗೂ ಹುರಳಿ-ನವಣೆ ಧಾನ್ಯ ಬಳಸುವರ ಮನೆಗೆ ಹೋಗುವ ಸಂದರ್ಭ ಬಂದಾಗ, ಅವರ ಮನೆಗೆ ಹೋಗಿ ತಮ್ಮ ಮನೆಯೊಳಕ್ಕೆ ಬರುವಾಗ ಕೈ, ಮೈ ತೊಳೆದುಕೊಂಡು ಗೋ-ಗಂಜಲು ಚುಮಕಿಸಿಕೊಂಡೇ ಬರಬೇಕು. ಈ ಪದ್ಧತಿಯನ್ನು

ಚಾಚು ತಪ್ಪದೆ ಆ ಸಮುದಾಯದವರು ಹಿಂದಿನಿಂದಲೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದಾರೆ.

ಸಾಯಂಕಾಲದ ವೇಳೆಗೆ ಚನ್ನಮ್ಮನಾಗತಿಹಳ್ಳಿ ಗ್ರಾಮದ ಗುಡಿಯಿಂದ ದೇವರನ್ನು ಹೊರ ತೆಗೆದು ದೇವರ ಪೆಟ್ಟಿಗೆಗಳನ್ನು ಮತ್ತು ಇತರೆ ಪರಿಕರಗಳನ್ನು ಹೊಸ ನೀರಿನಲ್ಲಿ ತೊಳೆದು ಅವುಗಳಿಗೂ ಮತ್ತು ದೇವರ ಗುಡಿಗೂ ಗೋ-ಮೂತ್ರ ಹಾಕಿ ಪೂಜಿಸಿ ಒಡವೆ ವಸ್ತು ಹಾಗೂ ಆಭರಣಗಳನ್ನು ಗುಡಿಯೊಳಗೆ ಸೇರಿಸುತ್ತಾರೆ. ಈ ಕ್ರಿಯೆಯನ್ನೇ ಹುರುಳಿ ಕೈ ತೊಳೆಯುವುದು ಎಂದು ಕರೆಯುತ್ತಾರೆ. ಅಂದಿನಿಂದ ಇವರು ಹುರುಳಿ ಮತ್ತು ನವಣೆ ಧಾನ್ಯ ಬೆಳೆಯಿಟ್ಟ ಹೊಲದಲ್ಲಿ ನಡೆದು ಹೋಗುವುದಾಗಲಿ, ಅವುಗಳನ್ನು ಬಳಸುವುದಾಗಲಿ, ಮುಟ್ಟುವುದಾಗಲಿ ಮಾಡುವುದಿಲ್ಲ. ಏಕೆಂದರೆ ಇವರಿಗೆ ಜಾತ್ರೆ ನಡೆಯುವ ತಿಂಗಳ ಕಾಲ ಪೂರ್ತಿ ಹುರುಳಿ ಮತ್ತು ನವಣೆ ವ್ರತ ಕಟ್ಟುನಿಟ್ಟಾಗಿರುತ್ತದೆ.

**ಹದಿಮೂರು ಗುಡಿಕಟ್ಟಿನವರು ಹುರುಳಿ ಕೈ ತೊಳೆಯುವುದು**

ಜಾತ್ರಾ ಆಚರಣೆಗಳು ಆರಂಭವಾದ ಎಂಟನೆಯ ದಿನ ಗುರುವಾರದಂದು ಕ್ಯಾತಪ್ಪದೇವರಿಗೆ ನಡೆದುಕೊಳ್ಳುವ ಹದಿಮೂರು ಗುಡಿಕಟ್ಟಿನ ಒಕ್ಕಲು ಮಕ್ಕಳುಗಳೆಲ್ಲರೂ ತಮ್ಮ ತಮ್ಮ ಊರುಗಳಲ್ಲಿ ಹುರುಳಿ ಕೈ ತೊಳೆದುಕೊಳ್ಳುತ್ತಾರೆ. ಹುರುಳಿ ಮತ್ತು ನವಣೆ ಧಾನ್ಯಗಳನ್ನು ಹಟ್ಟಿಯಿಂದ ಹೊರ ಹಾಕುತ್ತಾರೆ. ತಮ್ಮ ಹಟ್ಟಿಯಲ್ಲಿನ ದೇವಸ್ಥಾನ ಮತ್ತು ಮನೆಗಳಿಗೆ ಸುಣ್ಣ ಮತ್ತು ಬಣ್ಣ ಬಳಿದು ಸಿಂಗರಿಸುತ್ತಾರೆ. ಮನೆಯೊಳಗಿನ ಪಾತ್ರೆ ಪರಿಕರ ಮತ್ತು ಆಹಾರ ಧಾನ್ಯಗಳನ್ನು ಶುದ್ಧೀಕರಿಸಿಕೊಳ್ಳುತ್ತಾರೆ. ಗುರುವಾರ, ಇದು ದೇವರವಾರ, ದೇವರು ಶುದ್ಧಿಗೊಂಡ ವಾರ ಎಂದು ನಂಬಿದ್ದಾರೆ. ಈ ಕಾರಣದಿಂದಾಗಿ ಕಾಡುಗೊಲ್ಲರ ಕೆಲವು ಬೆಡಗಿನವರು ಗುರುವಾರದಂದೇ ಹುರುಳಿ ಕೈ ತೊಳೆಯುವ ಆಚರಣೆ ಹಿಡಿಯುತ್ತಾರೆ. ಅಂದರೆ ಇದನ್ನು ಹುರುಳಿ ಮತ್ತು ನವಣೆ ಬತ(ವ್ರತ) ಹಿಡಿಯುವುದು ಎಂದು ಅರ್ಥೈಸಲಾಗಿದೆ.

**ಪೂಜೆ (ದೇವರ) ಮರ ಮತ್ತು ಹೊಳಮರ ಕಡಿಯುವುದು.**

ಜಾತ್ರೆ ನಡೆಸುವ ಒಂದು ತಿಂಗಳು ಮುಂಚಿತವಾಗಿ ಗೌಡರು ಮತ್ತು ಪೂಜಾರಿಗಳು ಸಮಾಲೋಚನೆ ನಡೆಸಿ, ತಮ್ಮ ಗುಡಿಕಟ್ಟು ವ್ಯಾಪ್ತಿಯ ತೋಟದ ಮನೆಯೊಂದಕ್ಕೆ ಭೇಟಿ ನೀಡಿ ಜಾತ್ರಾ ಗುಡಿ ನಿರ್ಮಾಣಕ್ಕೆ ಅಗತ್ಯವಾದ ಸಾಪಾ(ನೇರ ಅಥವಾ ನೆಟ್ಟಗೆ)ಗಿರುವ ಅತ್ತಿಮರ, ಆಲದ ಮರ, ಹಾಗೂ ಕಳ್ಳಿ ಮರಗಳನ್ನು ಗುರುತಿಸಿ ಬಂದಿರುತ್ತಾರೆ. ದೇವರಿಗೆ ಕಂಕಣ ಕಟ್ಟಿದ ಹದಿನೈದನೆ ದಿನ ಗುರುವಾರದಂದು ಪೂಜೆ(ದೇವರ)ಮರ ಕಡಿಯುವ ಪ್ರಕ್ರಿಯೆ ಪ್ರಾರಂಭವಾಗುತ್ತದೆ.

ಇಲ್ಲಿ ಯಾರೂ ಬೇಕಾದರೂ ಹೋಗಿ ಮರ ಕಡಿಯುವಾಗಿಲ್ಲ. “ದೇವರ ಮರ ಕಡಿದು ತರಲಿಕ್ಕೆಂದೇ ಪ್ರತ್ಯೇಕ ಬೆಡಗು ಇದೆ. ಆ ಬೆಡಗನ್ನೇ ಮರವಾಯಿ ಗೊಲ್ಲರು”[೧೦] ಎಂದು ಕರೆಯುತ್ತಾರೆ. ಮರವಾಯಿ ಗೊಲ್ಲರು ಮೂಲತಃ ಈಗ ಚಳ್ಳಕೆರೆ ನಗರದ ಕಾಟಪ್ಪನಹಟ್ಟಿಯ ಗೊಲ್ಲರಹಟ್ಟಿ ಮತ್ತು ಚಳ್ಳಕೆರೆ ರೈಲ್ವೆಗೇಟ್ ಹತ್ತಿರದ ಮರವಾಯಿಗಳ ಹಟ್ಟಿಯಲ್ಲಿ ನೆಲೆಸಿದ್ದಾರೆ. ದೇವರಮರಕ್ಕೆ ಮೊದಲು ಕೊಡಲಿ ಹಾಕುವುದು ಮರವಾಯಿಗಳ ಹಕ್ಕು. ಇದು ಮರವಾಯಿ ಗೊಲ್ಲರಿಗೆ ಮಾತ್ರ ವಂಶಪರಂಪರೆಯಾಗಿ ಬಂದಿದೆ. ಇದು ಅವರ ಅಧಿಕಾರವು ಹೌದು ಎನ್ನುತ್ತಾರೆ ಊರ ಗೌಡರು. ಮರವಾಯಿಗಳನ್ನು ಹೊರತುಪಡಿಸಿ ಬೇರೆಯವರು ಯಾರೂ ಸಹ ಪೂಜೆ ಮರ ಕಡಿಯುವಂತಿಲ್ಲ ಎಂಬ ನಿಂಬಂಧನೆ ಜಾತ್ರಾ ಆಚರಣ ಕರಾರುವಿನಲ್ಲಿ ಮಾಡಲಾಗಿದೆ. ಇದು ಒಂದು ರೀತಿಯಲ್ಲಿ ನಿಯಮವಾಗಿ ಕಂಡು ಬರುತ್ತಿದೆ. ಒಂದು ವೇಳೆ ಈ ನಿಯಮ ಉಲ್ಲಂಘಿಸಿದರೆ ಅಂತಹ ವ್ಯಕ್ತಿ ತಲೆತಂಡಕ್ಕೆ ಗುರಿಯಾಗಬೇಕಾಗುತ್ತದೆ ಎಂದು ದೇವರ ಕಟ್ಟೆಮನೆಗಳಲ್ಲಿ ಕಟ್ಟು ಕಟ್ಟಳೆ ಮಾಡಿಕೊಂಡಿದ್ದಾರೆ.

ಮರವಾಯಿ ಬೆಡಗಿನ ಗೊಲ್ಲರ ಜೊತೆ ಕಸ್ತೂರಿ ತಿಮ್ಮಣ್ಣನಹಳ್ಳಿ, ಸೂರನಹಳ್ಳಿ, ಡಿ.ಉಪ್ಪಾರಹಟ್ಟಿ, ಕ್ಯಾತಗೊಂಡನಹಳ್ಳಿ ಹಾಗೂ ಬಂಜಗೆರೆ ಸೇರಿದಂತೆ ಕೋಣನೋರು ಮತ್ತು ಬೊಮ್ಮನೋರು ಬೆಡಗಿನ ಗೊಲ್ಲರು ದೇವರ ಮರ ಕಡಿಯುವ ಕೆಲಸಕ್ಕೆ ಕೈ ಜೋಡಿಸಿ ತಮ್ಮ ತಮ್ಮ ಊರುಗಳಲ್ಲಿ ಪೂಜಾ ಕಾರ್ಯಗಳನ್ನು ನೆರವೇರಿಸಿಕೊಂಡು ಹೋಗುತ್ತಾರೆ. ಮರವಾಯಿ ಬೆಡಗಿನ ಕಾಡುಗೊಲ್ಲರು ಕ್ಯಾತೆದೇವರ ಪೂಜೆ ಮರವನ್ನು ಕಡಿಯಲು ಹೊರಡುವಾಗ ಸಂಪ್ರದಾಯಿಕ ಉಡುಗೆಗಳಾದ ಕಳ್ಳೆಜೇಬಿನ ಬಿಳಿ ಬನಿಯಾನ ಅದರ ಮೇಲೊಂದು ಕರೀ ಕೋಟು, ಬಿಳಿ ಕಚ್ಚೆಪಂಚೆ, ಸೊಂಟಕ್ಕೆ ಸುತ್ತಿಕೊಳ್ಳುವ ಕೆಂಪು ಬಣ್ಣದ ಉಲ್ಲನ್ನಿನ ಕಾಸಿದಟ್ಟಿ, ಹೆಗಲ ಮೇಲೊಂದು ಕರಿಕಂಬಳಿ ಮತ್ತು ಚಿಪ್ಪುಗೊಡಲಿ, ತಲೆ ಮೇಲೆ ಬಿಳಿ ಪೇಟ(ರುಮಾಲು) ಸುತ್ತಿ, ಹಣೆಗೆ ವಿಭೂತಿ ಧರಿಸಿ ಗಾಂಭೀರ್ಯದಿಂದ ನಡೆಯುವ ನಡಿಗೆಯಲ್ಲಿ ಶಿಳ್ಳು ಹಾಗೂ ಕೇಕೆ ಹಾಕಿಕೊಂಡು ಹೋಗುವುದರ ಮೂಲಕ ಜನಮನ ಸೆಳೆಯುತ್ತಾರೆ. ಕೈಯಲ್ಲಿ ರೊಟ್ಟಿ ಬುತ್ತಿ ಹಿಡಿದು ಕಾಟಪ್ಪನಹಟ್ಟಿಯ ಗೊಲ್ಲರಹಟ್ಟಿಯ ಎತ್ತಪ್ಪ ಮತ್ತು ರಂಗಪ್ಪ ದೇವಸ್ಥಾನದ ಬಳಿ ಎಲ್ಲರು ಸೇರುತ್ತಾರೆ. ಅಲ್ಲಿ ಪೂಜೆ ನೆರವೇರಿದ ನಂತರ ಹಟ್ಟಿಯ ಹೊರ ಭಾಗದವರೆಗೆ ಮಹಿಳೆಯರು ಮರವಾಯಿಗಳ ಕಾಲಿಗೆ ನೀರಿನ ಸೆಳೇವು ಕೊಡುತ್ತಾರೆ. ಕೆಲವರು ದೇವರ ಪದಗಳನ್ನು ಹಾಡುವುದರ ಮೂಲಕ ಅವರನ್ನು ಕಳುಹಿಸಿಕೊಡುತ್ತಾರೆ. ಅವರು ಭಯ, ಭಕ್ತಿಯಿಂದ ಗುಡ್ಡೆ ಕಲ್ಲಿಗೆ ಕೈಮುಗಿದು ಜಾತ್ರಾ ಸ್ಥಳಕ್ಕೆ ನಡೆದು ಹೋಗುತ್ತಾರೆ. ಆ ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಚನ್ನಮ್ಮನಾಗತಿಹಳ್ಳಿ ಗ್ರಾಮದ ಕ್ಯಾತಪ್ಪ ದೇವಸ್ಥಾನದ ಬಳಿ ಸೇರುತ್ತಾರೆ.

ಬೊಮ್ಮನ ಬೆಡಗಿನವರು ಎಡಕ್ಕೆ ಮತ್ತು ಕೋಣನಬೆಡಗಿನವರು ಬಲಕ್ಕೆ ಎಂಬಂತೆ ಹಾಲು ಮೊಸರಿನ ಬುತ್ತಿ ಮತ್ತು ಸಜ್ಜೆ ರೊಟ್ಟಿ, ಉರಿದ ಶೇಂಗಾ(ಕಡಲೆ) ಕಾಯಿ ಹಾಗೂ ಕೈ ಕೊಡಲಿ, ಗಂಡುಗೊಡಲಿಗಳನ್ನು ದೇವಸ್ಥಾನದ ಆವರಣದಲ್ಲಿ ಹಾಸಿದ ಕರಿಕಂಬಳಿ ಜಾಡಿಯ ಮೇಲೆ ಇಟ್ಟು ಪಟ್ಟದ ಪೂಜಾರಿ ಹತ್ತಿರ ಪೂಜೆ ಮಾಡಿಸುತ್ತಾರೆ. ಗುಡಿಕಟ್ಟಿನ ಗೌಡರು ಸೂಚನೆ ನೀಡಿದ ನಂತರ ತಾವು ಹೊತ್ತು ತಂದಿದ್ದ ಬುತ್ತಿ, ರೊಟ್ಟಿ ಹಾಗೂ ಆಯುಧಗಳನ್ನು ಕೈಗೆತ್ತಿಕೊಳ್ಳುತ್ತಾರೆ. ಘಂಟೆ ಧೂಪದಾರತಿ, ಶಂಖ, ಉರುಮೆ ವಾದ್ಯಗಳ ಸದ್ದಿನೊಂದಿಗೆ ಪೂಜಾರಿಗಳು, ಗೌಡರು, ದಳವಾಯಿಗಳು ಸೇರಿದಂತೆ ಎಲ್ಲಾ ಭಕ್ತಾಧಿಗಳು ದೇವರಮರ ಕಡಿಯಲು ಹೊರಡುತ್ತಾರೆ. ಆ ಸಂದರ್ಭದಲ್ಲಿ ಮಹಿಳೆಯರು ದೇವರ ಬಗೆಗಿನ ಹಾಡುಗಳನ್ನು ಹೇಳುತ್ತಾ, ದೇವರ ಗುಡಿಯಿಂದ ಗುಡ್ಡೆ (ಬುಡ್ಡೆ) ಕಲ್ಲಿನವರೆಗೂ ಪೂಜಾರಿಗಳು ಮತ್ತು ಈರಗಾರರ ವಂಶದ ಭಕ್ತರ ಕಾಲಿಗೆ ನೀರಿನ ಸೆಳೇವು ಹೊಯ್ಯುತ್ತಾ ಅವರನ್ನು ಕಳುಹಿಸಿ ಕೊಡುತ್ತಾರೆ.
ಹಾಲು ಸುರಿಸುವ ಹಸಿರು ಮರಗಳನ್ನು ಪೂಜಿಸಿ ಕಡಿಯುವ ವಿಶಿಷ್ಟ ಸಂಪ್ರದಾಯ ಕ್ಯಾತಪ್ಪನ ಆಚರಣೆಯಲ್ಲಿದೆ. ಈ ಆಚರಣೆಯೇ ದೇವರ (ಪೂಜೆ)ಮರದ ಆಚರಣೆಯಾಗಿದೆ. ಒಳಮರವನ್ನು ಕಡಿಯುವವರು ತಳವಾರರು (ಮ್ಯಾಸಬೇಡರು). ಇವರು ಪೂಜೆಮರ ಕಡಿಯಲು ಪೂಜೆಮರ ಗೊತ್ತುಪಡಿಸಿದ ಸ್ಥಳಕ್ಕೆ ಹೋಗುತ್ತಾರೆ.

**ಮರದ ಪೂಜಾಚರಣೆ**

ಪೂಜೆಮರದ ಬುಡದಲ್ಲಿ ಕರಿಕಂಬಳಿ ಜಾಡಿ ಹಾಸಿ ಅರಿಶಿಣ, ಕುಂಕುಮ, ವಿಭೂತಿ, ಅಕ್ಕುಸ್ತಿ, ಹಂಗಾರ, ಹಸಿಹಿಟ್ಟು, ನೆನಗಡಲೆ, ಬೆಲ್ಲ, ಒಂಬತ್ತು ದಿನಸಿನ ಧಾನ್ಯಗಳನ್ನಿಟ್ಟು ಮರಗಳಿಗೆ ಅರಶಿಣ ದಾರ ಕಟ್ಟಿ ಐದುಜನ ಪಟ್ಟದಪೂಜಾರಿಗಳು ಪೂಜೆ ಸಲ್ಲಿಸಿದ ನಂತರ ಮರವಾಯಿ ಗೊಲ್ಲರು ಶಾಸ್ತ್ರೋಕ್ತವಾಗಿ ಗಂಡುಗೊಡಲಿಯಿಂದ ಮರಗಳನ್ನು ಕಡಿಯುತ್ತಾರೆ. ದೇವರ ಮರವು ಕಾಡಿನಲ್ಲಿ ಬೆಳೆದು ಹಾಲು ಹೊರಡಿಸುವಂತಹ ಅತ್ತಿ, ಆಲ, ಜಿವೆ, ಕಳ್ಳಿ, ಈ ಜಾತಿಗೆ ಸೇರಿದ ಮರವೇ ಆಗಿರಬೇಕು ಎಂಬ ನಿಯಮವಿದೆ. ಏಕೆಂದರೆ ಹಾಲು ಹೊರಡಿಸುವ ಮರಗಳು ಅತಿ ಶ್ರೇಷ್ಠ ಹಾಗೂ ಪವಿತ್ರ, ಅಲ್ಲದೆ, ಹಾಲು ಪೌಷ್ಟಿಕ ಆಹಾರ. ಅದರ ಜೊತೆಗೆ ಅದು ಶುಭತ್ವ, ಮಧುರತ್ವ ಮತ್ತು ದೈವತ್ವದ ಗುಣ ಹೊಂದಿದೆ ಎಂಬ ಭಾವನೆ ಅವರಲ್ಲಿ ಬೇರೂರಿದೆ. ಹೀಗಾಗಿ ಅತ್ತಿ, ಆಲ, ಕಳ್ಳಿ ಹಾಗೂ ಜಿವೆ ಮರಗಳನ್ನು ಸಾಮಾನ್ಯವಾಗಿ ಪೂಜೆ ಮರವನ್ನಾಗಿ ಶಾಸ್ತ್ರೋಕ್ತವಾಗಿ ಆಯ್ಕೆ ಮಾಡುವುದು ಸಂಪ್ರದಾಯಿಕ ನಿಯಮವಾಗಿ ಕ್ಯಾತಪ್ಪನ ಜಾತ್ರೆಯಲ್ಲಿ ಮಾತ್ರ ಕಂಡುಬರುತ್ತದೆ.



ಭಕ್ತರು ಪೂಜೆಮರವನ್ನು ಸಾಗಿಸುತ್ತಿರುವುದು

ಈ ಪೂಜೆಮರ ಇಪ್ಪತ್ತೊಂದು ಮೊಳ ಉದ್ದವಿರಬೇಕು ಮತ್ತು ಅದರ ತುದಿ(ಸುಳಿ)ಯನ್ನು ಕಡಿದಿರಬಾರದು. ಇದರ ಜೊತೆಗೆ ಇಪ್ಪತ್ತೊಂದು ಮೊಳವಿರುವ ಹದಿನೆಂಟು 'ಗಳ'ಗಳನ್ನು ಕಡಿಯಲಾಗುತ್ತದೆ. ಒಂಬತ್ತು ಮೊಳ ಉದ್ದದ ಒಂದು ದೊಡ್ಡಮರ (ಕಂಬ)ವನ್ನು ಕಡಿಯಲಾಗುತ್ತದೆ. ಇದನ್ನೇ ಪೂಜೆ ಅಥವಾ ದೇವರ ಮರ ಎಂದು ಕರೆಯುತ್ತಾರೆ. ಹದಿನೆಂಟು ತುಗ್ಗಲಿ ಮೋರು, ೯ X ೯=೧೮ ಬಂದ್ರೆಸೊಪ್ಪು, ಬಾರೆಕಳ್ಳೆ, ಕಾರೇ ಮುಳ್ಳುಕಂಟಿಗಳನ್ನು ಕಡಿದು ಮೆದೆ ಮಾಡುತ್ತಾರೆ. ನಂತರ ಅನ್ನ ದಾಸೋಹ ಮುಗಿದ ಮೇಲೆ ಪೂಜೆಮರ ಹಾಗೂ ಇತರೆ ಮುಳ್ಳು ಕಳ್ಳೆ ಮತ್ತು ಗಳ ಗಳನ್ನು ಭಕ್ತಾಧಿಗಳು ತಮ್ಮ ಹೆಗಲ ಮೇಲೆ ಹೊತ್ತು ಸಾಗಿಸಿದರೆ, ಕೆಲವರು ಎತ್ತಿನ ಗಾಡಿ ಮೂಲಕ ಪರ್ಲೆಹಳ್ಳಿ ಗ್ರಾಮದ ರೀ.ಸ.ನಂ.೫೬-೫೭ರ ವಸತಿ ದಿಬ್ಬದ ಜಾತ್ರಾ ಸ್ಥಳಕ್ಕೆ ಸಾಗಿಸುತ್ತಾರೆ. ಅಂದು ಸಂಜೆ ವಸತಿ ದಿಬ್ಬದಲ್ಲಿ ಭಕ್ತರು ರೊಟ್ಟಿ ಬುತ್ತಿಯನ್ನು ಬಿಚ್ಚಿ ಊಟ ಮಾಡಿ ಅವರವರ ಊರುಗಳಿಗೆ ತೆರಳುತ್ತಾರೆ.

## ಕ್ಯಾತಪ್ಪ ದೇವಸ್ಥಾನದ ಸುತ್ತಲು ಕಳ್ಳೆ ಬೇಲಿ ಹಾಕುವುದು

ಭಕ್ತರು ಕಳ್ಳೆಯನ್ನು ಕಡಿದು ತಲೆಯ ಮೇಲೆ ಹೊತ್ತು ಸಾಗಿಸುತ್ತಾರೆ. ಕೆಲವರು ಎತ್ತಿನ ಗಾಡಿಗಳಲ್ಲಿ, ಇನ್ನು ಕೆಲವರು ಟ್ರ್ಯಾಕ್ಟರ್ ಮೂಲಕ ಮುಳ್ಳು ಕಳ್ಳೆಯನ್ನು ಕಟ್ಟೆಮನೆಯಾದ ಚನ್ನಮ್ಮನಾಗತಿಹಳ್ಳಿ ಗ್ರಾಮಕ್ಕೆ ಸಾಗಿಸಿ ಅವರು ಅಲ್ಲಿಯೇ ಬೀಡು ಬಿಡುತ್ತಾರೆ. ಮರುದಿನ ಶುಕ್ರವಾರ ಬೆಳಿಗ್ಗೆ ಐದು ಗಂಟೆ ಸುಮಾರಿನಲ್ಲಿ ಕೊರೆಯುವ ಚಳಿಯಲ್ಲಿಯೇ ಎಲ್ಲರೂ ಸೇರಿಕೊಂಡು ಅಲ್ಲಿನ ಕೇತಪ್ಪ ದೇವಸ್ಥಾನದ ಸುತ್ತ ಮೊದಲು ಕಾರೆ, ಬಾರೆ ಕಳ್ಳೆಯಿಂದ ಗುಡಿಗೆ ಬೇಲಿ ಕಟ್ಟುವಾಗ ಎರಡು ಗುಂಪು ಮಾಡಿಕೊಳ್ಳುತ್ತಾರೆ.

ಒಂದು ಭಾಗ ಬೊಮ್ಮನೋರು, ಇನ್ನೊಂದು ಕೋಣನೋರು ಎಂದು ಪ್ರತ್ಯೇಕವಾಗಿ ಭಾಗ ಮಾಡಿಕೊಂಡು ಗುಡಿಗೆ ಮುಳ್ಳಿನ ಬೇಲಿ ಕಟ್ಟುತ್ತಾರೆ. ಕಟ್ಟುವಾಗ ದೇವರ ಬಗೆಗಿನ ಪದಗಳನ್ನು ಹಾಡುತ್ತಾ ಭಕ್ತರು ಶಿಳ್ಳು, ಕೇಕೆ ಹೊಡೆದು ಕುಣಿದಾಡುತ್ತಿರುತ್ತಾರೆ.

**ಜೂಜಿನ ಕಳ್ಳೆ ಸ್ಪರ್ಧೆ**

ಜಾತ್ರೆಯ ಹದಿನಾರನೆ ದಿನ ಶುಕ್ರವಾರದಂದು ಹತ್ತೊಂಬತ್ತನೆ ದಿನ ಸೋಮವಾರ ಹದಿಮೂರು ಗುಡಿಕಟ್ಟಿನ ಭಕ್ತರು, ಬೊಮ್ಮನಗೌಡರು, ಕೋಣನಗೌಡರು ಎಲ್ಲರೂ ಸೇರಿಕೊಂಡು ದೇವಸ್ಥಾನಕ್ಕೆ ಕಳ್ಳೆ ಬೇಲಿ ಕಟ್ಟುವ ಸಂದರ್ಭದಲ್ಲೇ ಈ ಜೂಜಿನ ಕಳ್ಳೆ ಸ್ಪರ್ಧೆ ನಡೆಯುತ್ತದೆ. ಬೇಲಿಗೆ ಕಳ್ಳೆ ಹಾಕುವ ಕಾರ್ಯ ಪೂರ್ಣಗೊಂಡ ನಂತರ ತಣ್ಣೀರಿನಲ್ಲಿ ಮೈತೊಳೆದುಕೊಂಡು ಮಡಿ ಮೈಲಿಗೆಯಿಂದ ಬಂದ ಈರಗಾರರು ಜೂಜಿನ ಕಳ್ಳೆ ಹಿಡಿಯುತ್ತಾರೆ. (ಇದು ಎರಡು ಬೆಡಗಿನವರ ನಡುವೆ ನಡೆಯುವ ಸ್ಪರ್ಧೆ) ಈ ಸ್ಪರ್ಧೆಯಲ್ಲಿ ಬಲ ಭಾಗದ ಬೇಲಿಗೆ ಬೊಮ್ಮನಗೌಡರ ಗುಂಪಿನ ಕಡೆ ಒಬ್ಬ ವ್ಯಕ್ತಿ, ಎಡ ಭಾಗದ ಬೇಲಿಗೆ ಕೋಣನಗೌಡರ ಗುಂಪಿನ ಕಡೆ ಒಬ್ಬ ವ್ಯಕ್ತಿ ತಣ್ಣೀರಿನಲ್ಲಿ ಸ್ನಾನಮಾಡಿ ಜೂಜಿನ ಕಳ್ಳೆ ಎಸೆಯಲು ಸಿದ್ಧರಾಗುತ್ತಾರೆ.

ದೇವರಿಗೆ ಪೂಜೆ ಸಲ್ಲಿಸಿದ ನಂತರ ಬಾರೆ ಮತ್ತು ಕಾರೆ ಕಳ್ಳೆಯ ಸಿವುಡುಗಳನ್ನು ಈರಗಾರರ ಕೈಗೆ ಕೊಡುವಂತೆ ಪೂಜಾರಿ, ಗೌಡರಿಗೆ ಮನವಿ ಮಾಡುತ್ತಾನೆ. ಗೌಡರು ಒಪ್ಪಿಗೆ ಸೂಚಿಸುತ್ತಿದ್ದಂತೆ ಹಟ್ಟಿಹುದಿಯಿಂದ ನಾ ಮುಂದು ತಾ ಮುಂದು ಎಂದು ಮುಳ್ಳುಕಳ್ಳೆಯ ಸಿವುಡುಗಳನ್ನು ಕೈಯಲ್ಲಿಡಿದ ಈರಗಾರರಿಬ್ಬರು ಓಡಿ ಹೋಗಿ ಕಳ್ಳೆ ಮುಳ್ಳಿನ ಸಿವುಡುಗಳನ್ನು ಗುಡಿಯೊಳಕ್ಕೆ ಎಸೆಯುತ್ತಾರೆ. ದೇವಸ್ಥಾನದ ಒಳ ಭಾಗಕ್ಕೆ ಮೊದಲು ಯಾರದು ಬೀಳುತ್ತದೆಯೋ ಆ ವ್ಯಕ್ತಿಯ ಗುಂಪಿನವರು ವಿಜಯಶಾಲಿಗಳೆಂದು ತೀರ್ಪು ನೀಡಲಾಗುತ್ತದೆ. ಮೊದಲು ಎಸೆದವನಿಗೆ ಪ್ರಶಂಸೆಯ ಸುರಿ ಮಳೆ ಮತ್ತು ವೈಯಕ್ತಿಕ ಶಕ್ತಿ ಸಾಮರ್ಥ್ಯಗಳನ್ನು ಕೊಂಡಾಡಲಾಗುತ್ತದೆ. ನಂತರ ಎರಡೂ ಗುಂಪಿನವರು ಸೇರಿ ದೇವಸ್ಥಾನದ ಸುತ್ತಲೂ ಕಳ್ಳೆ ಬೇಲಿಯನ್ನು ಕ್ಷಣಾರ್ಧದಲ್ಲಿ ಹಾಕಿ ಮುಗಿಸುತ್ತಾರೆ. ಆಮೇಲೆ ಅಲ್ಲಿ ಅಳಿದುಳಿದ ಮುಳ್ಳು ಕಳ್ಳೆಯನ್ನು ಜಾತ್ರೆ ಜರುಗುವ ಸ್ಥಳಕ್ಕೆ ಸಾಗಿಸುತ್ತಾರೆ.

**ಕಳ್ಳೆ ಮತ್ತು ತುಗ್ಗಲಿ ಮೋರುಗಳನ್ನು ವಸತಿ ದಿಬ್ಬಕ್ಕೆ ಜಮಾಯಿಸುವುದು**

ಕ್ಯಾತಗೊಂಡನಹಳ್ಳಿ, ಚನ್ನಮ್ಮನಾಗತಿಹಳ್ಳಿಯಲ್ಲಿ ನೆಲೆಸಿರುವ ಕೋಣನಗೌಡರು ಮತ್ತು ಬೊಮ್ಮನಗೌಡರು ಮತ್ತು ಬುಡ್ರುಕುಂಟೆಯಲ್ಲಿ ನೆಲೆಸಿರುವ ಹೆಳವ ಸಮುದಾಯದವರು, ಪುರ್ಲೆಹಳ್ಳಿಯ ತಳವಾರರು, ಗುಡಿಹಳ್ಳಿಯಲ್ಲಿ ನೆಲೆಸಿರುವ ಚಲವಾದಿಗಳು, ಹದಿಮೂರು ಗುಡಿಕಟ್ಟಿನ ಭಕ್ತರು ಎಲ್ಲರೂ ಸೇರಿ ಇಪ್ಪತ್ತನೆ ದಿನವಾದ ಮಂಗಳವಾರ ಸಂಜೆ ಹಸಿ

ಬಂದ್ರೆಸೊಪ್ಪು, ಕಾರೆ, ಬಾರೆ ಮತ್ತು ತುಗ್ಗಲಿ ಹಾಗೂ ಜಾಲಿ ಮೋರು ಮತ್ತು ಕವೆ ಕಟ್ಟಿಗೆಗಳನ್ನು ಎತ್ತಿನಗಾಡಿ, ಟ್ರ್ಯಾಕ್ಟರ್ ಮೂಲಕ ಪುರ್ಲೆಹಳ್ಳಿ ಬಳಿ ಇರುವ ವಸತಿ ದಿಬ್ಬಕ್ಕೆ ಜಮಾಯಿಸುತ್ತಾರೆ.

**ಕಳ್ಳೆಮುಳ್ಳಿನ ಗುಡಿ ನಿರ್ಮಾಣ ಮತ್ತು ಕಳಶ ಪ್ರತಿಷ್ಠಾಪನೆ**

ಹದಿಮೂರು ಗುಡಿಕಟ್ಟುಗಳ ಭಕ್ತರು ಜಾತ್ರೆಯ ಇಪ್ಪತ್ತೊಂದನೆ ದಿನವಾದ ಬುಧವಾರದಂದು ಚಳ್ಳಕೆರೆ ತಾಲ್ಲೂಕು ಪುರ್ಲೆಹಳ್ಳಿ ವಸತಿ ದಿಬ್ಬದ ರೀ.ಸ.ನಂ.೫೬–೫೭ರ ಹದಿನೈದು ಎಕರೆ ಬಯಲು ಪ್ರದೇಶದಲ್ಲಿ ಸೇರಿಕೊಳ್ಳುತ್ತಾರೆ. ಈಗಾಗಲೆ ಆ ಸ್ಥಳಕ್ಕೆ ಕೊಂಡೊಯ್ದಿದ್ದ ಕಳ್ಳೆಮುಳ್ಳು ಇತರೆ ವಸ್ತುಗಳನ್ನು ಗುಡಿ ನಿರ್ಮಾಣಕ್ಕೆ ಸಜ್ಜುಗೊಳಿಸುತ್ತಾರೆ. ಗುಡಿಕಟ್ಟಲು ನಿಗದಿ ಮಾಡಿದ ಸ್ಥಳವನ್ನು ಸ್ವಚ್ಛಗೊಳಿಸುವ ಪ್ರಕ್ರಿಯೆ ಆರಂಭವಾಗುತ್ತಿದ್ದಂತೆ, ಜಮಾಯಿಸಿದ್ದ ಮುಳ್ಳುಕಳ್ಳೆಯ ಕೊಂಬೆಗಳನ್ನು ಒಂದೊಂದಾಗಿ ಜೋಡಿಸುತ್ತಿರುತ್ತಾರೆ. ೧೩೩೯೧ಳ ಅಡಿ ಅಗಲದ ಜಾಗದಲ್ಲಿ ಬಾರೆಮುಳ್ಳಿನ ರೆಂಬೆ–ಕೊಂಬೆಗಳನ್ನು ಕಟ್ಟಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಎಳೆದು ನೀರಿನಿಂದ ರೊಳ್ಳೆ ಮಾಡಿ ಅದನ್ನು ಮುಳ್ಳುಕಳ್ಳೆಯ ಮೂಲಕ ನೆಲವನ್ನು ಸಾರಿಸಿ ಗಟ್ಟಿಗೊಳಿಸುತ್ತಾರೆ. ಪ್ರತಿ ವರ್ಷವೂ ಒಂದೇ ಜಾಗದಲ್ಲಿ ಗುಡಿ ಕಟ್ಟುವ ಪದ್ಧತಿ ಇಲ್ಲ. ವರ್ಷ ವರ್ಷವೂ ಜಾಗವನ್ನು ಬದಲಿಸುವ ಪದ್ಧತಿ ಇದೆ.

ಕಾಡುಗೊಲ್ಲರ ಪ್ರಮುಖ ಬೆಡಗುಗಳ ಮುಖ್ಯಸ್ಥರು ಗುಡಿ ನಿರ್ಮಾಣದ ಜವಬ್ದಾರಿಯನ್ನು ಹೊತ್ತಿರುತ್ತಾರೆ. ಗುಡಿ ಕಟ್ಟುವುದನ್ನು ಉತ್ತರ ಮತ್ತು ದಕ್ಷಿಣ ಎಂಬುದಾಗಿ ಎರಡು ಭಾಗ ಮಾಡಿಕೊಳ್ಳುತ್ತಾರೆ. ಉತ್ತರ ದಿಕ್ಕಿನ ಭಾಗ ಕೋಣನ ಬೆಡಗಿನದು, ದಕ್ಕಿಣ ದಿಕ್ಕಿನ ಭಾಗ ಬೊಮ್ಮನ ಬೆಡಗಿನವರದು ಎಂದು ಭಾಗ ಮಾಡಿಕೊಳ್ಳುತ್ತಾರೆ. ವಸತಿದಿಬ್ಬದ ಬಯಲಲ್ಲಿ ರಾತ್ರಿಯೆಲ್ಲಾ ಅಲ್ಲಲ್ಲಿ ಬೆಂಕಿ ಹೊತ್ತಿಸಿಕೊಂಡು ಆ ಸ್ಥಳದಲ್ಲಿ ಜಮಾಯಿಸಿದ್ದ ಬಾರೆ, ಕಳ್ಳೆ, ಕವಳಿ, ತುಗ್ಗಲಿ ಮೋರು ಹಾಗೂ ಕರಿಜಾಲಿಯ ಹಸಿ ಕಟ್ಟಿಗೆಯ ಗಟ್ಟಿಕವೆಗಳನ್ನು ಆ ಬೆಂಕಿಯಲ್ಲಿ ಹದಕ್ಕೆ ಬರುವಾಗೆ ಸುಟ್ಟು ಕಳ್ಳೆಕಂಟೆಗಳನ್ನು ಬಾಗಿಸುತ್ತಾರೆ. ಅಂಕುಡೊಂಕಾದ ಕೆಲವನ್ನು ಕತ್ತಿ, ಕೊಡಲಿ ಇತರೆ ಆಯುಧಗಳಿಂದ ಸವರಿಕೊಳ್ಳುತ್ತಾ, ಅವುಗಳನ್ನು ಸಾಪು ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಗಳ ಗಳನ್ನು ಅಲ್ಲಲ್ಲಿ ಕಟ್ಟಲಿಕ್ಕೆ ಅಥವಾ ಇಂಡಿಗೆ ಬಿಗಿಯಲಿಕ್ಕೆ ಆಸದನಾರು ಮತ್ತು ಹಸಿ ಆಪು ಸಿವುಡುಗಳನ್ನು ಬಿಚ್ಚಿ ಎಳೆ ಎಳೆಯಾಗಿ ಜೋಡಿಸಿಕೊಳ್ಳುತ್ತಿರುತ್ತಾರೆ. ಒಂದು ಗುಂಪು ದಾಸೋಹದ ಜವಬ್ದಾರಿವಹಿಸಿಕೊಂಡು ಭಕ್ತರು ತಂದಿದ್ದ ಮೀಸಲು ಕುಂಬಳಕಾಯಿ ಮತ್ತು ಬೆಲ್ಲದಿಂದ ತಯಾರಿಸಿದ ಬಜ್ಜಿ(ತೊಗೆ) ಮತ್ತು ರಾಗಿ ಮುದ್ದೆಯ ಆಹಾರವನ್ನು ತಯಾರಿಸುತ್ತಾರೆ. ಬೆಳಗಿನ ಜಾವ ನಾಲ್ಕೈದು

ಗಂಟೆ ಸಮಯದಲ್ಲಿಯೇ ದಾಸೋಹಕ್ಕೆ ತಯಾರು ಮಾಡಿಕೊಂಡು ಎಡೆ ಹಾಕಲು ದೇವರಿಗಾಗಿ ಕಾಯುತ್ತಿರುತ್ತಾರೆ.

ಇತ್ತ ಬೆಳಗಿನ ಜಾವ ಕೋಳಿ ಕೂಗುವ ಮುನ್ನ ಮೂರು ಗಂಟೆ ಸುಮಾರಿನಲ್ಲಿ ಚನ್ನಮ್ಮನಾಗತಿಹಳ್ಳಿಯಲ್ಲಿ ಪಟ್ಟದ ಪೂಜಾರಿಗಳು, ದಾಸಯ್ಯಗಳು ಮತ್ತು ಗೌಡರು ಕ್ಯಾತೇದೇವರಿಗೆ ಪೂಜೆ ಸಲ್ಲಿಸಿ ಗುಡಿಯೊಳಗೆ ಇದ್ದ ಬಸವ ಕಂಚಿನ ವಿಗ್ರಹ, ಪಂಚಕಳಸ, ಕಡೆಗೋಲು ಹಾಗೂ ಘಂಟೆ, ಧೂಪದಾರತಿ ಇತರೆ ಪೂಜಾ ಪರಿಕರಗಳನ್ನು ಹೊಸ ಬಿದಿರ ಪುಟ್ಟಿಗೆಯಲ್ಲಿ ತೆಗೆಕೊಂಡು ವಸತಿ ದಿಬ್ಬಕ್ಕೆ ಬರುವಾಗ ಪೂಜಾರಿಯ ಕಾಲಿಗೆ ನೀರಿನ ಸೆಳೆವು ಕೊಟ್ಟು ಸಾಗಾಕುತ್ತಾರೆ. ದೇವರ ಪರಿಕರಗಳನ್ನು ಹೊತ್ತು ವಸತಿದಿಬ್ಬಕ್ಕೆ ಕಾಲ್ನೆಡಿಯಲ್ಲಿಯೇ ಹೋಗಬೇಕು. ಸುಮಾರು ಐದಾರು ಗಂಟೆಗೆ ದೇವರು ವಸತಿ ದಿಬ್ಬಕ್ಕೆ ಹೋಗುತ್ತದೆ. ಅಲ್ಲಿ ದೇವರಿಗೆ ಪೂಜೆಯೊಂದಿಗೆ ಕಂಬಳ ಕಾಯಿ ಬಜ್ಜಿ ಮತ್ತು ರಾಗಿಮುದ್ದೆಯ ನೈವೇದ್ಯ ನೆರವೇರಿಸಿದ ನಂತರ ಗುಡಿ ಕಟ್ಟುವ ಕಾರ್ಯ ಆರಂಭಿಸುತ್ತಾರೆ. ಹಿರಿಯರು ಗೊತ್ತುಪಡಿಸಿದ ಅರವತ್ತು ಅಡಿ ಹೊರ ಮತ್ತು ಒಳ ಸುತ್ತಳತೆಯ ಜಾಗದ ಮಧ್ಯಭಾಗದಲ್ಲಿ ಅರ್ಧಅಡಿ ಅಗಲ, ಒಂದುವರೆ ಅಡಿ ಆಳಕ್ಕೆ ಗುಂಡಿ ತೋಡುತ್ತಾರೆ. ಕೇತೇದೇವರ ಪೂಜಾರಿ ಅರಿಶಿಣದ ಪುಡಿ, ಮೀಸಲು ಹಾಲು, ಬಾಳೆಹಣ್ಣು ಕಲಸಿ ಗುಂಡಿ(ತಗ್ಗು)ಯ ಸುತ್ತಲೂ ವೃತ್ತಾಕಾರದಲ್ಲಿ ಮಂಡಲ ಬರೆದು ಪೂಜೆ ಮಾಡುತ್ತಾನೆ. ಗುಂಡಿಯೊಳಕ್ಕೆ ಮೀಸಲು ಹಾಲು, ಎಲೆ, ಅಡಕೆ, ಬಾಳೆಹಣ್ಣು ಮತ್ತು ದಕ್ಷಿಣೆ(ದುಡ್ಡು)ನ್ನು ಹಾಕಿದ ನಂತರ ಒಂಬತ್ತು ಮೊಳ (ಹದಿನೆಂಟು ಅಡಿ) ಎತ್ತರದ ಪೂಜೆ(ದೇವರ)ಮರದ ತೊಗಟೆಯನ್ನು ತೆಗೆದು ಹರಳೆಣ್ಣೆ, ಅರಿಶಿಣಪುಡಿ, ಮೀಸಲು ಹಾಲು, ಜೇನುತುಪ್ಪ, ಗೋ-ಗಂಜಲು ಹಾಗೂ ಬಾಳೆಹಣ್ಣು ಕಲಸಿ ಆ ಪೂಜೆ ಮರಕ್ಕೆ ಬಳಿದು ಅದನ್ನು ನೆಡುತ್ತಾರೆ.

ಬಲ ಭಾಗದ ಗುಡಿ ಬೊಮ್ಮನ ಗೌಡರ ಒಕ್ಕಲಿನವರದು, ಎಡ ಭಾಗದ್ದು ಕೋಣನಗೌಡರ ಒಕ್ಕಲಿನವರದು ಎಂದು ಗುಡಿ ನಿರ್ಮಾಣಕ್ಕಾಗಿ ಎರಡು ಭಾಗ ಮಾಡಿಕೊಂಡಿರುತ್ತಾರೆ. ಪೂಜಾರಿ ಹಾಗೂ ಗೌಡರು ಒಪ್ಪಿಗೆ ನೀಡಿದ ತಕ್ಷಣವೇ ನೂರಾರು ಜನರು ತುಗ್ಗಲಿಮೊರು, ಕರಿಯಜಾಲಿಯ ಕಟ್ಟಿಗೆ, ಕಾರೆ ಕವೆಕೋಲು ಹಾಗೂ ಮರದ ರೆಂಬೆ ಕೊಂಬೆಗಳನ್ನು ಅಲ್ಲಲ್ಲಿ ಎಳೆದು ತಂದು ಜೋಡಿಸುತ್ತಾರೆ. ಮರಕ್ಕೆ ಹೊಂದಿಕೊಂಡಂತೆ ತುಗ್ಗಲಿ ಹಾಗೂ ಸಗಸೆ ಮರದ ಹದಿನೆಂಟು ಗಳ, ಪ್ರತಿ ಗಳಕ್ಕೂ ನಾಲ್ಕೈದು ಅಡಿ ಅಂತರವಿರುವ ಹಾಗೇ ಒಂದೊಂದು ಗಳಕ್ಕೂ ಅವುಗಳ ಆಶ್ರಯಕ್ಕಾಗಿ ಮೂರು ಅಡಿ ಉದ್ದದ ಎರಡೆರಡು ಕವೆಕಟ್ಟಿಗೆಗಳನ್ನು ಮತ್ತು ತುಗ್ಗಲಿ ಸೀಬುಗಳನ್ನು ನೆಲಕ್ಕೆ ನೆಟ್ಟು ಗಳಗಳಿಗೆ ಜೋಡಿಸಿ ಕಟ್ಟುತ್ತಾರೆ.

ಜೋಡಿಸಿದ ಗಳಗಳು ಜರುಗದಂತೆ ಗುಡಿಯ ಒಳ ಮತ್ತು ಹೊರಭಾಗದ ಗಳಗಳಿಗೆ ಅಲ್ಲಲ್ಲಿ ಆಸದ ನಾರಿನಿಂದ ಹಿಂಡಿಗೆಗಳನ್ನು ಬಿಗಿಯುತ್ತಾರೆ. ಸುತ್ತಲು ತ್ರಿಕೋನಾಕಾರದಲ್ಲಿ ಜೋಡಿಸಿದ ಗಳಗಳ ಮೇಲೆ ಮೇಲಿಂದ ಕೆಳ ಭಾಗಕ್ಕೆ ಮೊದಲು ಬಂದ್ರೆಸೊಪ್ಪು ಹೊದಿಸಿ ಮುಚ್ಚುತ್ತಿರುವಾಗಲೇ ಅದರ ಮೇಲೆಯೇ ಜಾಲಿ ಹಾಗೂ ಕಾರೆಕಳ್ಳೆಯನ್ನು ಗುಡಿಯ ಸುತ್ತಲು ಬಡಿಯುತ್ತಾರೆ. ನಂತರ ಮೇಲ್ಭಾಗಕ್ಕೆ ಸುತ್ತಲೂ ಬಾರೆ ಕಳ್ಳೆಯನ್ನು ಹೊದಿಸುವುದರ ಮೂಲಕ ಗುಡಿ ಪೂರ್ಣಗೊಳಿಸುತ್ತಾರೆ.

**ಕಳಸ ಪ್ರತಿಷ್ಠಾಪನೆ**

ಗುಡಿ ನಿರ್ಮಾಣದ ನಂತರ ಅಕ್ಕಮ್ಮಗಳ ಮಜ್ಜನ ಬಾವಿಯ ತಣ್ಣೀರಿನಲ್ಲಿ ಸ್ನಾನ ಮಾಡಿಕೊಂಡು ಬಂದ ಬೊಮ್ಮನಗೌಡ ವಂಶದ ಒಬ್ಬ ಮತ್ತು ಕೋಣನಗೌಡರ ವಂಶದ ಒಬ್ಬ ಸೇರಿದಂತೆ ಈರಗಾರರಿಬ್ಬರು, ಪೂಜಾರಿ ಹಾಗೂ ಗೌಡರಿಗೆ ನಮಸ್ಕರಿಸಿ ಅವರ ಅಪ್ಪಣೆಯಂತೆ ಕೇತೇದೇವರ ಪೂಜಾರಿಯ ಹತ್ತಿರ ಕಳಸಗಳನ್ನು ಪಡೆದುಕೊಂಡು ಅವುಗಳನ್ನು ಕಂಬಳಿಯಲ್ಲಿಟ್ಟುಕೊಂಡು ನಾ ಮುಂದು, ತಾ ಮುಂದು ಎಂದು ಬರಿಗಾಲಲ್ಲಿ ಓಡಿ ಕಳ್ಳೆಮುಳ್ಳಿನ ರಾಶಿಯ ಮೇಲೆ ಹತ್ತಿ ಗುಡಿಯ ತುದಿಗೆ ಕಳಶ ಪ್ರತಿಷ್ಠಾಪಿಸಿ, ಹೂವಿನ ಹಾರ ಹಾಕುತ್ತಾರೆ. ಈ ಕಾರ್ಯ ನೆರವೇರಿಸುವವರು ಕ್ಯಾತಗೊಂಡನಹಳ್ಳಿ, ಚಳ್ಳಕೆರೆ, ಚೌಳೂರು, ಕೊರಲಕುಂಟೆ, ಈಚಲಗೆರೆ, ಕಸ್ತೂರಿ ತಿಮ್ಮನಹಳ್ಳಿ ಮತ್ತು ದ್ವಾರನಕುಂಟೆಯಲ್ಲಿಯೂ ನೆಲೆಸಿದ್ದಾರೆ.

**ಬೆರಗು**

ಬೆರಗು ಅಂದರೆ ಮುಳ್ಳುಕಳ್ಳೆ ಮತ್ತು ಹಸಿ ಬಂದ್ರೆಸೊಪ್ಪಿನಿಂದ ಕಟ್ಟಿಕೊಂಡ ಚಿಕ್ಕ ಗುಡಿ(ಗುಬ್ಬ)ಸಲು ಟೆಂಟ್, ತಾತ್ಕಾಲಿಕವಾಸದ ಗುಡ್ಲು ಎಂದರ್ಥ. ಇದನ್ನೇ ಬೆರಗು ಎಂದು ಕರೆಯುತ್ತಾರೆ. ಇವುಗಳನ್ನು ಜಾತ್ರೆ ನಡೆಯುವ ಸಂದರ್ಭದಲ್ಲಿ ವಿವಿಧ ಆಚರಣೆಗಳನ್ನು ಜರುಗಿಸಲು ಗೌಡರು, ಪೂಜಾರಿಗಳು ಮತ್ತು ಅವರ ಕುಟುಂಬದವರು ವಸತಿ ದಿಬ್ಬದಲ್ಲಿ ಉಳಿದುಕೊಳ್ಳಲು ಕಳ್ಳೆ ಮುಳ್ಳಿನ ಗುಡಿ ಪಕ್ಕದಲ್ಲಿಯೇ ತುಗ್ಗಲಿ ಮೋರು, ಹಸಿರು ಬಂದ್ರೆ ಸೊಪ್ಪು, ಕಳ್ಳೆಮುಳ್ಳು, ರೆಂಬೆಗಳಿಂದ ತಮ್ಮದೇ ಆದ ರೀತಿಯಲ್ಲಿ ಪ್ರತ್ಯೇಕವಾದ ಬೆರಗುಗಳನ್ನು ತಿರುವಿಕೊಳ್ಳುತ್ತಾರೆ. ಆ ಬೆರಗುಗಳ ಒಳಗೆ ಆಹಾರ ಧಾನ್ಯ, ಬಟ್ಟೆಬರೆ ಹಾಗೂ ಪಾತ್ರೆ ಇತರೆ ಪರಿಕರಗಳನ್ನು ಇಟ್ಟುಕೊಂಡು ಅದರಲ್ಲಿಯೇ ಮಲಗುತ್ತಾರೆ. ಆ ಬೆರಗುಗಳ ಸುತ್ತಲೂ ಕಿರಿದಾದ ಕಳ್ಳೆಮುಳ್ಳಿನ ಬೇಲಿಯನ್ನು ನಿರ್ಮಿಸಿಕೊಂಡಿರುತ್ತಾರೆ. ದಳವಾಯಿ ಗೊಲ್ಲರು, ಮರವಾಯಿಗೊಲ್ಲರು, ಭೂಮಪ್ಪಗಳು, ದ್ಯಾವರಾರು, ಸಜ್ಜೆಯೋರು, ಕೋಟೆಚಿತ್ತಮ್ಮನೋರು, ತಾಳಿಕೆರೆಯೋರು,

ಚನ್ನಮ್ಮನಾಗತಿಹಳ್ಳಿಯವರು ಹೀಗೆ ಹದಿಮೂರು ಗುಡಿಕಟ್ಟಿನ ಪ್ರಮುಖ ಬೆಡಗಿನವರು ಬೆರಗುಗಳನ್ನು ಕಟ್ಟಿಕೊಂಡಿರುತ್ತಾರೆ. ಜಾತ್ರಾ ಸ್ಥಳದಲ್ಲಿ ಕಲ್ಲಿನಿಂದ ನಿರ್ಮಿಸಿದ ಮೂರು ಕಟ್ಟೆಗಳಿವೆ. ಒಂದು ಬೊಮ್ಮನಗೌಡರ ಕಟ್ಟೆ, ಎರಡು ಕೋಣನಗೌಡರ ಕಟ್ಟೆ ಮೂರನೆಯದು ದೇವರೋರುವರ ಕಟ್ಟೆ. ಇವು ಕಳ್ಳೆಮುಳ್ಳಿನ ಗುಡಿಯ ಬಲ ಭಾಗದಲ್ಲಿ ಕಂಡುಬರುತ್ತವೆ.

**ನವಣೆ ಕಣ**

ಮಧ್ಯಾಹ್ನದ ವೇಳೆಯಲ್ಲಿ ವಸತಿದಿಬ್ಬದಲ್ಲಿ ಸಗಣಿಯಿಂದ ನೆಲವನ್ನು ಸಾರಿಸಿ ನವಣೆ ಕಣ ನಿರ್ಮಾಣ ಮಾಡುತ್ತಾರೆ. ಮೀಸಲು ನವಣೆ ತೆನೆಗಳ ಸಿವುಡುಗಳನ್ನು ಇಟ್ಟಿರುತ್ತಾರೆ. ಆ ಕಣದಲ್ಲಿ ತೆನೆಗಳಿಂದ ನವಣೆ ಬೇರ್ಪಡಿಸಿ ರಾಶಿ ಮಾಡುತ್ತಾರೆ. ಬೊಮ್ಮನಗೌಡರ ಪೂಜಾರಿ ಕಾಳಿನ ರಾಶಿ ಪೂಜೆ ಸಲ್ಲಿಸುತ್ತಾನೆ. ನವಣೆಯ ಕಾವಲಿಗಿದ್ದ ವ್ಯಕ್ತಿಗೆ ಗೌಡನು ತನ್ನ ರುಮಾಲಲ್ಲಿ ನವಣೆ ಕಟ್ಟಿಕೊಂಡು ಆಯಾ ಕೊಡುತ್ತಾನೆ. ರಾತ್ರಿ ನವಣೆ ತಂದು ಒರಳಲ್ಲಿ ಕುಟ್ಟಿ ಅಕ್ಕಿ ತೆಗೆದು ಅನ್ನ ಮಾಡಿ ದಾಸೋಹ ನೆರವೇರಿಸುವುದರ ಮೂಲಕ ನವಣೆ ವ್ರತ ಅಳಿಯುತ್ತಾರೆ.

**ಪರಿವಾರದ ದೇವರುಗಳು ಜಾತ್ರೆಗೆ ಸೇರುವುದು**



**ಜಾತ್ರೆಯಲ್ಲಿ ಕ್ಯಾತಪ್ಪ, ಬಯಲಿನ ದೇವರು ಹಾಗೂ ಬಂಜಗೆರೆ ಈರಣ್ಣ ದೇವರುಗಳು**

ಇಪ್ಪತ್ತೆರಡನೆ ದಿನವಾದ ಬುಧವಾರದಂದು ಚಳ್ಳಕೆರೆ ತಾಲ್ಲೂಕು ಬಂಜಗೆರೆ ಗ್ರಾಮದ (ವೀರಣ್ಣ)ಈರಣ್ಣ ಯಾನೆ ಕಾಟಮಲಿಂಗ, ಕೇತಪ್ಪ (ನಿಂಗಣ್ಣ)ಯಾನೆ ಬತವಿನ ದೇವರು, ಈರಬಡಕ್ಕ ಮತ್ತು ಗುರುವಾರದಂದು ಆಂಧ್ರಪ್ರದೇಶದ ಐಗಾರ್ಲಹಳ್ಳಿ ತಾಳಿದೇವರು, ಟಿ.ಎನ್.ಕೋಟೆಯ ಕೊಂಡದ ಚಿತ್ತಮ್ಮ, ಕೊಣದ ದೇವರು, ಕ್ಯಾತಗೊಂಡನಹಳ್ಳಿ ಕದರಿನರಸಿಂಹ ಈ ಪರಿವಾರದ ದೇವರುಗಳು ಚನ್ನಮ್ಮನಾಗತಿಹಳ್ಳಿ ಕ್ಯಾತೆದೇವರ

ದೇವಸ್ಥಾನಕ್ಕೆ ಬಂದು ಸೇರುತ್ತವೆ. ಬಂಜಗೆರೆ ಈರಣ್ಣ, ಬತವಿನ ದೇವರು ಮತ್ತು ತಾಳಿ ದೇವರು ಈ ಮೂರು ದೇವರುಗಳು ಅಣ್ಣ ತಮ್ಮಂದಿರುಗಳು ಎಂಬುದು ಜನರ ನಂಬಿಕೆ.

- ಬಂಜಗೆರೆ ಈರಣ್ಣ – ಅಮವಾಸೆ ದೇವರು, ಬಂಜಗೆರೆ.
- ಬತವಿನ ದೇವರು – ವ್ರತದ ದೇವರು, ಬಂಜಗೆರೆ.
- ತಾಳಿದೇವರು – ವಾರದ ದೇವರು, ಐಗಾರ್ಲಹಳ್ಳಿ (ಆಂಧ್ರಪ್ರದೇಶ)
- ಕ್ಯಾತಪ್ಪ – ಮನೆ ದೇವರು, ಚನ್ನಮ್ಮನಾಗತಿಹಳ್ಳಿ
- ಕದರಿ ನರಸಿಂಹ – ಆಚಾರದ ದೇವರು, ಕ್ಯಾತಗೊಂಡನಹಳ್ಳಿ.

ಇವುಗಳ ಜೊತೆಗೆ ತಿಮ್ಮಣ್ಣನಾಯಕನ ಕೋಟೆಯ ಕೊಂಡದಚಿತ್ತವ್ವ ಮತ್ತು ಸೂರನಹಳ್ಳಿಯ ಕದರಿದೇವರುಗಳು ಒಟ್ಟಿಗೆ ಸೇರಿಕೊಳ್ಳುತ್ತವೆ. ಅಂದು ಚನ್ನಮ್ಮನಾಗತಿಹಳ್ಳಿಯಲ್ಲಿ ಎಲ್ಲಾ ಜಾತಿಯ ಭಕ್ತರು ಉಪವಾಸ ವ್ರತ ಕೈಗೊಂಡು ದೇವರಿಗೆ ಉರುಳು ಸೇವೆ ಮೂಲಕ ಹರಕೆ ತೀರಿಸುತ್ತಾರೆ. ಈ ಕಾರ್ಯ ಬೆಳಿಗ್ಗೆ ಹನ್ನೊಂದರಿಂದ ಮಧ್ಯಾನ ಎರಡು ಗಂಟೆವರೆಗೆ ನಡೆಯುತ್ತದೆ. ಮಹಿಳೆಯರು ಎಲ್ಲಾ ದೇವರುಗಳಿಗೂ ನೀರಿನ ಸೆಳೆವು ನೀಡುತ್ತಾರೆ. ಉರುಮೆ ವಾದ್ಯದೊಂದಿಗೆ ಎಲ್ಲಾ ದೈವಗಳನ್ನು ಅಕ್ಕಮ್ಮಗಳ ದೇವಸ್ಥಾನದ ಹತ್ತಿರ ಹೊಳೆ ಪೂಜೆಗೆ ಕೊಂಡೊಯ್ಯುತ್ತಾರೆ. ಮಕ್ಕಳಾಗದೇ ಇರುವ ಮಹಿಳೆಯರಿಗೆ ಮಕ್ಕಳ ಭಾಗ್ಯ, ಮದುವೆ ಆಗದೇ ಇರುವ ಮಹಿಳೆಯರಿಗೆ ಮುತ್ತೈದೆ ಭಾಗ್ಯ ಕರುಣಿಸುವ ಹೇಳಿಕೆ ನೀಡುತ್ತದೆ. ದೇವರ ಹೇಳಿಕೆ ಎಂದಿಗೂ ಹುಸಿಯಾಗುವುದಿಲ್ಲ ಎಂಬ ನಂಬಿಕೆ ಜನರಲ್ಲಿ ಇದೆ. ದೇವರ ಗುಡಿಯಿಂದ ಹಟ್ಟಿಯ ಬುಡ್ಡೆಕಲ್ಲನ್ನು ದಾಟುವವರೆಗೂ ಚನ್ನಮ್ಮನಾಗತಿಹಳ್ಳಿಯ ಮಡಿವಾಳ ಸಮುದಾಯದವರು ನಡೆ ಮಡಿಬಟ್ಟೆಗಳನ್ನಾಸಿ ದೇವರಿಗೆ ಸೇವೆ ಸಲ್ಲಿದರೆ, ದ್ಯಾವರನಹಳ್ಳಿ ಮಣೇಗಾರು ವ್ರತದಿಂದ ಹೊಲಿದು ತಂದ ಚರ್ಮದ ಹೊಸ ಚಪ್ಪಲಿಯನ್ನು ಕ್ಯಾತೇದೇವರ ಪಟ್ಟದಪೂಜಾರಿ, ಯಜಮಾನ ಪೂಜಾರಿ, ಅಮವಾಸೆ ಪೂಜಾರಿಯ ಕಾಲಿಗೆ ತೊಡಿಸುತ್ತಾರೆ. ಮಣೆಗಾರರ ಚಪ್ಪಲಿಗಳಿಲ್ಲದೆ ದೇವರು ಹುದಿ ಬಾಗಿಲು ದಾಟುವುದಿಲ್ಲ. ಭಕ್ತರು ಕಡಲೆಕಾಯಿ ಮತ್ತು ಇತರೆ ಬಿತ್ತನೆ ಬೀಜಗಳನ್ನು ಹಾಗೂ ಮಂಡಕ್ಕಿ ಸೂರುಬೆಲ್ಲ, ಮೆಣಸುಗಳನ್ನು ದೇವರ ಪೆಟ್ಟಿಗೆಗಳ ಮೇಲೆ ಎಸೆಯುವುದರ ಮೂಲಕ ತಮ್ಮ ತಮ್ಮ ಹರಕೆಗಳನ್ನು ತೀರಿಸುತ್ತಾರೆ. ಹೀಗೆ ವಿವಿಧ ಬಗೆಯಲ್ಲಿ ಭಕ್ತರ ಸೇವೆಗಳನ್ನು ಸ್ವೀಕರಿಸುತ್ತಾ, ದೇವರುಗಳು ಪುರ್ಲೆಹಳ್ಳಿ ಗ್ರಾಮಕ್ಕೆ ಬಂದು ಸೇರುತ್ತವೆ. ದೇವರಿಗೆ ವೀಳ್ಯೆದೆಲೆ, ಕಡಲೆಕಾಯಿ, ಮಂಡಕ್ಕಿ, ಬಾಳೆಹಣ್ಣು, ಸೂರುಬೆಲ್ಲವನ್ನು ಭಕ್ತರು ಅರ್ಪಿಸುತ್ತಾರೆ. ನಂತರ ಎಲ್ಲಾ ದೇವರುಗಳು ಹೊಳೆ ಪೂಜೆಗೆ ಹೋಗುತ್ತವೆ.

## ಗಂಗಾ ಪೂಜೆ

ಜನಪದ ಸಂಪ್ರದಾಯಗಳಲ್ಲಿ 'ನೀರು' ಶುದ್ಧತೆಯ, ಪಾವಿತ್ರ್ಯತೆಯ, ನಿರ್ಮಲತೆಯ ಸಂಕೇತವಾಗಿದೆ. ಅದು ಕೂಡಿಸುವ ಮತ್ತು ಬೇರ್ಪಡಿಸುವ ಸಂಕೇತವಾಗಿಯೂ ಬಳಕೆಯಲ್ಲಿದೆ. ಜನರ ಮೈಲಿಗೆಯನ್ನು ಕಳೆದು ಮಡಿ ಮಾಡಲು ಅವರಿಗೆ ನೀರೇ ಬೇಕು. ಆದ್ದರಿಂದ ಜೀವನಾವರ್ತದ ಆಚರಣೆಗಳಲ್ಲಿ 'ನೀರು' ವಿಶೇಷವಾದ ದೈವಾರಾಧನೆಗೆ ಒಳಪಡುತ್ತದೆ. ಗಂಗಾಪೂಜೆ ಇಲ್ಲದೆ ಯಾವ ದೈವಗಳಿಗೂ ಆಚರಣೆ, ಹಬ್ಬ, ಉತ್ಸವ ಹಾಗೂ ಜಾತ್ರೆ ನಡೆಯಲಾರದು. ನೀರಿಗೆ ಎಲ್ಲ ಬಗೆಯ ಮೈಲಿಗೆಗಳನ್ನು ಕಳೆಯುವ ಶಕ್ತಿ ಇರುವುದರಿಂದ ನೀರಿಗೆ ತುಂಬಾ ಮಹತ್ವವಿದೆ. ಹಾಗಾಗಿ ಸ್ನಾನವಿಲ್ಲದೆ ಯಾವುದೇ ಜನಪದ ಆಚರಣೆಗಳಿಲ್ಲ. ಗುಡ್ಡ, ಬೆಟ್ಟ, ನದಿ, ಕಣಿವೆ, ಹಳ್ಳ, ಕೊಳ್ಳ, ಕೆರೆ ಮತ್ತು ಬಾವಿ ಹೀಗೆ ನೀರು ಹರಿಯುವ ಹಾಗೂ ನೀರು ಇರುವ ತಾಣಗಳು ಪಾವಿತ್ರ್ಯತೆಯಿಂದ ಕೂಡಿರುತ್ತವೆ ಎಂಬುವುದು ಬುಡಕಟ್ಟು ಸಮುದಾಯಗಳ ನಂಬಿಕೆ. ನೀರು ಶುದ್ಧತೆಯ ಸಂಕೇತವಾಗಿರುವುದರಿಂದ ಅವರು ತಮ್ಮ ದೇವರುಗಳನ್ನು ಶುದ್ಧಿ ಮಾಡಲು ಹಳ್ಳ ಹಾಗೂ ತೊರೆ(ಹೊಳೆ)ಗಳಿಗೆ ಕೊಂಡೊಯ್ಯುತ್ತಾರೆ. ಅದೇ ರೀತಿ ಪ್ರತಿ ವರ್ಷ ಹಬ್ಬ ಹರಿದಿನ, ಜಾತ್ರೆ, ಉತ್ಸವದ ಸಂದರ್ಭದಲ್ಲಿ ಕ್ಯಾತಪ್ಪ ಹಾಗೂ ಇತರೆ ಪರಿವಾರದ ದೇವರುಗಳನ್ನು ಪುರ್ಲೆಹಳ್ಳಿ ಬಳಿಯ ವಸತಿ ದಿಬ್ಬದ ಅಕ್ಕಮ್ಮಗಳ ದೇವಸ್ಥಾನದ ಮಜ್ಜನಬಾವಿಗೆ ಇಲ್ಲವೆ ವೇದಾವತಿ ನದಿಗೆ ಕೊಂಡೊಯ್ಯುತ್ತಿರುತ್ತಾರೆ.



ಗಂಗಾಪೂಜೆ ಐಗಳಿಂದ

ಮಧ್ಯರಾತ್ರಿಯಲ್ಲಿ ಪಟ್ಟದಪೂಜಾರಿಗಳು ತಮ್ಮ ತಮ್ಮ ದೈವಗಳಿಗೆ ಹಾಕಿದ್ದ ಆಭರಣ, ಹೂವಿನಾರಗಳನ್ನು ತೆಗೆದು ಹಾಕಿ ದೈವಗಳ ಪೆಟ್ಟಿಗೆಗಳನ್ನು ಬಿಚ್ಚಿಡುತ್ತಾರೆ. ದಾಸಯ್ಯಗಳು,

ಗೌಡರು, ಲಿಂಗಾಯಿತ ಅಯ್ಯಗಳು ಎಲ್ಲರೂ ಸೇರಿಕೊಂಡು ಮಜ್ಜನಬಾವಿ ದಿಬ್ಬದ ಮೇಲೆ ಐದು (ಕಲ್ಲಿನ) ಬೆನವ (ಬೆನಕ), ತಂಬಿಟ್ಟನ್ನು (ಅಕ್ಕಿಟ್ಟು ಮತ್ತು ಬೆಲ್ಲದಿಂದ ಕಲಸಿ ಮಿದಿಕೆ ಮಾಡಿದ ಉಂಡೆ) ಒಂಬತ್ತು ಉಂಡೆ ಮಾಡುತ್ತಾರೆ. ನೂರಾ ಒಂದು ಕಬ್ಬಿನ ಕೋಲು, ನೂರಾ ಒಂದು ಎಲೆ, ನೂರಾ ಒಂದು ಅಡಿಕೆ, ನೂರಾ ಒಂದು ಬಾಳೆಹಣ್ಣು, ನೂರಾ ಒಂದು ನಿಂಬೆಕಾಯಿ, ಕರಿ ಮತ್ತು ಬಿಳಿ ಎಳ್ಳು, ಬೆಲ್ಲ ಹಾಗೂ ಜೇನುತುಪ್ಪದಿಂದ ತಯಾರು ಮಾಡಿದ ಅಕ್ಕುಸ್ತಿ, ಅರಿಶಿಣ ಕುಂಕುಮ, ಭಂಡಾರ, ಹಸಿಹಾಲು, ಮೀಸಲು ತುಪ್ಪ, ಮೊಸರು, ಹೊಂಬಾಳೆ ಇತ್ಯಾದಿಗಳನ್ನು ವೀಳ್ಯದೆಲೆ ಮೇಲೆ ಇಟ್ಟು ಗಂಗಾ ಪೂಜೆ ನೆರವೇರಿಸುತ್ತಾರೆ. ಇತ್ತ ಪೂಜಾರಿ ವಂಶಸ್ಥರು ಮಜ್ಜನಬಾವಿಯಿಂದ ನೀರು ತೆಗೆದುಕೊಂಡು ದೈವಗಳ ಆಭರಣ ಮತ್ತು ಇತರೆ ಪರಿಕರಗಳನ್ನು ತೊಳೆದು ಶುದ್ಧಿ ಮಾಡುತ್ತಾರೆ. ನಂತರ ಒಂದೊತ್ತಿದ್ದ ನಾಲ್ಕೈದು ಜನ ಪಟ್ಟದಪೂಜಾರಿಗಳು ಸೇರಿ ಕರಿಯ ಕಂಬಳಿ ಗುಬರಿ ಹಾಕಿಕೊಂಡು ಮೀಸಲು ಹಾಲು, ಗೋಗಂಜಲು, ಉತ್ತುತ್ತಿ ಹಣ್ಣು, ವಿಭೂತಿ ಉಂಡೆ, ಬಾಳೆ ಹಣ್ಣು, ಜೇನುತುಪ್ಪ, ಪಾದರಸ, ಸಾಲಿಗ್ರಾಮ ಹಾಗೂ ಪಂಚಲೋಹದ ಚೂರುಗಳನ್ನು ಮತ್ತು ಇತರೆ ಅಮೂಲ್ಯವಾದ ವಸ್ತುಗಳನ್ನು ಕಣ್ಣು ಬಾಯಿ ಕಟ್ಟಿಕೊಂಡು ಕೈಯಿಂದಲೇ ತಡವರಿಸಿಕೊಂಡು ದೈವಗಳ ಪೆಟ್ಟಿಗೆಯೊಳಕ್ಕೆ ಇಡುತ್ತಾರೆ. ಒಡವೆ, ವಸ್ತ್ರ, ಹೊಂಬಾಳೆ ಮತ್ತು ವಿವಿಧ ತರಹದ ಹೂವುಗಳಿಂದ ದೇವರುಗಳಿಗೆ ಅಲಂಕಾರ ಮಾಡುತ್ತಾರೆ.

ದೇವರ ಮುಂದೆ ಕರಿಕಂಬಳಿ ಜಾಡಿ ಹಾಸಿ ಹೂ, ಹಣ್ಣು, ಕಾಯಿ, ಧೂಪ, ದೀಪಗಳಿಂದ ಪೂಜಿಸಿದ ನಂತರ ಸಾರ್ವಾಡದ ಅಯ್ಯಗಳು ಮತ್ತು ವೈಷ್ಣವ ಬ್ರಾಹ್ಮಣರಿಂದ (ಪಂಚಾಂಗದವರು) ಶ್ಲೋಕ ಹಾಗೂ ತಿರುಮಂತ್ರವನ್ನು ವಾಚನ ಮಾಡಿಸುತ್ತಾರೆ. ಇದನ್ನು 'ಪುಣ್ಯ ಮಾಡಿಸುವುದು' ಎಂದು ಕರೆಯುತ್ತಾರೆ. ಹೀಗೆ ದೇವರುಗಳಿಗೆ ಹಲವಾರು ಅಭಿಷೇಕದ ನಂತರ ಐದು ಜನ ಪೂಜಾರಿಗಳ ಕೈಗೆ ಕಂಕಣಧಾರಣೆ ಮಾಡಿ ಮಹಾ ಮಂಗಳಾರತಿ ಮಾಡುತ್ತಾರೆ.

**ಹಿರೇಜಾಡಿ (ದೊಡ್ಡ ಜಾಡಿ)ಪೂಜೆ**

ಹಿರೇಜಾಡಿಯನ್ನು ಈ ಹಿಂದೆ ದೇವೇಂದ್ರ ನಮ್ಮ ಹಿರಿಯಜ್ಜಗಳಿಗೆ ಕೊಟ್ಟಿದ್ದ ಎಂಬ ನಂಬಿಕೆ ಅವರಲ್ಲಿದೆ. ದೇವೇಂದ್ರ ಕೊಟ್ಟ ಜಾಡಿಯನ್ನು ಹಿರೇಜಾಡಿ, ದೊಡ್ಡ ಜಾಡಿ ಎನ್ನುತ್ತಾರೆ. ಅದರ ಸ್ಮರಣೆಗಾಗಿ ಕರಿಯ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ವೀರಗಾರರ ಅಲಗು, ರಾಂಬಣ(ತ್ರಿಶೂಲ), ಚಾಟಿ ಮತ್ತು ಇತರೆ ಆಯುಧಗಳನ್ನಿಟ್ಟು ಪೂಜೆ ಮಾಡಿದ ನಂತರ ಐದು ಜನ ಪೂಜಾರಿಗಳು ಬಾಯಿಗೆ ಬಿಳಿ ವಸ್ತ್ರ ಕಟ್ಟಿಕೊಂಡು ಮೂರು ಸಲ ಬಗ್ಗಿ ಬಗ್ಗಿ ಭೂಮಿಗೆ ನಮಸ್ಕಾರ ಮಾಡುತ್ತಾರೆ. ಮದುವೆ

ಸಂದರ್ಭದಲ್ಲಿ ವಧುವರರಿಗೆ ಇಡುವ ಹಾಗೆ ಎಲ್ಲಾ ದೇವರುಗಳಿಗೂ ಸ್ಯಾಸೇವು ಇಕ್ಕಿ, ಗೋವಿಂದಾ... ಗೋವಿಂದ... ಎಂದು ಕೂಗುವುದರ ಮೂಲಕ ದೇವರುಗಳಿಗೆ ಮೂರು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ.

**ಬಾನ್ನಾರವಿ (ಸಳ್ಳೀರು ಗಡಿಗೆ) ಪೂಜೆ**

ದೇವರ ಪೂಜೆಗಿಂತ ಮುಂಚಿತವಾಗಿ ಈ ಗಡಿಗೆಯಲ್ಲಿ ನೀರು ತುಂಬಿಟ್ಟಿರುತ್ತಾರೆ. ಸಾಮಾನ್ಯವಾಗಿ ಇವು ಮಣ್ಣಿನ ಗಡಿಗೆ ಅಥವಾ ತಾಮ್ರದ ಗಡಿಗೆಗಳಾಗಿರುತ್ತವೆ. ಅವುಗಳಲ್ಲಿ ಹೊಳೆ ನೀರು ತುಂಬಿರುತ್ತಾರೆ. ಈ ಹರಿವೆಗಳನ್ನು ಹಿರಿಯರೇ ಹೊರಬೇಕು. ಹೊರುವವರ ಮಡಿಲಿಗೆ ಇಪ್ಪತ್ತೊಂದು ಬಾಳೆಹಣ್ಣನ್ನು ತುಂಬುತ್ತಾರೆ. ಇದನ್ನು ದೇವರ ಜೊತೆಯಲ್ಲಿಯೇ ಕಳ್ಳೆಮುಳ್ಳಿನ ಗುಡಿಗೆ ಹೊತ್ತೊಯ್ಯಬೇಕು. ಬಾನ್ನಾರವಿ ಹೊತ್ತವರು ಕಳ್ಳೆಮುಳ್ಳಿನ ಗುಡಿಯೊಳಕ್ಕೆ ಮೊದಲು ಪ್ರವೇಶ ಮಾಡಿ ಆ ಮಡಿ ನೀರನ್ನು ಗುಡಿಯೊಳಗೆ ಚಿಮಕಿಸಿ ಕಳ್ಳೆಗುಡಿಯ ಬಾಗಿಲ ತಲೆಗೆ ತೆಂಗಿನ ತೀರ್ಥಗಾಯಿಯನ್ನು ಕಟ್ಟಿದ ನಂತರ ಗುಡಿಯೊಳಗೆ ದೇವರುಗಳನ್ನು ಪ್ರತಿಷ್ಠಾಪಿಸುತ್ತಾರೆ. ಈ ಸಳ್ಳೀರು ಗಡಿಗೆ ನೀರಿನಿಂದ ನವಣೆ ಅನ್ನದ ಎಡೆ ತಯಾರಿಸಲು ಬಳಸುತ್ತಾರೆ.

**ಉರುಮೆ ಪೂಜೆ**

ದೇವರ ಆಚರಣಾ ಕಾರ್ಯಗಳಿಗೆ ಈ ಉರುಮೆ (ಹರೆ)ವಾದ್ಯಗಳನ್ನು ಬಳಸಿಕೊಳ್ಳುವುದರಿಂದ ಕರಿಯ ಕಂಬಳಿ ಜಾಡಿ ಹಾಸಿ ಉರುಮೆ ವಾದ್ಯಗಳನ್ನು ಇಟ್ಟು ಅವುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಕೆಲ ವಾದ್ಯಗಳನ್ನು ಜಾಡಿ ಮೇಲೆ ಇಟ್ಟು ಮಣೇವು ಹಾಕುವುದರ ಮೂಲಕ ಅವುಗಳಿಗೆ ಪೂಜೆ ಸಲ್ಲಿಸುತ್ತಾರೆ. ಈ ಎಲ್ಲಾ ಆಚರಣೆಗಳನ್ನು ಹೊಳೆಪೂಜೆ ಎಂತಲೂ ಕರೆಯುತ್ತಾರೆ.

**ದೂಳ್ಮಮರಿ (ಹೊಳೆಮರಿ) ಬಲಿ**

ದೇವರು ಹೊಳೆಪೂಜೆ ಮುಗಿಸಿಕೊಂಡು ಬರುವ ದಾರಿ ಮಧ್ಯದ ಹಳ್ಳದಲ್ಲಿ ದೇವರಿಗೆ ಬಟ್ಟೆಯಿಂದ ತೆರೆ ಕಟ್ಟಿ ಕುರಿ ಅಥವಾ ಮೇಕೆ ಮರಿಯನ್ನು ತಳವಾರನ ಮೂಲಕ ಬಲಿ ಕೊಡುತ್ತಾರೆ. ಮೊಸರನ್ನು ಹಾಗೂ ಓಕುಳಿಯನ್ನು ದೇವರಿಗೆ ನಿವಾಳಿಸಿ ಚೆಲ್ಲುತ್ತಾರೆ. ಆಗ ದೇವರಿಗೆ ಮೈಮೇಲೆ ಬಂದಿರುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಬಲಿ ಕೊಟ್ಟ ಮರಿಯನ್ನು ಮಡಿವಾಳರು ಅಥವಾ ಚಲವಾದಿಗಳು ತೆಗೆದುಕೊಂಡು ಹೋಗುತ್ತಾರೆ. ಕೆಲವು ಸಲ ಬಲಿ ಮರಿಯನ್ನು ಗುಂಡಿಗೆ ಹಾಕಿ ಮುಚ್ಚುತ್ತಾರೆ. ದೇವರಿಗೆ ಬಲಿ ಕೊಡುವ ಮರಿಯನ್ನೇ ದೂಳಮರಿ ಅಥವಾ ಹೊಳೆಮರಿ ಎಂದೂ

ಹೀಗೆ ಬಲಿಕೊಡುವುದನ್ನು ವಾಸೆ ಕೊಯ್ಯೋದು ಎಂತಲೂ ಕರೆಯುವ ವಾಡಿಕೆ ಇದೆ. ನಂತರ ಮೆರವಣಿಗೆ ಮೂಲಕ ದೇವರುಗಳು ಕಳ್ಳೆಮುಳ್ಳಿನ ಗುಡಿಗೆ ಹೋಗುತ್ತವೆ.



**ಕುರಿಮರಿ ಬಲಿ ನೀಡುತ್ತಿರುವುದು**

**ನವಣೆ ಕುಟ್ಟುವ ಶಾಸ್ತ್ರ**

ಮಜ್ಜನಬಾವಿ ಹತ್ತಿರ ಪೂಜೆಯನ್ನು ನೆರವೇರಿಸಿಕೊಂಡು ಮೆರವಣಿಗೆ ಮೂಲಕ ದೇವರುಗಳ ಪೆಟ್ಟಿಗೆಗಳನ್ನು ಹೊತ್ತುತಂದು ಕಳ್ಳೆಮುಳ್ಳಿನ ಗುಡಿಯಲ್ಲಿ ಪ್ರತಿಷ್ಠಾಪಿಸುತ್ತಾರೆ. ಮಧ್ಯರಾತ್ರಿ ಹನ್ನೆರಡು ಗಂಟೆ ನಂತರ ವ್ರತದ ನವಣೆಯನ್ನು ಕುಟ್ಟಲು ಪ್ರಾರಂಭಿಸುತ್ತಾರೆ. ಕೋಣನ, ಬೊಮ್ಮನ ಹಾಗೂ ಅಜ್ಜೇರ ಬೆಡಗಿನ ಗೊಲ್ಲರು ನವಣೆ ಕುಟ್ಟುವ ಆಚರಣೆಯನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಒಂಬತ್ತು ನಿಂಬೆಹಣ್ಣು, ಒಂಬತ್ತು ಎಲೆ ಅಡಿಕೆ, ಒಂಬತ್ತು ಮಣ್ಣಿನ ಹೊಸ ಮಡಿಕೆ (ಕುಡಿಕೆ)ಗಳನ್ನು ತೆಗೆದುಕೊಂಡು ಹೋಗಿ, ಒಂಬತ್ತು ಜನ ಪಟ್ಟದ ಪೂಜಾರಿಗಳು ಮಜ್ಜನ ಬಾವಿಯಲ್ಲಿ ನೀರು ತುಂಬಿಕೊಂಡು ಎರಡು ಬಾರಿ ಬಾವಿಗೆ ಸುರಿದು ಪುನಃ ಮೂರನೆ ಬಾರಿಗೆ ಎಲ್ಲರೂ ಒಟ್ಟಿಗೆ ಮಡಿಕೆಗಳಲ್ಲಿ ನೀರು ತುಂಬಿಕೊಂಡು ಬರುತ್ತಾರೆ. ಬರುವಾಗ ಯಾರೊಬ್ಬರ ಜೊತೆ ಮಾತನಾಡುವುದಿಲ್ಲ. ಪೂಜಾರಿಗಳು ತಂದ ನೀರಿನಿಂದ ಹತ್ತು ಜನ ಮಹಿಳೆಯರು ಒನಕೆ ತೊಳೆಯುತ್ತಾರೆ. ಏಳೆಂಟು ಜನ ಮಹಿಳೆಯರು ನವಣೆ ಧಾನ್ಯವನ್ನು ಹಸನು ಮಾಡುತ್ತಾರೆ. ನಂತರ ಮಡಿ ನೀರಿನಿಂದ ನೆಲ ಸಾರಿಸಿ ಒರಳಿನಾಕಾರದಲ್ಲಿ ಐದು ದೊಡ್ಡಗುಣಿಗಳನ್ನು(ಕುಳಿ), ಎರಡು ಚಿಕ್ಕ ಗುಣಿಗಳನ್ನು ನಿರ್ಮಾಣ ಮಾಡುತ್ತಾರೆ. ಗುಣಿಗೆ ನವಣೆ ತುಂಬಿಸಿ ಗೌಡ ಮತ್ತು ಪೂಜಾರಿ ಮನೆತನದ ಹನ್ನೊಂದು ಜನ ಹೆಂಗಸರು ದೇವರ ಬಗೆಗಿನ ಪದಗಳನ್ನು ಹೇಳಿಕೊಂಡು ಮಣ್ಣಿನ ಒರಳಲ್ಲಿಯೇ ನವಣೆಯನ್ನು ಕುಟ್ಟಿ ಅಕ್ಕಿ ಮತ್ತು ಹಿಟ್ಟನ್ನು ತಯಾರಿಸುತ್ತಾರೆ.

ಕರಿಯ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ಒಳ ಮರವನ್ನು ತಂದಿಡುತ್ತಾರೆ. ಆ ಮರದ ಒರಳಲ್ಲಿ ನವಣೆ ತುಂಬಿಸಿ ಐದು ಜನ ಪೂಜಾರಿಗಳು ಮತ್ತು ಹೆಣ್ಣು ಮಕ್ಕಳು ಮೊರದಲ್ಲಿ ತಂದ ನವಣೆಯನ್ನು ನಾಲ್ಕು ಬಾರಿ ಇಷ್ಟಿಷ್ಟು ಹಾಕಿಕೊಂಡು ಒನಕೆಯಿಂದ ನವಣೆ ಕುಟ್ಟುವ ಶಾಸ್ತ್ರ ನಡೆಸುತ್ತಾರೆ.

**ನವಣೆ ಅನ್ನ ದಾಸೋಹ**

ಬೆಳಗಿನ ಜಾವ ನಾಲ್ಕು ಗಂಟೆಗೆ ಕುಟ್ಟಿದ ನವಣೆಕ್ಕಿಯಿಂದ ಅನ್ನ ತಯಾರಿಸಿ ರಾಶಿ ಮಾಡುತ್ತಾರೆ. ಬಾಳೆಹಣ್ಣು, ಮೊಸರು ಕಲಸಿ ತಯಾರಿಸಿದ ಬೆಲ್ಲದ ಪಾನಕವನ್ನು ನವಣೆ ಅನ್ನದ ಜೊತೆ ಕಲಸಿ ದಾಸೋಹದ ಮೂಲಕ ನವಣೆಯಿಂದ ತಯಾರಿಸಿದ ಪ್ರಸಾದವನ್ನು ಮೊದಲು ದೇವರಿಗೆ ಅರ್ಪಿಸುತ್ತಾರೆ. ನಂತರ ಜಾತ್ರೆಯಲ್ಲಿ ನೆರೆದಿದ್ದ ಎಲ್ಲ ಜನರೂ ನವಣೆ ಅನ್ನವನ್ನು ಸ್ವೀಕರಿಸುವ ಮೂಲಕ ಹಿಡಿದಿದ್ದ ನವಣೆ ವ್ರತ(ಬತ)ವನ್ನು ಅಳಿಯುತ್ತಾರೆ. ಮಣ್ಣಿನ ಒರಳಲ್ಲಿ ಕುಟ್ಟಿದ ನವಣೆ ಅನ್ನವನ್ನು ತಿನ್ನುವಾಗ ಬಾಯಿಯಲ್ಲಿ ಕಲ್ಲು ಹಾಗೂ ಮಣ್ಣು ಸಿಕ್ಕರೂ ಅದನ್ನು ಹಾಗೆಯೇ ನುಂಗುತ್ತಾರೆ. ಕಲ್ಲು ಮತ್ತು ಮಣ್ಣು ಸಿಕ್ಕಿತು ಎಂದರೆ ದೇವರು ಕಣ್ಣು ಕಳೆಯುತ್ತಾನೆ ಎಂಬ ಭಯ ಭಕ್ತರಲ್ಲಿದೆ. ಆದ್ದರಿಂದ ಅನ್ನದಲ್ಲಿ ಕಲ್ಲು, ಮಣ್ಣು ಸಿಕ್ಕರೂ ಸಹ ಅನ್ನದಲ್ಲಿ ಏನೂ ಸಿಗಲಿಲ್ಲ ಎಂದು ಹೇಳುತ್ತಾರೆ.



(ಜಾತ್ರಾ ಸ್ಥಳದಲ್ಲಿ ನವಣೆ ಅನ್ನ ದಾಸೋಹ ಸ್ವೀಕರಿಸುತ್ತಿರುವ ಭಕ್ತರ ಚಿತ್ರ)

**ನವಣೆ ಹಿಟ್ಟಿನ ತಮ್ಮ**

ನವಣೆ ಕುಟ್ಟಿ ಹಿಟ್ಟು ತಯಾರಿಸುತ್ತಾರೆ. ಅದನ್ನು ಮೀಸಲು ಹಿಟ್ಟು ಎಂದು ಕರೆಯುತ್ತಾರೆ. ಆ ಹಿಟ್ಟಿಗೆ ಮೀಸಲು ಜನಿಗೆ ಹಾಲು ಮತ್ತು ಬೆಲ್ಲ ಮಿಶ್ರಣ ಮಾಡಿ ತಮ್ಮುವನ್ನು ತಯಾರಿಸಿ ಒಂದು ಬಿದಿರಿನ ಪುಟ್ಟಿಯಲ್ಲಿ ತುಂಬಿಡುತ್ತಾರೆ. ಕಳಸ ಕೀಳುವ ದಿನ ದೇವರ ದರ್ಶನಕ್ಕೆ ಬಂದ ಕರಡಿಗೊಲ್ಲ ಹೆಣ್ಣು ಮಕ್ಕಳಿಗೆ ಮೀಸಲು ತಮ್ಮುವನ್ನು ವಿತರಿಸುತ್ತಾರೆ. ಅವರು ಅದನ್ನು ಪ್ರಸಾದವೆಂದು ಸ್ವೀಕರಿಸಿ ಹುರುಳಿ ಕೈ ತೊಳೆಯದಿರುವ ತಪ್ಪಿಗಾಗಿ ಆ ಬೆಡಗಿನವರು ತಪ್ಪು ಕಾಣಿಕೆಯೆಂದು ನಾಲ್ಕಾಣೆ ದುಡ್ಡನ್ನು ಕಟ್ಟಿಸಿಕೊಳ್ಳುತ್ತಾರೆ. ಉಳಿದ ಹಿಟ್ಟನ್ನು ಭಕ್ತರಿಗೆ ಪ್ರಸಾದವಾಗಿ ಹಂಚುತ್ತಾರೆ. ಕ್ಯಾತೆದೇವರು ಮತ್ತು ಹಾಲು ಕುಡಿದಪ್ಪ ದೇವರ ಪೂಜಾರಿಗಳು ಕಟ್ಟುನಿಟ್ಟಿನ ವ್ರತ ನಿಷ್ಠರಾಗಿರಬೇಕಾಗುತ್ತದೆ. ಈ ವ್ರತವನ್ನು ಆಚರಿಸುವ ಇವರು ಇತರೇ ಕಾಡುಗೊಲ್ಲರಂತೆ ವರ್ಷದಲ್ಲಿ ಒಂದು ಸಲ ನಡೆಯುವ ಹಬ್ಬ, ಜಾತ್ರೆ ಸಂದರ್ಭದಲ್ಲಿ ಹುರುಳಿ-ನವಣೆ ಬಳಸುತ್ತಾರೆ. ಉಳಿದಂತೆ ಈ ಧಾನ್ಯಗಳನ್ನು ಬಳಸುವುದಿಲ್ಲ. ಆದರೆ ಇತ್ತೀಚೆಗೆ ಪೂಜಾರಿಗಳು ತಂತಿಯ ಕೆಳಗೆ ಮತ್ತು ಬಸ್ಸುಗಳಲ್ಲಿಯೂ ಓಡಾಡುತ್ತಾರೆ. ಆದರೆ ವಾಹನಗಳ ಪ್ರಮಾಣ ಅತ್ಯಂತ ವಿರಳ.

ಕ್ಯಾತೇದೇವರು, ಕಾಟಮದೇವರು ಮತ್ತು ಪಾತೇದೇವರ ಪೂಜಾರಿಗಳು ಪಟ್ಟಕಟ್ಟುವ ಮೊದಲು ಹುರಳಿ-ನವಣೆಯಿಂದ ಮಾಡಿದ ಆಹಾರ ತಿನ್ನುತ್ತಾರೆ. ಆ ಪೂಜಾರಿಗಳು ಸತ್ತಾಗ ದನಗಳ ಸಗಣಿಯಲ್ಲಿ ಬೆಳೆಸಿದ ಕಾಡುಹುರುಳಿ ಹಾಗೂ ಕಾಡುನವಣೆಯನ್ನು ತೇಯ್ದು ಅದನ್ನು ಅವರ ಬಾಯಿಗೆ ನೆಕ್ಕಿಸಿ ಬಾಯಿ ಬತ ಬಿಡುವ ಪದ್ಧತಿಯಿದೆ. ಹುರುಳಿ-ನವಣೆ ಇವು ಬಾಯಿ ಬತ ಎಂದು ಕರೆಯುತ್ತಾರೆ. ಬಾಯಿ ಬತದವರು ಇನ್ನೊಬ್ಬರ ಮನೆಯಲ್ಲೂ ಏನನ್ನೂ ತಿನ್ನಕೂಡದು ಮತ್ತು ಕುಡಿಯ ಕೂಡದು ಎಂಬ ನಿಯಮವೂ ಇದೆ. ಜಾತ್ರೆಗೆ ಕಂಕಣ ಕಟ್ಟುವ ಸಮಯದಲ್ಲಿ ಹಿಡಿದ ನವಣೆ ವ್ರತವನ್ನು ವಿಸರ್ಜಿಸಲು ಅಥವಾ ಬತ ಬಿಡಲು ನವಣೆಯನ್ನು ಕುಟ್ಟಲಾಗುತ್ತದೆ. ನವಣೆ ಕುಟ್ಟುವ ಕಾರ್ಯವು ಜಾತ್ರೆಯ ಆಚರಣೆಗಳ ವಿಶೇಷತೆಗಳಲ್ಲೊಂದು. ಯಾವುದೇ ಒರಳಿನ ಸಹಾಯವಿಲ್ಲದೆ ಬರಿ ನೆಲದ ಮೇಲೆ ಮುತ್ತೈದೆ ಹೆಣ್ಣು ಮಕ್ಕಳು ಅಹೋರಾತ್ರಿ ದೇವರ ಮೇಲಿನ ಪದಗಳನ್ನು ಹಾಡುತ್ತಾ ನವಣೆಯನ್ನು ಕುಟ್ಟುತ್ತಾರೆ. ಈ ದೃಶ್ಯವನ್ನು ನೋಡಲು ಹೊರ ರಾಜ್ಯದಿಂದ ಅಪಾರ ಸಂಖೆಯಲ್ಲಿ ಭಕ್ತರು ಸೇರುತ್ತಾರೆ.

**ಒಳಮರದ ಪೂಜೆ**

ಕಳ್ಳೆಮುಳ್ಳಿನ ಗುಡಿಯೊಳಗೆ ಹಾಸಿದ ಅತ್ತಿಯಮರವನ್ನು ಒಳಮರ ಎಂದು ಕರೆಯುತ್ತಾರೆ. ಪುರ್ಲೆಹಳ್ಳಿ ತಳವಾರ(ನಾಯಕ ಜನಾಂಗ)ದವರು ಕಟ್ಟುನಿಟ್ಟಿನ ವ್ರತದ

ಆಚರಣೆ ಮತ್ತು ಮಡಿ ಮೈಲಿಗೆಯಿಂದ ಈ ಮರವನ್ನು ಕಡಿದು ತರುತ್ತಾರೆ. ಆ ಮರವನ್ನು ಬಾಳ್ಸಿಯಿಂದ ಕೆತ್ತಿ ಅದರಲ್ಲಿ ಏಳು ಒರಳು(ಗುಳಿ)ಗಳನ್ನು ನಿರ್ಮಾಣ ಮಾಡಿರುತ್ತಾರೆ. ಆ ಗುಣಿಗಳಿಗೆ ಐದು ಜನ ಪಟ್ಟದ ಪೂಜಾರಿಗಳು ಬಿದಿರಿನ ಹೊಸ ಮೊರದಲ್ಲಿ ನವಣೆಯನ್ನು ತುಂಬಿಕೊಂಡು ಮರದ ಆ ಗುಳಿಯೊಳಕ್ಕೆ ಇಷ್ಟಿಷ್ಟು ಹಾಕುತ್ತಾರೆ. ಶಾಸ್ತ್ರಕ್ಕೆ ಎಂಬಂತೆ ಪೂಜಾರಿಗಳು ಮತ್ತು ಮಹಿಳೆಯರು ಸೇರಿದಂತೆ ಏಳೆಂಟು ಜನ ಒನಕೆ ತೆಗೆದುಕೊಂಡು ನವಣೆಯನ್ನು ಕುಟ್ಟುತ್ತಾರೆ. ಒಳಮರಕ್ಕೆ ಕ್ಯಾತೇದೇವರ ಪೂಜಾರಿ ನವಣೆ ಹಾಕಿ ವಿಶೇಷ ಪೂಜೆ ಸಲ್ಲಿಸಿ ನಂತರ ಅನ್ನ ನೈವೇದ್ಯವನ್ನು ಹಾಕುತ್ತಾರೆ. ಇದನ್ನು ಮೇಲೆಡೆ ಎಂದು ಕರೆದರೆ, ನವಣೆ ಹಿಟ್ಟಿನಿಂದ ತಯಾರಿಸಿದ ಎಡೆಯನ್ನು ಕೆಳಗಳ ಎಡೆ ಎನ್ನುತ್ತಾರೆ. ಬಂಜಗೆರೆ ಬತವಿನ ದೇವರ ಪೂಜಾರಿ ಒಂದೊಂದು ಗುಳಿಯೊಳಕ್ಕೆ ಮೂರು ಬಾರಿ ಇಷ್ಟಿಷ್ಟು ನವಣೆ ಹಾಕಿ ಒನಕೆ ಹಿಡಿದುಕೊಂಡು ಒಳಮರದ ಸುತ್ತಲೂ ಸುತ್ತುತ್ತಿರುತ್ತಾನೆ. ಇನ್ನುಳಿದವರು ದೈವಗಳ ಬಗೆಗಿನ ಪದಗಳನ್ನು ಹೇಳುತ್ತಾ ಸುತ್ತುವರೆದು ನಡೆಯುತ್ತಿರುತ್ತಾರೆ. ಇದನ್ನೇ ನವಣೆ ಕುಟ್ಟುವ ಸಂಪ್ರದಾಯ ಎನ್ನುತ್ತಾರೆ.

**ಹುತ್ತದ ಪೂಜೆ**



(ಹುತ್ತದ ಪ್ರಜೆಯ ಚಿತ್ರ)

ಬೆಳಗಿನ ಜಾವ ಹೊತ್ತುಟ್ಟುವ ಸಂದರ್ಭದಲ್ಲಿ ಅಕ್ಕಮ್ಮಗಳ ಗುಡಿಯ ಮಜ್ಜನ ಬಾವಿಯಿಂದ ತಂದ ತುಂಬಿದ ಗಡಿಗೆಯ ನೀರನ್ನು ಹುತ್ತದ ಸುತ್ತ ಹಾಗೂ ಮೇಲ್ಭಾಗಕ್ಕೂ ಹಾಕುತ್ತಾರೆ. ಮಣ್ಣಿನ ಹೊಸ ಮಡಿಕೆಯಲ್ಲಿ ತಯಾರಿಸಿದ ನವಣೆ ಅನ್ನ,

ಒಂಬತ್ತು ತೆಂಗಿನಕಾಯಿ, ನೂರ ಏಳು ಎಲೆ ಅಡಿಕೆ, ಹನ್ನೊಂದು ನಿಂಬೆಹಣ್ಣು, ಬಿಳಿವಸ್ತ್ರ, ಅರಿಶಿಣಕೊಂಬು, ನೂರವೊಂದು ಉತ್ತುತ್ತಿ ಹಣ್ಣು, ನೂರವೊಂದು ಕಬ್ಬಿನಕೋಲು, ಐದು ಸಿವುಡು ನವಣೆ ತೆನೆಯ ಹುಲ್ಲು ಇಟ್ಟು ಪೂಜಿಸುತ್ತಾರೆ. ಹಸಿಟ್ಟು, ನವಣೆ ಅನ್ನ, ಹಾಲು ಮೀಸಲು, ಗೋಗಂಜಲು, ಜೇನುತುಪ್ಪ, ಎಲ್ಲವನ್ನು ಹುತ್ತದ ಕೊಮೆಯೊಳಕ್ಕೆ ಬಿಡುತ್ತಾರೆ.

ಈ ಆಚರಣೆಯನ್ನು ಹೆಣ್ಣುಮಕ್ಕಳು ನೋಡಬಾರದು ಎಂದು ಕರಿಕಂಬಳಿಯಿಂದ ತೆರೆ ಕಟ್ಟಿರುತ್ತಾರೆ. ಗುರುಗಳು, ದಾಸಯ್ಯಗಳು, ಗುಂಜಿಗನೂರು ಕದರಿದೇವರು, ಡಮಗಿನ ಕದರಿದೇವರು, ಕ್ಯಾತಗೊಂಡನಹಳ್ಳಿ ತುಪ್ಪದ ಕದರಿ ನರಸಿಂಹ, ರಂಗಸೇಡ್ ಕದರಿ ನರಸಿಂಹದೇವರು, ಗುಲ್ಮೆ ಕದರಿ ನರಸಿಂಹದೇವರು, ಗುಡಿಹಳ್ಳಿ ಕದರಿ ದೇವರು, ಕೋಡಿಹಳ್ಳಿ ಕದರಿದೇವರು, ಬಿಲ್ಲೂಗಡು ನರಸಿಂಹದೇವರು, ಚಿಕ್ಕಳ್ಳಿ ಕದರಿ ನರಸಿಂಹದೇವರು, ಐಗಾರ್ಲಹಳ್ಳಿ ತಾಳಿದೇವರು, ಚನ್ನಮ್ಮನಾಗತಿಹಳ್ಳಿ ಕ್ಯಾತೇದೇವರು, ಬಂಜಗೆರೆ ಬತವಿನದೇವರು, ಬಂಜಗೆರೆ ಈರಣ್ಣ, ಬಾಲದೇವರು, ಕನ್ನೇನಹಳ್ಳಿ ಚಿತ್ರದೇವರು, ನಿಜವಳ್ಳಿ ಚಿತ್ರದೇವರು, ಚಿಕ್ಕೇನಹಳ್ಳಿ ಚಿತ್ರದೇವರು, ನಡುವಳ್ಳಿ ಚಿತ್ರದೇವರು, ಒಳಮರದವರು, ಪುರ್ಲೆಹಳ್ಳಿ ಗ್ರಾಮಸ್ಥರು, ದಳವಾಯಿಗಳು, ಕೆಂಗುರಿ ತಿಪ್ಪಣ್ಣ, ಈರತಿಮ್ಮಣ್ಣ, ಪದಗಾವಲು ಚಿಕ್ಕಣ್ಣ, ಈರತಮ್ಮಣ್ಣ, ಗುಡಿಹಳ್ಳಿ ಚಿತ್ರದೇವರು, ಸಾಣಿಕೆರೆ ಚಿತ್ರದೇವರು, ನೆರ್ಲಿಗೆ ಶ್ರೀರಾಮದೇವರು, ಈರಗಾರರು, ಚಳ್ಳಕೆರೆ ಕಾಟಪ್ಪನಹಟ್ಟಿ ಎತ್ತಪ್ಪ, ಚಳ್ಳಕೆರೆ ರಂಗಪ್ಪ, ಕೊಂಡ್ಲಹಳ್ಳಿ ತಿಮ್ಮಪ್ಪ, ಜಾನಮದ್ದಿ ತಿಮ್ಮಪ್ಪ, ಮರವಾಯಿಗಳು, ಕಶ್ಯಪ ವಂಶಸ್ಥರು, ನೆಂಟರು, ಬೊಮ್ಮನಗೌಡರು, ಕೋಣನಗೌಡರು, ವಾಲಗದವರು, ಮಡಿವಾಳರು, ಬತವಿನ ವಾಲಗದವರು, ಹೆಳವರು, ಸೋಬಾನದವರು, ಹೆಣ್ಣುಮಕ್ಕಳು, ಅರಿತಿದ್ದು, ಮರೆತಿದ್ದು ಎಂದು ಬೊಮ್ಮನಗೌಡ ಹೀಗೆ ತಮ್ಮ ಕಟ್ಟೆಮನೆ ವ್ಯಾಪ್ತಿಯ ಹದಿಮೂರು ಗುಡಿಕಟ್ಟಿನ ನೂರವೊಂದು ಜನ ಭಕ್ತರಿಗೆ ಹೆಸರಿಡಿದು ಪೂಜೆಗೆ ಇಟ್ಟಿದ್ದ ನೂರವೊಂದು ವೀಳ್ಯವನ್ನು ಎತ್ತಿ ಕೊಡುತ್ತಾನೆ. ಇದನ್ನು ತಮ್ಮ ಪಾಲಿನ ವೀಳ್ಯಾ ಎಂದು ಕೈ ಮುಗಿದು ಸ್ವೀಕಾರ ಮಾಡುತ್ತಾರೆ.

**ಕೊಣದ ಪೂಜೆ**

ಪೂರ್ವಿಕರ ವ್ರತಗಳ ಅನುಸರಣೆಯಂತೆ ರೆಡ್ಡಿಗಳು ಈ ಹಿಂದೆ ಕ್ಯಾತೇದೇವರನ್ನು ನವಣೆ-ಹುರುಳಿ ಕಣಜದಲ್ಲಿಟ್ಟು ಪೂಜೆ ಮಾಡುತ್ತಿದ್ದರು. ಅದೇ ರೀತಿ ಜಾತ್ರೆಯ ಇಪ್ಪತ್ತೊಂದನೆ ದಿನದಂದು ಮಧ್ಯರಾತ್ರಿ ಹನ್ನೆರಡು ಗಂಟೆಗೆ ಮಜ್ಜನಬಾವಿಯಿಂದ ಮಡಿನೀರು ತಂದು ವಸತಿ ದಿಬ್ಬದ ಕಳ್ಳೆ ಮುಳ್ಳಿನ ಗುಡಿಯ ಮುಂಭಾಗದ ಪೂರ್ವದಿಕ್ಕಿಗೆ ನೂರು ಮೀಟರ್ ಅಂತರದ ಬಯಲು ಪ್ರದೇಶದಲ್ಲಿ ಎಡುವರೆ ಅಡಿ ಆಳ ಮತ್ತು ಒಂದು ಅಡಿ ಅಗಲ ಅಳತೆಯ, ವೃತ್ತಕಾರದ ಗುಂಡಿ(ಕುಣಿ)ಯನ್ನು ತೋಡಿ ನೆಲ

ಸಾರಿಸಿ ಅರಿಶಿಣ ಪುಡಿ, ಒಳ್ಳೆಣ್ಣೆ, ಬಾಳೆಹಣ್ಣು, ನವಣೆ ಹಿಟ್ಟು ಮತ್ತು ಹಾಲು ಮಿಶ್ರಣ ಮಾಡಿ ಗುಂಡಿಯ ಸುತ್ತಲೂ ರಂಗೋಲಿ ಹಾಕುತ್ತಾರೆ. ಕ್ಯಾತೆದೇವರ ಪೂಜಾರಿ ಗುಳಿಯ ಸುತ್ತ ಮಂಡಲ ಬರೆದು ನೂರವೊಂದು ಎಡೆ, ಮೂವತ್ತೊಂದು ತೆಂಗಿನ ಕಾಯಿ, ಹನ್ನೊಂದು ನಿಂಬೆಹಣ್ಣು, ನವಣೆ ತಂಬಿಟ್ಟು, ಹೊಂಬಾಳೆಕಟ್ಟು, ಒಂಬತ್ತು ಕಬ್ಬಿನಕೋಲು, ಹೂ, ಹಣ್ಣು ಮತ್ತು ನವಣೆಬಾನ(ಅನ್ನ)ವನ್ನು ಇಟ್ಟು ಪೂಜಿಸುತ್ತಾರೆ. ಅನ್ನ ನೈವೇದ್ಯ ಮುಗಿದಮೇಲೆ ಗುಡಿಕಟ್ಟಿನ ಪೂಜಾರಿಗಳು, ದಾಸಯ್ಯಗಳು ಸೇರಿದಂತೆ ಭಕ್ತರು ಮೀಸಲು ಹಾಲನ್ನು ಗುಂಡಿಯೊಳಕ್ಕೆ ಬಿಡುತ್ತಾರೆ. ನಂತರ ಕರಿಕಂಬಳಿ ಜಾಡಿಮೇಲೆ ಇಟ್ಟಿದ್ದ ಹಾಲು, ಹಣ್ಣು, ಕಾಯಿ ಪ್ರಸಾದ ಎಲ್ಲವನ್ನು ಗುಂಡಿಗೆ ಹಾಕಿ ಮುಚ್ಚುತ್ತಾರೆ. ಕೊಣದ ಮುಂದಿಟ್ಟಿದ್ದ ಹಾಲು ಅನ್ನ, ಹಣ್ಣಿನ ಪ್ರಸಾದವನ್ನು ಎತ್ತಿ ಬೊಮ್ಮನಗೌಡರ ಸಂಬಂಧಿಕರ ಮಡಿಲಿಗೆ ಕಟ್ಟುತ್ತಾರೆ.



**(ಕೊಣದ ಪೂಜೆ ಚಿತ್ರ)**

ಇದನ್ನೇ 'ದೊಡ್ಡಬುತ್ತಿ' ಅಥವಾ 'ದೊಡ್ಡೆಡೆ' ಎಂದು ಕರೆಯುತ್ತಾರೆ. ಈ ದೊಡ್ಡಬುತ್ತಿಯನ್ನು ಮಡಿಲಿಗೆ ಕಟ್ಟಿಕೊಂಡ ಬೊಮ್ಮನಗೌಡ ಭಯ, ಭಕ್ತಿಯಿಂದ ಕಾಲ್ನಡಿಗೆಯ ಮೂಲಕ ಹೊಳಲ್ಕೆರೆ ತಾಲ್ಲೂಕು ಚಿಕ್ಕಜಾಜೂರು ಹೋಬಳಿಯ ಗುಂಜಿಗನೂರಿಗೆ ಹೋಗಿ ಅಲ್ಲಿನ ಹಿರೇನರಸಿಂಹಸ್ವಾಮಿ ದೇವರಿಗೆ ಅರ್ಪಿಸಿ ವಿಶೇಷ ಪೂಜೆ ಸಲ್ಲಿಸುತ್ತಾನೆ. ದೇವರ ಬುತ್ತಿಯನ್ನು ಬೊಮ್ಮನಗೌಡನಿಂದ ಸ್ವೀಕರಿಸಿದ ದೇವರ ಒಕ್ಕಲಿನ ಜನರು ಆತನಿಗೆ ಹೊಸ ಬಟ್ಟೆ ಉಡುಗೊರೆ ನೀಡಿ ವಿಶೇಷ ಗೌರವದಿಂದ ಕಂಡು ಆತನನ್ನು ತಮ್ಮೂರಿಗೆ ಕಳುಹಿಸಿ ಕೊಡುತ್ತಾರೆ. ದೊಡ್ಡ ಬುತ್ತಿಯನ್ನು ದೇವಸ್ಥಾನದಲ್ಲಿಟ್ಟುಕೊಂಡು ಯುಗಾದಿ ಹಬ್ಬದ ಮೊದಲ ದಿನ ದೊಡ್ಡಬುತ್ತಿ ಎಡೆಯನ್ನು

ತಿಂದ ನಂತರ ಬೇವು ಬೆಲ್ಲ ತಿನ್ನುವ ಪದ್ಧತಿ ಇಂದಿಗೂ ಗುಂಜಿಗನೂರಿನಲ್ಲಿ ಕಂಡುಬರುತ್ತದೆ. ಕ್ಯಾತೆದೇವರ ಜಾತ್ರಾ ಆಚರಣೆಯಲ್ಲಿ ಪ್ರತಿ ವರ್ಷವೂ ಗುಂಜಿಗನೂರಿಗೆ ದೊಡ್ಡಬುತ್ತಿ ಕಳುಹಿಸಿಕೊಡುವ ಸಂಪ್ರದಾಯವಿದೆ. ಹಿಂದೆ ಕ್ಯಾತಪ್ಪ ದೇವರು ರೆಡ್ಡಿಗರ ಮನೆಯನ್ನು ಸುಟ್ಟು ಕಾಡುಗೊಲ್ಲರ ಬೊಮ್ಮಣ್ಣನಿಗೆ ಒಲಿದು ಬರುವಾಗ ಒಳ್ಳನ್ನು(ಒರಳು)ಹೊತ್ತು ತಂದಿದ್ದಕ್ಕಾಗಿ ಒಳ್ಳಿನ ಪೂಜೆಯನ್ನು ಶಾಸ್ತ್ರೋಕ್ತವಾಗಿ ಆಚರಿಸುತ್ತಾರೆ. ಆ ದಿನ ಕ್ಯಾತಪ್ಪ ದೇವರಿಗೆ ಕಡಲೆಯಿಂದ ವಿಶೇಷ ಪೂಜೆ ಸಲ್ಲಿಸುತ್ತಾರೆ.

**ದೇವರನ್ನು ಸೆರೆಯಲ್ಲಿ ಇಡುವುದು**

ಚಿತ್ರದುರ್ಗದಲ್ಲಿ ಪಾಳೇಗಾರರು ದೇವರನ್ನು ಸೆರೆ ಇಟ್ಟಿದ್ದರ ನೆನಪಿಗಾಗಿ ಅನುಕರಣೆ ಎಂಬಂತೆ ನವಣೆ ಮನೆಯನ್ನು ನಿರ್ಮಾಣ ಮಾಡಿ ಆ ಧಾನ್ಯಗಳೊಳಗೆ ಕ್ಯಾತೆದೇವರನ್ನು ಸೆರೆಯಲ್ಲಿಡುವ ಪದ್ಧತಿ ರೂಢಿಯಲ್ಲಿದೆ. ಇದನ್ನೇ 'ದೇವರ ಸೆರೆವಯ್ಯುವುದು' ಎನ್ನುತ್ತಾರೆ. ತ್ತಾರೆ. ಅಂದರೆ ದೇವರನ್ನು ಬಂಧಿಸುವುದು.

**ಆವಿ(ಕರು)ನ ಗೂಡಿನ ಪೂಜೆ**

'ಗೂಡು' ಅಂದರೆ ರೊಪ್ಪ, ದನಕರುಗಳನ್ನು ಕೂಡುವ ಜಾಗ. ಕಳ್ಳೆಬೇಲಿಯ ರಕ್ಷಣೆಯೊಳಗೆ ಇರುವ ದನ, ಕರುಗಳನ್ನು ಕೂಡುವ ಜಾಗ(ಸ್ಥಳ)ವನ್ನೇ ಗೂಡು ಎಂದು ಕರೆಯುತ್ತಾರೆ. ಆ ಗೂಡಿನೊಳಗಿರುವ ದನ, ಕುರಿ, ಹಸುಗಳ 'ಹಿಂಡು ಹೆಚ್ಚಲಿ' ಎಂದು ನಡೆಸುವ ಫಲ ಸಮೃದ್ಧಿಯ ಹಬ್ಬವಿದು. ಗೂಡಿನ ಹಬ್ಬವು ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ ಹಾಗೂ ಕೇತಪ್ಪನ ನೆಲೆಗಳಲ್ಲಿರುವ ಎಲ್ಲಾ ಊರುಗಳಲ್ಲಿ ನಡೆಯದಿದ್ದರೂ ಇದೇ ಕೇತಪ್ಪನ ಜಾತ್ರೆಯ ಇಪ್ಪತ್ನಾಲ್ಕನೆ ದಿನವಾದ ಶನಿವಾರ ಬೆಳಿಗ್ಗೆ ವಸತಿ ದಿಬ್ಬದಲ್ಲಿರುವ ಅಕ್ಕಮ್ಮಗಳ ದೇವಸ್ಥಾನದಲ್ಲಿ ನಡೆಯುತ್ತದೆ. ಅಲ್ಲಿನ ಕಲ್ಲಿನ ಗೂಡಿನಲ್ಲಿರುವ ಕಲ್ಲಿನ ಬೆನವಗಳಿಗೆ ಹಾಲು ಮೀಸಲು ಎಡೆ ಮಾಡಿ ಅರ್ಪಿಸುತ್ತಾರೆ. ಹಾಲುಕಂಬಿ, ನಾರಿಕಲ್ಲು, ಚಿಪ್ಪುಕೊಡಲಿ, ಉಳಿಬಾರುಕೋಲು ಹಾಗೂ ಬಿದಿರಕೋಲುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ವಸ್ತುಗಳು ಕಾಡುಗೊಲ್ಲರ ಪಶುಪಾಲಕ ಸಂಸ್ಕೃತಿಯ ಕುರುಹುಗಳೇ ಆಗಿವೆ.

**ಆವಿನಗೂಡು**

ಹಿಂದೆ ಕ್ಯಾತಪ್ಪ, ಕರಿಯಣ್ಣ, ಸಿರಿಯಣ್ಣ ಮತ್ತು ಪದಿಗಾವಲು ಚಿಕ್ಕಣ್ಣ ಇವರು ಇಲ್ಲಿಯೇ ದನಗಳನ್ನು ಮೇಯಿಸಿಕೊಂಡು ನೆಲೆಸಿದ್ದರು ಎಂಬ ನಂಬಿಕೆ ಜನರಲ್ಲಿದೆ. ಜಾತ್ರೆಯ ದಿನ ಗೂಡಿನ ಬಳಿ ಜನ ಸೇರುತ್ತಾರೆ. ಹೆಂಗಸರು ಸೋಬಾನೆ ಪದ ಹಾಡುತ್ತಾರೆ. ಗೂಡಿನ ಬಳಿ ಸಗಣಿ ತೆಪ್ಪೆಗಳನ್ನು ಗುಡ್ಡೆ ಹಾಕಿ ಬರುವಾಗ ಅವುಗಳಿಗೆ

ಕೈ ಮುಗಿದು ಬರುವ ಸಂಪ್ರದಾಯವಿದೆ. ಕಾಡುಗೊಲ್ಲರಿಗೆ ಮುಳ್ಳುಕಳ್ಳೆ, ದೇವರು, ಹುತ್ತ ಹಾಗೂ ಪಶುಗಳೆಂದರೆ ಪಂಚ ಪ್ರಾಣ. ಆದ್ದರಿಂದ ಅವುಗಳ ಮೇಲಿನ ಪ್ರೀತಿಗಾಗಿ ಆವು(ಹಸು), ಕರುಗಳ ಗೂಡಿನ ಪೂಜೆ ಮಾಡುವ ಸಂಪ್ರದಾಯ ಅವರಲ್ಲಿ ಹಿಂದಿನಿಂದಲೂ ಬೆಳೆದು ಬಂದಿದೆ.

**ಕಳಸ ಕೀಳುವ ರೋಚಕ ಕ್ರಿಯೆ**

ಇಪ್ಪತ್ತಾರನೆ ದಿನ ಸೋಮವಾರ ಕಾಡುಗೊಲ್ಲ ಸಮುದಾಯದ ಹದಿಮೂರು ಗುಡಿಕಟ್ಟು ಮತ್ತು ಮೂರು ಕಟ್ಟೆಮನೆಗೆ ಸೇರಿದ ಮುಖ್ಯಸ್ಥರು ಹಾಗೂ ವಿವಿಧ ಭಾಗದಲ್ಲಿದ್ದ ದೇವರ ಒಕ್ಕಲು ಮಕ್ಕಳೆಲ್ಲರನ್ನೂ ಒಂದೆಡೆ ಸೇರಿಸುವ ಅಪರೂಪದ ಜಾತ್ರೆ ಇದು. ದೂರದ ಊರುಗಳಿಂದ ಭಕ್ತರು ರಾತ್ರಿಯೆಲ್ಲ ಪ್ರಯಾಣ ಬೆಳೆಸಿ ಬರುತ್ತಿರುತ್ತಾರೆ. ಮಹಿಳೆಯರು, ಮಕ್ಕಳು ಸೇರಿದಂತೆ ಆ ದಿನ ಮಧ್ಯಾಹ್ನ ಒಂದು ಗಂಟೆ ವೇಳೆಗೆ ಕ್ಯಾತಪ್ಪದೈವದ ಮೂಲ ನೆಲೆಯಾದ ವಸತಿದಿಬ್ಬದಲ್ಲಿ ವಿವಿಧ ಜಾತಿ, ಧರ್ಮದವರು ಬಂದು ಸೇರುತ್ತಾರೆ. ಸುತ್ತಲ ಊರುಗಳಿಂದ ಎತ್ತಿನ ಗಾಡಿಯಲ್ಲಿ, ಆಟೊ, ಟೆಂಪೊ, ಲಾರಿ, ಟ್ಯಾಕ್ಟರ್, ಬಸ್, ಕಾರು, ಮೋಟಾರ್ ಬೈಕ್ ಮುಂತಾದ ವಾಹನಗಳ ಮೂಲಕ ಆಗಮಿಸಿದ ಭಕ್ತರು ಬೆಳ್ಳಂ ಬೆಳಗಿನಿಂದಲೇ ಅಕ್ಕಮ್ಮಳಬಾವಿಗೆ ಕೈಮುಗಿದು, ದಾಸಯ್ಯನ ಹತ್ತಿರ ಭವನಾಶಿ ನೀರು ಹಾಕಿಸಿಕೊಂಡು ಕಳ್ಳೆ ಮುಳ್ಳಿನ ಗುಡಿ ಮುಂದೆ ದಿಂಡುರುಳು ಉರುಳಿ ಕೇತಪ್ಪನಿಗೆ ಕಟ್ಟಿಕೊಂಡ ಹರಕೆಯನ್ನು ತೀರಿಸುತ್ತಾರೆ. ಕೆಲವರು ಮಕ್ಕಳ ತಲೆಗೂದಲು (ಜವಳ ಶಾಸ್ತ್ರ) ತೆಗೆಸುತ್ತಾರೆ. ನಾಮಕರಣ ಮಾಡುತ್ತಾರೆ. ಇನ್ನು ಕೆಲವರು ವಧು-ವರರಿಗೆ ಮದುವೆ ಮಾಡುವ ಕಾರ್ಯವನ್ನು ನೆರವೇರಿಸುತ್ತಾರೆ. ಇನ್ನು ಕೆಲವರು ಜಾತ್ರೆಯಲ್ಲಿ ಸುತ್ತಾಡಿ ತಮ್ಮ ಮಕ್ಕಳು ಮರಿಗಳಿಗೆ ಬೇಕಾದ ಆಟಿಕೆಗಳನ್ನು, ದನ,ಕರುಗಳಿಗೆ ಅಲಂಕಾರಿಕ ವಸ್ತುಗಳನ್ನು, ಆಹಾರ ತಯಾರಿಸಲಿಕ್ಕೆ ಬೇಕಾದ ಪಾತ್ರೆ ಪರಿಕರ ಮತ್ತು ಮಣ್ಣಿನ ಮಡಿಕೆಗಳನ್ನು ಕೊಂಡುಕೊಳ್ಳುತ್ತಾರೆ. ವಿವಿಧ ಊರುಗಳಿಂದ ಆಗಮಿಸಿದ ಕೋಲಾಟದ ತಂಡಗಳು, ಭಜನೆ, ಚೌಡಿಕೆ, ತಮಟೆ ಹಾಗೂ ಉರುಮೆ ಕಲಾ ತಂಡಗಳು ಜಾತ್ರೆಯಲ್ಲಿ ಕಲಾ ಪ್ರದರ್ಶನಗಳನ್ನು ನೀಡುತ್ತಿರುತ್ತವೆ. ಕಲಾವಿದರು ಕೇತೇದೇವರ ಮೇಲಿನ ಗಗ್ಗರ ಪದ, ಪುರಾಣಗಳನ್ನು ಹಾಡಿನ ಮೂಲಕ ಅಭಿವ್ಯಕ್ತಿಸುತ್ತಿರುತ್ತಾರೆ. ಮಹಿಳೆಯರು ಸೋಬಾನೆ ಪದಗಳನ್ನು ಹಾಡುತ್ತಿರುತ್ತಾರೆ. ಹಲವು ದೇವರುಗಳನ್ನು ಪ್ರತಿಷ್ಠಾಪಿಸಿದ ಕಳ್ಳೆಮುಳ್ಳಿನ ಗುಡಿಯಲ್ಲಿ ಆದಿನ ನಿರಂತರ ದೇವರ ಆರಾಧನೆ, ಪೂಜೆ ನಡೆಯುತ್ತಿರುತ್ತದೆ. ಪಟ್ಟದ ಪೂಜಾರಿಗಳು ಸ್ವಾಮಿಗೆ ವಿಶೇಷ ಅರ್ಚನೆ ಮಾಡುತ್ತಾರೆ. ಜೋಡೆತ್ತುಗಳಿಗೆ ರೋಗ-ರುಜನಗಳು ಬಾರದಿರಲೆಂದು ಅವುಗಳ ಮೈತೊಳೆದು ಗುಡಿಯ ಸುತ್ತಲೂ ಪ್ರದಕ್ಷಿಣೆ ಹಾಕಿಸುತ್ತಾರೆ.



(ಕಳ್ಳೆಮುಳ್ಳಿನ ಗುಡಿಹತ್ತಿ ಈರಗಾರರು ಕಳಸ ಕೀಳುವ ಚಿತ್ರ)

ಜಾತ್ರೆಗೆ ಬಂದ ಹದಿಮೂರು ಗುಡಿಕಟ್ಟಿನ ಭಕ್ತಾಧಿಗಳಿಂದ ದೇವರ ಖರ್ಚು-ವೆಚ್ಚವನ್ನು ಕೋಣನಗೌಡ ಮತ್ತು ಬೊಮ್ಮನಗೌಡ ವಂಶಸ್ಥರು ಸ್ವೀಕರಿಸುತ್ತಾರೆ. ಜಾತ್ರಾ ಆಚರಣೆಯ ಸಂಪೂರ್ಣ ಜವಬ್ಧಾರಿಯನ್ನು ಗೌಡರೇ ಹೊಂದಿರುತ್ತಾರೆ. ರಾಜಕೀಯ ನಾಯಕರ ಆಗಮನ ಸರ್ವೇ ಸಾಮಾನ್ಯವಾಗಿರುತ್ತದೆ. ಇಲ್ಲಿ ಜಾತಿ, ಧರ್ಮ ಮತ್ತು ಪಕ್ಷಭೇದ ಮರೆತು ಎಲ್ಲರೂ ಪಾಲ್ಗೊಳ್ಳುತ್ತಾರೆ. ಅಂದು ಸಂಜೆ ನಾಲ್ಕೈದು ಗಂಟೆಗೆ ಕಳ್ಳೆಮುಳ್ಳಿನ ಗುಡಿಯಲ್ಲಿರುವ ದೇವರ ಪೆಟ್ಟಿಗೆಗಳನ್ನು ಕರಿಕಂಬಳಿ ಜಾಡಿಯ ಮೇಲೆ ಇಟ್ಟು ಪೂಜೆ ಮಾಡುತ್ತಾರೆ. ಅಕ್ಕಮ್ಮಳಬಾವಿಯ ತಣ್ಣೀರಿನಲ್ಲಿ ಮುಳುಗಿ ನೇಮಿಸಿದ ಐದು ಜನ ಈರಗಾರರು ಕಳಸ ಕೀಳಲು ಬರಿಗಾಲಲ್ಲಿ ಬಂದು ಗೌಡರ ಅಪ್ಪಣೆಗೆ ಕಾದು ನಿಂತಿರುತ್ತಾರೆ.

ಕಳಸ ಕೀಳುವುದನ್ನು ನೋಡಲು ಇಡೀ ಜಾತ್ರೆಯ ಜನ ಗುಡಿಯ ಸುತ್ತಲೂ ನಿಂತಿರುತ್ತಾರೆ. ಕೆಲವರು ತಮ್ಮ ತಮ್ಮ ವಾಹನಗಳ ಮೇಲೆ, ಎತ್ತಿನ ಗಾಡಿಯ ಮೇಲೆ ನಿಂತಿರುತ್ತಾರೆ. ಇನ್ನು ಕೆಲವರು ಎತ್ತರವಾದ ಮರ ಹತ್ತಿ ಕುಳಿತಿರುತ್ತಾರೆ. ಕ್ಷಣ ಕ್ಷಣಕ್ಕೂ ತವಕ.! ಜನರಿಗೆ ನೋಡುವ ಕುತೂಹಲ. ಉರುಮೆ ಸದ್ದು, ಜನರ ಶಿಳ್ಳು, ಕೇಕೆ ಈರಗಾರರನ್ನು ಉರಿದುಂಬಿಸುತ್ತಿರುತ್ತವೆ. ಅಪ್ಪಣೆ ದೊರಕಿದ ಕೂಡಲೇ ಆವೇಶಗೊಂಡ ಈರಗಾರರು ಕಳಸ ಕಿತ್ತು ತರಲು ನಾ ಮುಂದು, ತಾ ಮುಂದು ಎಂದು ತುದಿಗಾಲಿನಿಂದಲೇ ಕಳ್ಳೆ ಮುಳ್ಳಿನ ಗುಡಿಯನ್ನು ಓಡೋಡಿ ಹತ್ತುತ್ತಿರುತ್ತಾರೆ. ಹತ್ತುವಾಗ ಕೆಲ ಈರಗಾರರು ಮುಳ್ಳು ಕಳ್ಳೆಯಲ್ಲಿಯೇ ಸಿಕ್ಕಿ ಹಾಕಿಕೊಂಡು ಉರುಳಿ ಬೀಳುತ್ತಾರೆ. ಕೈ, ಮೈ ಪರಚಿಕೊಂಡರೂ ತಮಗರಿವಿಲ್ಲವೆಂಬಂತೆ ಗುಡಿಯ ತುದಿಗೆ ಹತ್ತಿ ಕಳಸ ಕೀಳುತ್ತಾರೆ. ಕಿತ್ತು ಕೈಯಲ್ಲಿನ ಕಳಸಗಳನ್ನು ಒಬ್ಬರಿಗೊಬ್ಬರು ಕೊಸರಿ ಕಸಿದುಕೊಳ್ಳುತ್ತಿರುತ್ತಾರೆ.

ಕಳಸ ಕಿತ್ತ ನಂತರ ಈರಗಾರರು ಗುಡಿಯಿಂದ ಕೆಳಕ್ಕೆ ಇಳಿಯುತ್ತಿದ್ದಂತೆ ಅವರನ್ನು ಎತ್ತಿಕೊಂಡು ಗುಡಿಯ ಸುತ್ತಲೂ ಹಾಗೂ ದೇವರ ಮುಂದೆ ಪ್ರದರ್ಶನ ಮಾಡಿ ಅವನನ್ನು ಗೌರವದಿಂದ ಕಾಣುವುದರ ಮೂಲಕ ಕಳಸ ಕಿತ್ತ ವ್ಯಕ್ತಿಗೆ ಬಹುಮಾನ(ಪಾರಿತೋಷಕ) ನೀಡುತ್ತಾರೆ. ಇದೆಲ್ಲದಕ್ಕಿಂತ ಮೊದಲಿಗೆ ಕಳಸ ಕೀಳುವುದು ತಮ್ಮ ಬೆಡಗಿನ ಅಥವಾ ವಂಶದ ಪ್ರತಿಷ್ಠೆಯೂ ಆಗಿರುತ್ತದೆ ಎಂಬ ಭಾವನೆ ಅವರಲ್ಲಿದೆ.. ಕಳಸ ಕೀಳುವ ಈ ರೋಚಕ ಕ್ರಿಯೆ ಕೆಲವೇ ನಿಮಿಷಗಳಲ್ಲಿ ಮುಗಿದು ಹೋಗುತ್ತದೆ. ಕಟ್ಟಿದ್ದ ಕಾರೆಮುಳ್ಳು, ಬಾರೆಮುಳ್ಳು, ಎರದಕಳ್ಳೆ ಮುಳ್ಳಿನ ರಾಶಿಯ ಅಡಿಯಲ್ಲಿ ದೇವರುಗಳನ್ನು ಮತ್ತು ಮುಳ್ಳಿನ ರಾಶಿಯ ತುದಿಯಲ್ಲಿ ಕಳಸ ಸ್ಥಾಪಿಸುವ ಹಾಗೂ ಕೀಳುವ ಸಂಪ್ರದಾಯ ಜಾತ್ರಾ ಪ್ರಧಾನ ಆಚರಣೆಗಳಲ್ಲಿ ಒಂದು. ಈ ಕಾರ್ಯಕ್ರಮ ನೋಡಲು ಜನ ಸಾಗರೋಪಾದಿಯಲ್ಲಿ ನೆರೆದಿರುತ್ತಾರೆ. ಬೆಂಗಳೂರು, ಮೈಸೂರು, ಬಳ್ಳಾರಿ, ದಾವಣಗೆರೆ, ತುಮಕೂರು ಜಿಲ್ಲೆಗಳಿಂದಲೂ ಭಕ್ತರು ಬಂದು ಸೇರುತ್ತಾರೆ. ನಂತರ ದೇವರ ಪೆಟ್ಟಿಗೆಗಳನ್ನು ವಸತಿ ದಿಬ್ಬದಿಂದ ಮೆರವಣಿಗೆಯ ಮೂಲಕ ಪುರ್ಲೆಹಳ್ಳಿಗೆ ಹೊತ್ತು ಸಾಗಿಸುತ್ತಾರ್ತೆ. ಅಲ್ಲಿ ಭಕ್ತರು ದೇವರಿಗೆ ಮಣೇವು ಹಾಕಿಸುತ್ತಾರೆ. ರೋಗ–ರುಜನ ಬಾರದಿರಲೆಂದು, ನನ್ನನ್ನು ಕಾಪಾಡಲೆಂದು ದೇವರ ನೀರನ್ನು ಹಾಕಿಸಿಕೊಂಡು ದಿಂಡುರುಳಿನ ಸೇವೆಯನ್ನು ಅರ್ಪಿಸುತ್ತಾರೆ. ಈ ಎಲ್ಲಾ ಆಚರಣೆ ಮುಗಿದ ಮೇಲೆ ದೇವರುಗಳು ರಾತ್ರಿ ಎಂಟು ಗಂಟೆಗೆ ಚನ್ನಮ್ಮನಾಗತಿಹಳ್ಳಿಯ ಕ್ಯಾತೇದೇವರ ದೇವಸ್ಥಾನ ಸೇರುತ್ತವೆ. ರಾತ್ರಿ ದೇವರ ಮೆರವಣಿ ಮಾಡುತ್ತಾರೆ. ಉರುಮೆ ವಾದ್ಯದ ತಾಳಕ್ಕೆ ತಕ್ಕಂತೆ ಭಕ್ತರು ಕುಣಿಯುತ್ತಿರುತ್ತಾರೆ. ಬೆಳಗಿನ ಜಾವ ಐದು ಗಂಟೆ ನಂತ ಕರಿಕಂಬಳಿ ಗದ್ದುಗೆ ಹಾಸಿ ಪೆಟ್ಟಿಗೆ ದೇವರುಗಳನ್ನು ಪ್ರತಿಷ್ಠಾಪಿಸಿದ ನಂತರ ನವಣೆ ಅನ್ನದ ದಾಸೋಹ ನೆರವೇರುತ್ತದೆ. ಕಳಸ ಕಿತ್ತ ನಂತರದಲ್ಲಿ ಕಳ್ಳೆಮುಳ್ಳನ್ನು ಹರಾಜು ಹಾಕುತ್ತಾರೆ. ಕುರಿ ದನಗಳ ಸಾಕಾಣಿಕೆದಾರರು ರೊಪ್ಪ ಅಥವಾ ಕುರಿಹಟ್ಟಿಗೆ ಮತ್ತು ಹೊಲಕ್ಕೆ ಬೇಲಿ ಹಾಕಿಕೊಳ್ಳಲು ಕಳ್ಳೆಯನ್ನು ಹರಾಜು ಕೂಗಿ ಪಡೆಯುತ್ತಾರೆ. ಇದು ದೇವರ ಮೀಸಲು ಕಳ್ಳೆ ನಾವು ಪಡೆದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ.

### ಹುರುಳಿ ವ್ರತದ ಆಚರಣೆ ಮತ್ತು ಕಂಕಣ ಇಳಿಸುವುದು

ಕ್ಯಾತಪ್ಪನ ಜಾತ್ರಾ ಆಚರಣೆಗೆ ಆಗಮಿಸಿದ್ದ ಪರಿವಾರದ ದೇವರುಗಳು ಜಾತ್ರಾ ಆಚರಣೆಯ ಇಪ್ಪತ್ತೊಂಬತ್ತನೆಯ ದಿನ ತಮ್ಮ ತಮ್ಮ ಊರುಗಳನ್ನು ತಲುಪುತ್ತವೆ. ಆ ದಿನ ಬುಧವಾರ ರಾತ್ರಿ ಹದಿಮೂರು ಗುಡಿಕಟ್ಟಿನ ವ್ಯಾಪ್ತಿಯ ದೇವಸ್ಥಾನಗಳಲ್ಲಿ ಹುರುಳಿ ಧಾನ್ಯವನ್ನು ಬೇಯಿಸಿ, ಗುರುವಾರ ಕಾಳುಗಳನ್ನು ಒರಳಲ್ಲಿ ಕುಟ್ಟಿ ತಕ್ಕು(ಹೂರಣ)

ತಯಾರಿಸಿ ಆ ದಿನ ಸಂಜೆ ದೇವರಿಗೆ ನೈವೇದ್ಯ ಮಾಡಿ ಅರ್ಪಿಸುತ್ತಾರೆ. ಇದು ಒಂದು ರೀತಿಯ ಅಪರೂಪದ ಆಚರಣೆಯಾಗಿದೆ. ಇದನ್ನು 'ಹುರುಳಿ ವಸಲು'(ಹುಳ್ಳಿವಸ್ಲು), ಹುರುಳಿವ್ರತ ಅಳಿಯುವುದು ಅಥವಾ ಮರಿಪರಿಷೆ ಎಂತಲೂ ಕರೆಯುತ್ತಾರೆ.

**ಮರಿಪರಿಷೆ**

ಮರಿಪರಿಷೆ ಎಂದರೆ ಚಿಕ್ಕ ಪರಿಷೆ, ಹಬ್ಬ, ಆಚರಣೆ ಎಂದರ್ಥ. ಜಾತ್ರಾ ಆಚರಣೆ ಅಂತ್ಯಗೊಳ್ಳುವ ಇಪ್ಪತ್ತೊಂಬನೆ ದಿನ ಗುರುವಾರ ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯ ಕ್ಯಾತೇದೇವರ ದೇವಸ್ಥಾನದ ಹೊರ ಭಾಗದಲ್ಲಿ ಸಗಣಿಯಿಂದ ನೆಲ ಸಾರಿಸುತ್ತಾರೆ. ದೇವರ ಗುಡಿ ಮುಂದೆ ಏಳೆಂಟು ಅಡಿ ಅಗಲ, ನಾಲ್ಕೈದು ಅಡಿ ಉದ್ದದ ಜಾಗದಲ್ಲಿ ಕಳ್ಳಿಗೂಟ ನೆಡೆಸಿ ಆ ಗೂಟದ ಸುತ್ತಲೂ ತುಗ್ಗಲಿ, ಕಾರೇ ಮೋರುಗಳಿಂದ ಚಿಕ್ಕಗುಡಿ ನಿರ್ಮಿಸಿ ಅದರ ಮೇಲೆ ಕಾರೆ, ಕವಳಿ ಮುಳ್ಳುಕಳ್ಳಿಗಳನ್ನು ಹಾಕಿ ಬಾರೆಕಳ್ಳಿ ರೆಂಬೆಗಳನ್ನು ಹೊದಿಸುತ್ತಾರೆ. ಆ ಗುಡಿಯೊಳಗೆ ಬಸವನ ಕಂಚಿನ ವಿಗ್ರಹ(ಪ್ರತಿಮೆ)ಯನ್ನು ಗುಡಿಯೊಳಗೆ ಪ್ರತಿಷ್ಠಾಪನೆ ಮಾಡುತ್ತಾರೆ. ಬಿದಿರಿನ ಪುಟ್ಟಿಯಲ್ಲಿಟ್ಟ ಕಂಚಿನ ಪಂಚಕಳಸಗಳು, ಘಂಟೆ,ಧೂಪದಾರತಿ, ಆರತಿ ತಟ್ಟೆ ಮತ್ತು ಏಳೆಂಟು ಒನಕೆ ಮತ್ತು ಮೂರ್ನಾಲ್ಕು ಅಡಿ ಉದ್ದದ ಕಡೆಗೋಲು ಇಟ್ಟು ಪೂಜಿಸುತ್ತಾರೆ. ನವಣೆಯಿಂದ ತಯಾರಿಸಿದ ಹಿಟ್ಟನ್ನು ಮಣ್ಣಿನ ಒರಳಿನಲ್ಲಿ ಹಾಕಿ ಒನಕೆಯಿಂದ ಕುಟ್ಟುವ ಶಾಸ್ತ್ರ ಮಾಡುತ್ತಾರೆ. ಹೊಸ ಬಿದಿರಿನ ಮೊರದಲ್ಲಿ ಹುರುಳಿ ಮತ್ತು ನವಣೆ ಹಿಟ್ಟನ್ನು ತುಂಬಿಕೊಂಡು ಮೂರು ಮೂರು ಬಾರಿ ಬಸವನ ವಿಗ್ರಹ ಹಾಗೂ ಕಳಸದ ಚೆಂಬುಗಳಲ್ಲಿ ಹಾಕಿ ಪುನಃ ಒರಳಿಗೆ ಹಾಕಿ ಮತ್ತೇ ಮೂರು ಬಾರಿ ಇಷ್ಟಿಷ್ಟು ಮೊರಕ್ಕೆ ಹಾಕಿಕೊಳ್ಳುವ ಶಾಸ್ತ್ರ ಮಾಡುತ್ತಾರೆ.

ಚಳ್ಳಕೆರೆ ಕಾಟಪ್ಪನಹಟ್ಟಿ ಮತ್ತು ಬಂಜಗೆರೆಯಿಂದ ತಂದಿದ್ದ ಮೀಸಲು ಹಾಲು–ಮೊಸರನ್ನು ಮಣ್ಣಿನ ಹೊಸ ಸೋರೆಗೆ ಸುರಿದು ಪೂಜೆ ಮಾಡಿ ಆಸದ ನಾರಿನ ಹಗ್ಗವನ್ನು ಕಡೆಗೋಲಿಗೆ ಕಟ್ಟಿ ಪೂಜಾರಿ ಮನೆತನದ ಹೆಣ್ಣುಮಕ್ಕಳು ಮೊಸರು ಕಡೆಯುತ್ತಾರೆ. ದೇವಸ್ಥಾನದ ಆವರಣದಲ್ಲಿ ಒಲೆ ಹೂಡಿ ತಾಮ್ರದ ಎರಡು ಹಂಡೇ(ಪಾತ್ರೆ)ಗಳಲ್ಲಿ ಮೀಸಲು ಹರುಳಿ ಕಾಳನ್ನು ಬೇಯಿಸಿ ಆ ಕಾಳುಗಳನ್ನು ಒರಳಿಗೆ ಹಾಕಿ ಹೆಂಗಸರು ಕುಟ್ಟಿ ಹುರುಳಿಹೂರಣ(ತಕ್ಕು)ವನ್ನು ತಯಾರಿಸುತ್ತಾರೆ. ಆ ಪ್ರಸಾದವನ್ನು ಮೊದಲಿಗೆ ನೆಂಟಸ್ಥರಿಗೆ ಇಟ್ಟು ಆಮೇಲೆ ಅವರುಗಳು ಸ್ವೀಕಾರ ಮಾಡುತ್ತಾರೆ. ಆ ಹುರಳಿ ಹೂರಣಕ್ಕೆ ಬೆಲ್ಲದ ಪಾನಕ, ಬಾಳೆಹಣ್ಣು ಮಿಶ್ರಣ ಮಾಡಿ ಹಾಲು ಮೊಸರಿನ ನೈವೇಧ್ಯ ಮಾಡಿ ದೇವರಿಗೆ ಅರ್ಪಿಸುವುದರ ಮೂಲಕ ವಿಶೇಷ ಪೂಜೆ ಸಲ್ಲಿಸುತ್ತಾರೆ.

ಹುರುಳಿ ಹೂರಣದ ನೈವೇದ್ಯ ಸ್ವೀಕರಿಸುವುದರ ಮೂಲಕ ಜಾತ್ರೆ ಆರಂಭದಲ್ಲಿ ಹಿಡಿದಿದ್ದ ಹುರಳಿ ವ್ರತವನ್ನು ಅಳಿಯುತ್ತಾರೆ. ಅಂದಿನಿಂದ ಆರೇಳು ತಿಂಗಳು ಹುರುಳಿ ಮತ್ತು ನವಣೆಯನ್ನು ಸ್ವೀಕಾರ ಮಾಡುತ್ತಾರೆ. ಮಾರನೆ ದಿನ ಬೆಳಿಗ್ಗೆ ಕೇತೇದೇವರನ್ನು ಪ್ರತಿಷ್ಠಾಪಿಸಿದ ಬೊಮ್ಮಣ್ಣನ ಪ್ರತಿನಿಧಿ ಬೊಮ್ಮನಗೌಡನಿಗೆ ಹುರುಳಿ ಹೂರಣ–ನವಣೆ ನೈವೇಧ್ಯವನ್ನು ಬಿಳಿಬಟ್ಟೆಯಲ್ಲಿ ಆತನ ಮಡಿಲಿಗೆ ಕಟ್ಟಿ ನೀರಿನ ಸೇಳೇವು ಕೊಡುವುದರ ಮೂಲಕ ಊರಿನ ವಕ್ಕಲು ಮಕ್ಕಳೆಲ್ಲರು ಆತನನ್ನು ಊರ ಹುದಿಬಾಗಿಲವರೆಗೆ ಕಳುಹಿಸಿ ಕೊಡುತ್ತಾರೆ. ಹದಿಮೂರು ಗುಡಿಕಟ್ಟಿನ ಗೌಡ ಹಾಗೂ ಪೂಜಾರಿಗಳು ಸಭೆ ಸೇರಿ ಜಾತ್ರೆಗೆ ಸಂಬಂಧಿಸಿದ ಖರ್ಚು–ವೆಚ್ಚ, ಲಾಭ ನಷ್ಟದ ಬಗ್ಗೆ ಕುರಿತು ಚರ್ಚಿಸುತ್ತಾರೆ.

**ಮಹಾ ಮಂಗಳಾರತಿ**

ಮುವತ್ತನೆ ದಿನ ಶುಕ್ರವಾರ ಬೆಳಿಗ್ಗೆ ಹದಿಮೂರು ಗುಡಿಕಟ್ಟಿನ ಪ್ರಮುಖ ಕಟ್ಟೆಮನೆಯಾದ ಚನ್ನಮ್ಮನಾಗತಿಹಳ್ಳಿಯಲ್ಲಿ ದೇವರ ಒಕ್ಕಲಿನವರೆಲ್ಲರೂ ಸಭೆ ಸೇರಿ ಮಾತುಕತೆ ನಡೆಸಿದ ನಂತರ ಗೌಡರಿಂದ ಒಪ್ಪಿಗೆ ಪಡೆದು ಪಟ್ಟದ ಪೂಜಾರಿ ಜಾತ್ರೆ ಆರಂಭದಲ್ಲಿ ದೇವರಿಗೆ ಕಟ್ಟಿದ್ದ ಕಂಕಣವನ್ನು ಬಿಚ್ಚುತ್ತಾನೆ. ಮಹಾ ಮಂಗಳಾರತಿಯ ನಂತರ ಭಕ್ತರು ತೀರ್ಥ ಪ್ರಸಾದವನ್ನು ಸ್ವೀಕರಿಸಿ, ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ. ಹೀಗೆ ದೇವರ ಮಹಾ ಮಂಗಳಾರತಿ ಕಾರ್ಯದೊಂದಿಗೆ ಜಾತ್ರೆ ಅಂತ್ಯಗೊಳ್ಳುತ್ತದೆ. ಇದುವರೆಗೂ ಜಾತ್ರೆಯಲ್ಲಿ ನೋಡಿದ ಎಲ್ಲಾ ಆಚರಣೆಗಳು ತನ್ನದೇ ಆದ ಪ್ರಾದೇಶಿಕ ಹಿನ್ನಲೆಯನ್ನು ಹೊಂದಿದ್ದು ಆಯಾಯ ಪ್ರಾದೇಶಿಕತೆಯ ಕೆಲವು ಪ್ರಮುಖ ವಿಶೇಷ ಅಂಶಗಳನ್ನೊಳಗೊಂಡು ಪ್ರಖ್ಯಾತಿಯನ್ನು ಪಡೆದಿವೆ. ಇನ್ನು ಕೆಲವು ಆಚರಣೆಗಳು ಅಲ್ಲಲ್ಲಿ ಕಂಡುಬಂದರೂ ಎಲ್ಲೋ ಕೆಲವು ಕಡೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಾಗಿರುವುದನ್ನು ಕಾಣಬಹುದಾಗಿದೆ.

ಕ್ಯಾತೇದೇವರ ಜಾತ್ರೆ ಸಾಂಸ್ಕೃತಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ. ಪ್ರಾಕೃತಿಕ ಸಂಪತ್ತು, ವಾಯುಗುಣ, ಜನ ಜೀವನದ ಮೇಲೆ ಅನೇಕ ಪ್ರೇರಣೆ ಮತ್ತು ಪ್ರಭಾವವನ್ನು ಅದು ಬೀರಿದೆ. ಜಾತ್ರೆ ಯಾವುದೇ ಸ್ಥಳದಲ್ಲಿ ನಡೆದರೂ, ಸಾಮಾನ್ಯವಾಗಿ ಅದು ಕೇವಲ ಒಂದು ಜಾತಿ ಜನಾಂಗದವರಿಂದ ನಡೆಯುವುದಿಲ್ಲ. ಬದಲಾಗಿ ವಿವಿಧ ಜಾತಿ ಜನಾಂಗದವರೆಲ್ಲರೂ ಸೇರಿ ಜಾತ್ರೆ ನಡೆಸುತ್ತಾರೆ. ಆದರೆ ಬುಡಕಟ್ಟು ಸಂಸ್ಕೃತಿಯ ಕೇತೇದೇವರ ಜಾತ್ರಾ ಆಚರಣೆ ಒಂದೇ ಸಮುದಾಯದ ಕೆಲವೇ ಬೆಡಗಿನವರು ಸೇರಿ ಆಚರಿಸಿದರೂ, ಇಲ್ಲಿ ಎಲ್ಲಾ ಬೆಡಗಿನವರು, ವಿವಿಧ ಜಾತಿ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುವುದು ವಿಶೇಷ. ಏಕೆಂದರೆ ಒಂದೇ ಸಮುದಾಯದ ಒಳಗೆ ಹಲವು ಬೆಡಗುಗಳಿರುತ್ತವೆ. ಜಾತಿಗೂ ಒಂದೊಂದು ಸಂಸ್ಕೃತಿ ಇದ್ದಂತೆ, ಒಂದೊಂದು

ಬೆಡಗಿಗೂ ತನ್ನದೇ ಆದ ವೈಶಿಷ್ಟ್ಯತೆ ಇರುತ್ತದೆ. ಆದ್ದರಿಂದ ಜಾತ್ರೆಯನ್ನು ಎಲ್ಲಾ ಸಂಸ್ಕೃತಿಯವರು ಸಹಕಾರ ಮತ್ತು ಸಹ ಬಾಳ್ವೆಯಿಂದ ನಡೆಸುವುದರ ಮೂಲಕ ಸಂಸ್ಕೃತಿ ಸಂಗಮ ಏರ್ಪಡುತ್ತದೆ. ಸಾಮಾಜಿಕ ಸೌಹಾರ್ದತೆ ಸ್ನೇಹತ್ವದ ನೆಲೆಯೂ ರಚನೆಗೊಂಡಿರುವುದರ ಮೂಲಕ ಈ ಬುಡಕಟ್ಟು ಸಂಸ್ಕೃತಿಯ ಜಾತ್ರೆ ತನ್ನ ಮಹತ್ವವನ್ನು ಇಂದಿಗೂ ಉಳಿಸಿಕೊಂಡಿರುವುದು ವಿಶೇಷವೆನ್ನಬಹುದು. ಹೀಗೆ ಜನಪದರು ತಮ್ಮ ಬದುಕಿನಲ್ಲಿ ಮಾನಸಿಕ ನೆಮ್ಮದಿಗಾಗಿ ಇಂತಹ ಆಚರಣೆ ಸಂಪ್ರದಾಯಗಳನ್ನು ಅಳವಡಿಸಿಕೊಂಡಿದ್ದಾರೆ. ಇವುಗಳನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅವಲೋಕಿಸಿದಾಗ ಮೌಢ್ಯತೆ, ಅಂಧಾನುಕರಣೆ, ಮೂಢನಂಬಿಕೆಯ ಅಂಶಗಳು ಕಂಡುಬಂದರೂ ಇವುಗಳ ಅನುಷ್ಠಾನದಿಂದ ಜನಪದ ಜೀವನದಲ್ಲಿ ಆತ್ಮತೃಪ್ತಿ ಕೊಡು–ಕೊಳ್ಳುವಿಕೆ, ಸಹ ಬಾಳ್ವೆಯ ಜೀವನ ನಡೆಸಲು ಇಂಥ ಜಾತ್ರೆಗಳು ಪೂರಕವಾದ ಅಂಶಗಳನ್ನು ಒದಗಿಸುತ್ತವೆ.

**ಕಳ್ಳೆ ಮುಳ್ಳಿನ ಪ್ರಿಯ ಕ್ಯಾತಪ್ಪನ ಗುಡಿ ನಿರ್ಮಾಣದ ವಿಶಿಷ್ಟತೆ**

ಪುರ್ಲೆಹಳ್ಳಿ ಬಳಿ ಕ್ಯಾತೇದೇವರ ಮುಳ್ಳಿನ ಗುಡಿ ನಿರ್ಮಿಸಲು ಮಾರ್ಘಶಿರ ಮಾಸ ವಾಗಿಯ ಚಳಿ ಬೆಳಗಿನ ಜಾವ ವಸತಿ ದಿಬ್ಬದಲ್ಲಿ ಸುಮಾರು ಎರಡು ಕಿ.ಮೀ.ದೂರದವರೆಗೂ ಉರುಮೆ ಸದ್ದು, ಜನರ ಶಿಳ್ಳು, ಕೇಕೆ, ಕೂಗು, ಗದ್ದಲ, ಗಲಾಟೆ ಕೇಳಿಬರುತ್ತದೆ. ಮುಳ್ಳುಗಳಿಂದ ಕೈ, ಮೈ ಪರಚಿಕೊಂಡರು ಅರಿವಿಲ್ಲ ಎಂಬತೆ ಭಕ್ತರು, ತರಾ ತುರಿಯಲ್ಲಿ  ಕವಳಿ, ಕಾರೆ, ಬಾರೆಕಳ್ಳೆ ಮುಳ್ಳಿನ ಉದ್ದುದ್ದದ ರೆಂಬೆ, ಕೊಂಬೆಗಳನ್ನು ಹಿಡಿದಿಡಿದು ಎಳೆದು  ಬರೀಗಾಲಲ್ಲಿ ಓಡೋಡಿ ಗುಡಿಯ ಮೇಲಕ್ಕೆ ಆವೇಶದಿಂದ ಎಸೆದು ಗುಡಿ ನಿರ್ಮಾಣ ಮಾಡುತ್ತಾರೆ. ಇದು ಸಾಹಸಮಯ ಕೆಲಸವಾದರೂ, ಪವಾಡ ಸದೃಶ್ಯವೆಂಬಂತೆ ಕೆಲವೇ ಕೆಲವು ಕ್ಷಣದಲ್ಲಿ ಸುಮಾರು ಇಪ್ಪತ್ತು ಅಡಿ ಎತ್ತರದ ಗುಡಿ ನಿರ್ಮಾಣಗೊಳ್ಳುತ್ತದೆ.

ತಕ್ಷಣ ಅಕ್ಕಳಬಾವಿಯ ತಣ್ಣೀರಿನಲ್ಲಿ ಮಿಂದು ಈರಗಾರರಿಬ್ಬರು ಪೂಜಾರಿ ಕೊಟ್ಟ ಕಂಚಿನ ಕಳಸಗಳನ್ನು ಕರಿಕಂಬಳಿಯಲ್ಲಿ ಇಟ್ಟುಕೊಂಡು ತದೇಕ ಚಿತ್ತದಿಂದ ಉತ್ಸಾಹದಿಂದ ನಾ ಮುಂದು ತಾ ಮುಂದು ಎಂದು ಮುಳ್ಳಿನಗುಡಿ ಹತ್ತಿ ಭಕ್ತಿಯಿಂದ ಕಳಸ ಪ್ರತಿಷ್ಠಾಪಿಸುತ್ತಾರೆ. ಅಪ್ಪಟ ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಈ ಜನರಲ್ಲಿ ಪರಸ್ಪರ ಹೊಂದಾಣಿಕೆ, ಪ್ರೀತಿ, ಸೌಹಾರ್ಧ ಹಾಗೂ ಸಹಕಾರದ ಜೊತೆಗೆ ಒಗ್ಗಟಿನ ಪ್ರದರ್ಶನವೂ ಈ ಜಾತ್ರೆಯಲ್ಲಿ ಕಂಡು ಬರುತ್ತದೆ. ಸುಮಾರು ಒಂದು ವಾರದ ಕಾಲ ನಿರ್ಮಾಣ ಮಾಡಬೇಕಾದ ಕಳ್ಳೆ ಮುಳ್ಳಿನ ಗುಡಿಯನ್ನು ಗಂಟೆಯೊಳಗೆ ಪೂರ್ಣಗೊಳಿಸುತ್ತಾರೆ. ಈ ಕಳ್ಳೆ ಮುಳ್ಳಿನ ಆಚರಣೆಯ ಮೂಲಕ ಈ ಸಮುದಾಯ ತನ್ನ ಬುಡಕಟ್ಟು ಸಂಸ್ಕೃತಿಯ ಜೀವಂತಿಕೆಯನ್ನು ಸದಾ ಕಾಪಿಟ್ಟುಕೊಂಡು ಬಂದಿದೆ.

ನಿಜವಾದ ಜಾತ್ರಾ ಆಚರಣೆಯೆಂದರೆ ಕಳ್ಳೆ ಮುಳ್ಳಿನ ಗುಡಿ ನಿರ್ಮಾಣದ ಕಾರ್ಯ. ಈ ಕ್ರಿಯೆ ರೋಚಕವಾಗಿದ್ದು ಅಲ್ಲದೆ, ನೋಡುಗರಲ್ಲಿ ರೋಮಾಂಚನವನ್ನುಂಟು ಮಾಡುತ್ತದೆ. ಈ ದೃಶ್ಯ ನೋಡಲು ಕೊರೆಯುವ ಚಳಿಯಲ್ಲಿಯೇ ಅಪಾರ ಸಂಖ್ಯೆಯ ಭಕ್ತ ಸಮೂಹವೇ ವಸತಿ ದಿಬ್ಬದಲ್ಲಿ ನೆರೆದಿರುತ್ತದೆ. ನಿರ್ಮಾಣಗೊಂಡ ಕಳ್ಳೆ ಮುಳ್ಳಿನ ಗುಡಿ ನೋಡಿದರೆ ಥೇಟ್ ಪಿರಾಮಿಡ್ ಆಕಾರದಲ್ಲಿರುತ್ತದೆ. "ಪೂರ್ವಜರ ಆತ್ಮಗಳು ಅಂದರೆ ಅತಿಮಾನುಷ ಶಕ್ತಿಗಳು ಆಗಾಗ ಅತಿ ಎತ್ತರದ ಗುಡಿಯೊಳಗೆ ಬಂದು ಹೋಗುತ್ತಿದ್ದರು ಎನ್ನುವ ಎರಿಕ್ ವೋನ್ ಡಾನಿಕನ್‌ರವರ ಕಾಲ್ಪನಿಕ ಚಿಂತನೆಯಂತೆ"[೧೧] ಸಾಂಸ್ಕೃತಿಕ ವೀರ ಕೇತಪ್ಪನ ಆತ್ಮಶಕ್ತಿಯ ದೈವೀಗುಣ ನಮ್ಮೆಲ್ಲರನ್ನು ರಕ್ಷಿಸುತ್ತದೆ ಎನ್ನುವ ನಂಬಿಕೆಯಿಂದ ಪ್ರತಿ ವರ್ಷ ಕಾಡುಗೊಲ್ಲ ಬುಡಕಟ್ಟಿನವರು ಆಚರಿಸುವ ಕೇತಪ್ಪನ ಕಳ್ಳೆ ಮುಳ್ಳಿನ ವಿಶಿಷ್ಟ ಆಚರಣೆ ಸಂಶೋಧನೆಗೆ ತಾತ್ವಿಕತೆ ಯನ್ನು ಒದಗಿಸುತ್ತದೆ.

**೬.೪ ಜಾತ್ರೆಯ ವರ್ತಮಾನದ ತಲ್ಲಣಗಳು, ಸವಾಲುಗಳು ಮತ್ತು ಪರಿಹಾರಗಳು**

ಯಾವುದೇ ಒಂದು ಜಾಪದೀಯ ಅಧ್ಯಯನ ಕೈಗೊಂಡಾಗ ಅದನ್ನು ಸಮಾಕಾಲೀನತೆಯೊಂದಿಗೆ ತುಲನಾತ್ಮಕವಾಗಿ ನೋಡದೇ ಹೋದರೆ ಅದು ಅರ್ಥವಿಲ್ಲದ ಅಧ್ಯಯನವಾಗುತ್ತದೆ. ಆಧುನಿಕತೆಯ ಆಕರ್ಷಣೆ, ಅಭಿರುಚಿ ಮತ್ತು ಆಸಕ್ತಿ ವಿಧಿ ವಿಧಾನಗಳಲ್ಲೂ ಬದಲಾವಣೆಯಾಗುತ್ತಿರುವ ಸಂದರ್ಭದಲ್ಲಿ ಮಾನವನ ಬದುಕು ಹಾಗೂ ಜೀವನ ಶೈಲಿ ಬದಲಾವಣೆ ಹೊಂದುತ್ತಾ ಹೋಗುತ್ತದೆ. ಏಕೆಂದರೆ ಮಾನವನು ಹೊಸ ಹೊಸ ಅವಿಷ್ಕಾರಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳುತ್ತಾ ಪ್ರಸ್ತುತ ವಿದ್ಯಮಾನದ ವಿಚಾರಗಳಿಗೆ ತೆರೆದುಕೊಳ್ಳುತ್ತಾನೆ. ಅಲ್ಲದೆ ತನಗೆ ಗೊತ್ತಿಲ್ಲದ ಹಾಗೆ ವಿಜ್ಞಾನ-ತಂತ್ರಜ್ಞಾನಗಳ ಆವಿಷ್ಕಾರಗಳಿಗೆ ಒಳಗಾಗುತ್ತಿರುವುದಲ್ಲದೆ, ಮೋಜಿನ ಜೀವನಕ್ಕೆ ಶರಣನಾಗುತ್ತಿದ್ದಾನೆ. ಈಗಾಗಲೇ ತನ್ನ ಬದುಕಿನಲ್ಲಿ ರೂಢಿಸಿಕೊಂಡಿರುವ ಬದುಕಿನ ವಿಧಿ ವಿಧಾನಗಳ ಬದಲಾವಣೆಗೆ ಜಾಗತೀಕರಣವೂ ಕಾರಣವಾಗುತ್ತದೆ.

ಜಾಗತೀಕರಣ ಜಗತ್ತಿನ ಎಲ್ಲ ಕ್ಷೇತ್ರಗಳಲ್ಲಿಯೂ ತನ್ನ ಬಾಹುಳ್ಯವನ್ನು ವಿಸ್ತರಿಸಿಕೊಂಡಿರುವುದರಿಂದ ಯಾವುದೇ ಹೊಸದನ್ನು ಸ್ವೀಕರಿಸುವಾಗ ಅವು ಹೊಸ ರೂಪಗಳು ಪಡೆಯುತ್ತಿರುತ್ತವೆ. ಇದರಿಂದಾಗಿ ಬದಲಾವಣೆಯೂ ಸಹಜವಾಗಿಯೇ ಆಗುತಿರುತ್ತದೆ. ವರ್ತಮಾನದ ಬದುಕಿನ ಬದಲಾವಣೆಗೆ ಒಳಗಾಗುವ ಸಂದರ್ಭದಲ್ಲಿ ಮನುಷ್ಯ ಸಹಜವಾಗಿಯೇ ತನ್ನ ಕಣ್ಣಿಗೆ ಕಂಡದ್ದನ್ನು ಸ್ವೀಕರಿಸುತ್ತಾನೆ. ಕೆಲವೊಮ್ಮೆ ಮಂದಗತಿ, ಇನ್ನು ಕೆಲವೊಮ್ಮೆ ತೀವ್ರತರವಾಗಿ ಈ ಕ್ರಿಯೆ ಸಾಗುತ್ತಿರುತ್ತದೆ. ಹೀಗೆ ಜಾತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಆರ್ಥಿಕ ಜಿಜ್ಞಾಸೆಗೆ ಹೇಗೆ ಬೆಸೆದುಕೊಂಡಿದೆ ಎಂಬುವುದನ್ನು ಈ ಸಂಶೋಧನೆಯ ಮೂಲಕ ಕಾಣಬಹುದು.

"ಆಧುನಿಕತೆ ಅಥವಾ ಜಾಗತೀಕರಣ ಎಂಬ ಪದ ನಗರಕ್ಕೆ ಮಾತ್ರ ಸಂಬಂಧಿಸಿದ್ದು, ವಿದ್ಯಾವಂತರ ಹಾಗೂ ಶಿಷ್ಟರ ಜಗತ್ತಿಗೆ ಸೇರಿದ್ದ ಅದು ಪ್ರಗತಿಪರವಾದುದು, ವೈಜ್ಞಾನಿಕವಾದುದು, ವೈಚಾರಿಕವಾದುದು ಇವೆ ಮೊದಲಾದ ಅರ್ಥಗಳನ್ನು ಪಡೆದುಕೊಂಡಿದೆ. ಈ ಎಲ್ಲಾ ಅರ್ಥಗಳು ಒಂದಕ್ಕೊಂದು ಪರಸ್ಪರ ಪೂರಕವಾಗಿವೆ."[೧೨] ಈ ಎಲ್ಲಾ ಅರ್ಥಗಳು ಒಳಗೊಂಡ ವರ್ತಮಾನದ ಪರಿಕಲ್ಪನೆ ವಸಹಾತೀಕರಣ, ಕೈಗಾರಿಕರಣ ಮತ್ತು ನಗರೀಕರಣಗಳ ಜೊತೆಯಲ್ಲಿ ಭಾರತಕ್ಕೆ ಬಂದಿದ್ದರೂ ಭಾರತೀಯರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳಿಗೆ ತನ್ನ ಕ್ರಿಯಾಶೀಲತೆಯನ್ನು ಪ್ರದರ್ಶಿಸಲಾಗಿದೆ. ಆಧುನಿಕತೆಯನ್ನು ಹುಟ್ಟುಹಾಕಿದ ಜನರು, ದೇಶ ಬಿಟ್ಟು ಹೋದರೂ ಸಹ ಅದು ಬದುಕನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ತನಗೆ ಇಷ್ಟ ಬಂದಂತೆ ಆಟವಾಡಿಸುತ್ತದೆ ಎನ್ನುವುದು ಸ್ಪಷ್ಟವಾಗಿದೆ.

ಜಾಗತೀಕರಣವು ಜನಪದರ ಪ್ರಮುಖ ಸಂಸ್ಥೆಯಾದ ಸಡಗರದ ಆಚರಣೆಯಾದ ಜಾತ್ರೆಯ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರಿರುವುದನ್ನು ಕಾಣುತ್ತೇವೆ. ವರ್ತಮಾನದ ಪಲ್ಲಟದ ತೆಕ್ಕೆಗೆ ಸಿಲುಕಿದ ಮಾನವ ಸಂಕುಲ ಉಸಿರುಕಟ್ಟಿ ನಲುಗಿ ಹೋಗುತ್ತಿದೆ. ಮಾನವನು ದೇಶಿಯ ಕೃಷಿಯನ್ನು ಪ್ರಾರಂಭಿಸಿ ನಾಗರಿಕತೆ ಹೊಂದಿದ. ಕುಟುಂಬ, ಸಮೂಹ, ಸಮಾಜ ಕಲ್ಪನೆ ಮಾಡಿಕೊಂಡು ಒಂದೆಡೆ ನೆಲೆನಿಂತು ಬದುಕುತ್ತಾ, ಕೊಡು–ಕೊಳ್ಳುವಿಕೆಯ ನಡುವೆ ಮುಗ್ಧ ಧಾರ್ಮಿಕ ಭಕ್ತಿಯನ್ನು ಬೆಳೆಸಿಕೊಂಡನು. ಕಲ್ಲಿನಮೂರ್ತಿ, ಕಾಡು, ನಾಡು, ಗ್ರಾಮದೇವರು, ಧರ್ಮದೇವರು, ಕುಲದೇವರು, ಮನೆದೇವರು ಎಂದು ಕಲ್ಪಿಸಿಕೊಂಡು ದೇವರ ಆರಾಧನೆ ಪ್ರಾರಂಭಿಸಿ, ಕುಣಿತ, ಬಲಿ, ಪೂಜೆ ಮುಂತಾದ ವಿಧಿ–ವಿಧಾನಗಳನ್ನು ರೂಢಿಸಿಕೊಂಡನು.

ಜನಪದ ಎಂದರೆ ಒಂದು ಪ್ರತ್ಯೇಕತೆಯನ್ನು ಹೊಂದಿರುವಂತದ್ದು, ಜಾನಪದವೆಂದರೆ ಸಮಗ್ರತೆ, ಸಮಷ್ಠಿ ಪ್ರಜ್ಞೆ, ಹಿಡಿಯಾದುದು. ಜಾನಪದ ಎನ್ನವುದು ಮಾನವ ಸಮಾಜದ ಸಮಗ್ರ ಜೀವನದ ವಿಧಾನವೂ ಆಗಿದೆ. "ಮನುಷ್ಯನ ಬುದ್ಧಿಶಕ್ತಿ ಬೆಳೆದಂತೆಲ್ಲ ಜನಪದದ ಬೆಳವಣಿಗೆಯೂ ಬೆಳೆದು ಬಂದಿದೆ. ಹಾಗೆಯೇ 'ಸಂಸ್ಕೃತಿ' ಎಂದಾಗ ಎಲ್ಲಾ ಗುಣಗಳು ಅದರಲ್ಲಿ ಸೇರ್ಪಡೆಗೊಳ್ಳುತ್ತವೆ. ಸಂಸ್ಕೃತಿಯಲ್ಲಿ 'ಜಾತ್ರೆಗಳು' ಪ್ರಮುಖ ಭಾಗವಾಗಿ ಸೇರಿಕೊಂಡಿವೆ."[೧೩] ಜನಪದದ ಅಂಗಳದಲ್ಲಿ ಜರುಗುವ ಜಾತ್ರೆಗಳು ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿವೆ. ಜಾತ್ರೆಗಳು ಮೊದಲು ಧಾರ್ಮಿಕ ಆಚರಣೆಗಳ ಹಿನ್ನಲೆಯಲ್ಲಿ ನಡೆದು ನಂತರ ಜನ ಸಮ್ಮುಖವನ್ನು ಪಡೆದುಕೊಂಡವು. ಜಾತ್ರೆಗಳು ಭಯ, ಭಕ್ತಿ, ಸಡಗರ, ಸಂಭ್ರಮದ ಸಂಕೇತವಾಗಿ ಹುಟ್ಟಿಕೊಂಡು ಧಾರ್ಮಿಕ ಸಂಪ್ರದಾಯ ಆಚರಣೆಗಳು ಪರಂಪರೆಯಾಗಿ ಬೆಳೆದು ತಮ್ಮ ವಿಶಿಷ್ಟತೆಯ, ಅನನ್ಯ ಸಂಸ್ಕೃತಿಯನ್ನು ತೆರೆದಿಡುವ ಕೇಂದ್ರಗಳಾದವು.

ಓಕುಳಿ ಆಡುವುದು, ಕಳ್ಳೆತುಳಿಯುವುದು, ಮಣೇವು ಆಡುವುದು, ಕುಣಿಸುವುದು, ತೇರು ಎಳೆಯುವುದು, ದೇವರ ಪೆಟ್ಟಿಗೆಗಳ ಮೆರವಣಿಗೆ ಹೀಗೆ ವಿಭಿನ್ನ ರೀತಿಯಲ್ಲಿ ಈ ಜಾತ್ರೆಗಳು ಜರುಗುವುದು ಕಂಡು ಬರುತ್ತದೆ. ಇವೆಲ್ಲವೂ ಗ್ರಾಮದ ಮುಖಂಡನ ನೇತೃತ್ವದಲ್ಲಿ ಜರುಗಲು ಪ್ರಾರಂಭವಾದವು. ಆದರೆ ಇಂದು ಜಾತ್ರೆ ವ್ಯವಸ್ಥೆಗೊಳಿಸುವ, ಆಯೋಜಿಸುವ ಹಾಗೂ ಆಚರಿಸುವ ವಿಧಿ-ವಿಧಾನಗಳು ಭಿನ್ನವಾಗ ತೊಡಗಿವೆ. ಕೆಲವೊಂದು ಜಾತ್ರೆಗಳನ್ನು ಸರ್ಕಾರವೇ ಖುದ್ದಾಗಿ ವ್ಯವಸ್ಥೆಗೊಳಿಸುತ್ತದೆ. ಧಾರ್ಮಿಕ ಮುಖ್ಯಸ್ಥರ ಸಲಹೆ, ಮಾರ್ಗದರ್ಶನದ ಅನುಸಾರವಾಗಿ ಅವು ರೂಪಿತಗೊಳ್ಳುತ್ತವೆ. ಬುಡಕಟ್ಟು ಸಮುದಾಯದ ಆರಾಧ್ಯ ದೈವ ಕೇತಪ್ಪನ ಜಾತ್ರೆ ಇವೆಲ್ಲವಕ್ಕಿಂತಲೂ ಭಿನ್ನ. ಏಕೆಂದರೆ ವರ್ತಮಾನದ ಬದುಕಿನಲ್ಲಿ "ಬುಡಕಟ್ಟು ದೈವಗಳ ಜಾತ್ರೆಗಳು ನಿಜವಾದ ಅರ್ಥದಲ್ಲಿ ಹೇಳುವುದಾದರೆ ಅವು ಜನಪದೇತರ ಸಂಸ್ಕೃತಿಯನ್ನು ಬಿಂಬಿಸುತ್ತಿವೆ."[೧೪]

ಇತ್ತೀಚೆಗೆ ಆಧುನಿಕತೆಯ ಪರಿಣಾಮವಾಗಿ ಜಾತ್ರೆ ಮತ್ತು ಅವುಗಳ ಆಚರಣೆಗಳು ಸಡಿಲಗೊಂಡಿವೆ. ಜನಪದ ಹಾಡು, ಸೋಬಾನೆ ಪದಗಳು ಮತ್ತು ಮಂಗಳಾರತಿ ಪದಗಳ ಬದಲಿಗೆ ಸಂಸ್ಕೃತದ ಮಂತ್ರಗಳು ಕಿವಿ ಮೇಲೆ ಬೀಳುತ್ತಿವೆ. ತುಪ್ಪದ ಬದಲಿಗೆ ಎಣ್ಣೆಯ ಬಳಕೆ ಮಾಡುವುದರಿಂದ ಜನಪದ ಪೂಜಾವಿಧಾನ ಬದಲಾಗಿದೆ. ಕಾಯಿದೆ-ಕಾಸಿನ ಪರಿಣಾಮ ಮತ್ತು ಮೇಲ್ವರ್ಗದ ಹೇರಿಕೆ ಸಂಸ್ಕೃತಿಯಿಂದಾಗಿ ಕುರಿ,ಕೋಳಿ, ಕೋಣಗಳಿಗೆ ಬದಲಾಗಿ ತೆಂಗಿನ ಕಾಯಿ, ಬಾಳೆಹಣ್ಣು, ಮೃಷ್ಟಾನ್ನಬೋಜನ ಇತ್ಯಾದಿಗಳನ್ನು ದೇವರಿಗೆ ನೈವೇಧ್ಯವಾಗಿ ಇಡಲಾಗುತ್ತಿದೆ. ಕಂಚು, ತಾಮ್ರ ಹಾಗೂ ಹಿತ್ತಾಳೆ ಲೋಹದ ಅಭರಣದ ಬದಲಾಗಿ ಬೆಳ್ಳಿ ಬಂಗಾರದ ಒಡವೆಗಳು ದೈವಗಳ ಮೇಲೆ ರಾರಾಜಿಸುತ್ತಿವೆ. ಹುಲ್ಲಿನ ಗುಡಿ(ಗುಬ್ಬ)ಯ ಬದಲಾಗಿ ಕಲ್ಲು, ಸಿಮೆಂಟಿನಿಂದ ಶಿಲ್ಪಿಗಳು ಕಟ್ಟಿದ ವಾಸ್ತು ಪ್ರಕಾರದ ಗರ್ಭಗುಡಿಗಳು ತಲೆ ಎತ್ತಿವೆ. ಕಳ್ಳೆ ಮುಳ್ಳಿನ ಬೇಲಿಯ ಬದಲಿಗೆ ಕಲ್ಲಿನ ಕಾಂಪೌಂಡ್‌ಗೋಡೆ ನಿರ್ಮಾಣಗೊಂಡಿವೆ. ದೀಪ ಮತ್ತು ಪಂಜಿನ ಬೆಳಕಿನಲ್ಲಿ ನಡೆಮುಡಿಯ ಮೇಲೆ ಸಾಗುತ್ತಿದ್ದ ಮೆರವಣಿಗೆಗಳು ಇಂದು ಕಣ್ಮನ ಸೆಳೆಯುವ ವಿದ್ಯುತ್‌ದೀಪಗಳ ಅಲಂಕಾರಗಳೊಂದಿಗೆ ಟಾರ್ ರಸ್ತೆಯ ಮೇಲೆ ಅತ್ಯಂತ ವೈಭವದಿಂದ ಸಾಗತೊಡಗಿವೆ. ಮಣ್ಣಿನ ಮಡಿಕೆ ಕುಡಿಕೆಗಳಿಂದ ಕೂಡಿದ ಜಾತ್ರೆಗಳೂ ಸಹ ಕಾಲ ಕ್ರಮೇಣ ವಾಣಿಜ್ಯ ಸ್ವರೂಪವನ್ನು ಪಡೆದುಕೊಂಡಿವೆ. ಜನಸಂಖ್ಯೆಗೆ ತಕ್ಕಂತೆ ಜಾತ್ರೆ, ಉತ್ಸವ, ಪುರಾಣಗಳು, ಪ್ರವಚನಗಳು ಇತ್ಯಾದಿಗಳು ಆರಂಭವಾಗಿ ಶಿಷ್ಟ ಆಚರಣೆಗಳನ್ನು ಮೈಗೂಡಿಸಿಕೊಂಡಿರುವುದನ್ನು ಕಾಣಬಹುದು. ಸಾಂಸ್ಥಿಕ ಆಚರಣೆಯೊಂದು ನಾನಾ ಕಾರಣಗಳಿಂದ ತುಂಬಾ ಪ್ರಸಿದ್ಧಿ ಪಡೆದುಕೊಂಡಾಗ ಆ ದೇವರು ಒಂದು ಗ್ರಾಮದ ದೇವರಾಗಿಯೇ ಉಳಿಯಲು ಸಾಧ್ಯವಾಗುವುದೇ ಇಲ್ಲ. ಒಂದು ವೇಳೇ ಆ ದೇವರು

ಮೂಲ ಸ್ವರೂಪದಲ್ಲೇ ಉಳಿದಿದ್ದಾರೆ ಪ್ರಸ್ತುತದಲ್ಲಿ ಅದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವ ಸಂದರ್ಭ ಒದಗುತ್ತದೆ. ಇದಕ್ಕೆ ಬದಲಾಗಿ ಶಕ್ತಿ ಮತ್ತು ಪವಾಡಗಳನ್ನು ಸೃಷ್ಟಿಸಿಕೊಂಡು ಪ್ರಸಿದ್ಧಿಗೆ ಬರುವ ಪ್ರಯತ್ನ ಮಾಡುತ್ತದೆ. ಅಪ್ಪಟ ಬುಡಕಟ್ಟು ಸಂಸ್ಕೃತಿಯ ದೈವ ಕೇತಪ್ಪನಿಗೂ ಇದೇ ಸ್ಥಿತಿಯಾಗಿದೆ. ಆಧುನೀಕರಣದ ಹಿನ್ನೆಲೆಯಲ್ಲಿ ಜಾತ್ರೆಯ ಆಚರಣೆ, ಸಂಪ್ರದಾಯ, ಆಚಾರ-ವಿಚಾರಗಳೆವೂ ಸ್ಥಿತ್ಯಂತರವಾಗುತ್ತಿರುವುದನ್ನು ನಾವಿಂದು ಕಾಣುತ್ತಿದ್ದೇವೆ.

ದೈವಗಳು ಭಕ್ತರ ಕೋರಿಕೆಗಳನ್ನು ಸಕಾಲದಲ್ಲಿ ಈಡೇರಿಸದಿದ್ದರೆ ಆ ವಿಷಯದಲ್ಲಿ ಅವು ಸೋತರೆ ಬೆಲೆಯನ್ನು ಕಳಕೊಂಡು ಹೆಸರಿಲ್ಲದಂತಾಗುತ್ತವೆ.ಒಂದು ವೇಳೆ ಅಂದುಕೊಂಡ ಕಾರ್ಯ ಕೈಗೂಡಿದರೆ ಅಂದರೆ ಹರಸಿಕೊಂಡ ರಾಜಕೀಯ ಪಕ್ಷ ಗೆದ್ದರೆ, ಜನಪ್ರಿಯತೆ ಗಳಿಸಿದರೆ ಅದು ಆ ದೈವದ ಅವತಾರ ಅಥವಾ ಪವಾಡವಾಗಿ ಪ್ರಸಿದ್ಧಿಗೆ ಬಂದು ಬಿಡುತ್ತದೆ. ಇದರಿಂದಾಗಿ ಇಂದು ಜನಪದ ದೈವಗಳು ಮತ್ತು ಅವುಗಳ ಆಚರಣೆಗಳಲ್ಲಿ ಹಲವು ಬಗೆಯ ಪಲ್ಲಟಗಳಾಗಿವೆ. ನಗರೀಕರಣದ ಪ್ರಭಾವದಿಂದಾಗಿ ಕ್ಯಾತಪ್ಪನ ಆರಾಧಕರು ಇತ್ತೀಚೆಗೆ ತಮ್ಮ ಮೂಲ ಕಸುಬಾದ ಕುರಿ ಮತ್ತು ದನಕರುಗಳ ಸಾಕಾಣೆ ಮತ್ತು ಪೋಷಣೆ ಬಿಟ್ಟು ನಗರ ಪ್ರದೇಶಗಳನ್ನು ಸೇರುತ್ತಿದ್ದಾರೆ. ನಗರ ಪ್ರದೇಶದಲ್ಲಿ ವಿವಿಧ ರೀತಿಯ ಕೆಲಸಗಳು ಅವರಲ್ಲಿ ಆಕರ್ಷಣೆ ಹುಟ್ಟಿಸಿ ಕರೆಯುತ್ತಿವೆ. ಆದರೆ ಅಕ್ಷರವಂತರಾಗದೆ ಇವರು ನಗರಗಳನ್ನು ಸೇರುತ್ತಿರುವುದು ವಿಷಾದದ ಸಂಗತಿಯಾಗಿದೆ. ಇವರು ತಮ್ಮ ದೇವರು-ದೈವಗಳ ಆರಾಧನೆಗಳ ನಡುವೆ ಸಿಕ್ಕು ಒಂದು ರೀತಿಯ ಸಾಮಾಜಿಕ, ಆರ್ಥಿಕ ಶೋಷಣೆಗೆ ಒಳಗಾಗಿದ್ದಾರೆ. ಇವರಲ್ಲಿ ಕೆಲವರಷ್ಟೇ ಸರ್ಕಾರಿ ಉದ್ಯೋಗ ಪಡೆದುಕೊಂಡಿದ್ದಾರೆ. "ಇತ್ತೀಚೆಗೆ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಭಾವದಿಂದಾಗಿ ಅಲ್ಲೊಂದು ಇಲ್ಲೊಂದು ದೊರೆಯುತ್ತಿದ್ದ ಕೆಲಸಗಳು ಇವರಿಗೆ ಗಗನ ಕುಸುಮಗಳಾಗಿವೆ."[೧೫]

ಮೂಲತಃ ಬಡತನದಲ್ಲಿ ನರಳುತ್ತಿರುವ ದೈವಗಳ ಆರಾಧಕರಿಗೆ ಆರ್ಥಿಕ ಬೆಂಬಲ ಇಲ್ಲದಂತಾಗಿದೆ. ಸಾಮಾಜಿಕವಾಗಿ ಅನೇಕ ವೈಪರಿತ್ಯಗಳು ಇವರ ಮೇಲಿದ್ದರೂ ಕೂಡ ಒಪ್ಪಿತ ವ್ಯವಸ್ಥೆಯಲ್ಲಿ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಕೇತಪ್ಪ ದೈವಗಳ ಪರಂಪರೆಯನ್ನು ಮುಂದುವರೆಸುತ್ತಿರುವ ಈ ಸಮುದಾಯದ ಪರಿಸ್ಥಿತಿ ಹೆಚ್ಚು ಹೆಚ್ಚು ಶೋಚನೀಯ ಸ್ಥಿತಿಯಲ್ಲೇ ಉಳಿದಿದೆ. ಬಹುಶಃ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ತಮ್ಮ ಪಾರಂಪರಿಕ ವೃತ್ತಿಯಾದ ಕುರಿ ಮತ್ತು ದನಕರುಗಳ ಸಾಕಾಣೆ ಮತ್ತು ಅವುಗಳ ಪೋಷಣೆಯಿಂದಾಗಿ ತುಂಬಾ ಸ್ವಾವಲಂಬಿಯಾಗಿದ್ದ ಈ ಸಮುದಾಯ ಇಂದು ಆರ್ಥಿಕವಾಗಿ ಶೋಚನೀಯ ಸ್ಥಿತಿ ತಲುಪಿದೆ.

ಆಧುನಿಕ ಬದಲಾವಣೆಯ ಬಿರುಗಾಳಿಗೆ ಸಿಕ್ಕು ಆಧುನಿಕತೆಯ ಕಡೆಗೆ ತನ್ನನ್ನು ತಾನು ನಿಧಾನವಾಗಿ ತೆರೆದುಕೊಳ್ಳುತ್ತಿದೆ. ನೆಲಮೂಲ ಸಂಸ್ಕೃತಿಯ ಕೇತಪ್ಪನ ಆರಾಧಕ ಸಮುದಾಯ ಕ್ರಮೇಣ ತನ್ನ ಲಕ್ಷಣಗಳನ್ನು ಕಳೆದುಕೊಳ್ಳುತ್ತಾ 'ಜಾತಿ'ಯತ್ತ ಮುಖಮಾಡಿದೆ. ಕಾರಣ ಅವರ ಆಚಾರ-ವಿಚಾರ, ರೂಢಿ, ಸಂಪ್ರದಾಯ ಮತ್ತು ನಂಬಿಕೆಗಳು ತೀವ್ರ ಬದಲಾವಣೆಗೆ ಒಳಗಾಗುತ್ತಿದ್ದು ಶಿಕ್ಷಣ, ಸರ್ಕಾರಿ ಉದ್ಯೋಗ, ವಿಜ್ಞಾನ, ತಂತ್ರಜ್ಞಾನ ಹಾಗೂ ಮಾಹಿತಿ ಇನ್ನಿತರೇ ಕಾರಣಗಳಿಂದ ನಗರ-ಪಟ್ಟಣಗಳಿಗೆ ವಲಸೆ ಹೋಗುತ್ತಿರುವ ವಿದ್ಯಾವಂತ ಜನ ಅನ್ಯಜಾತಿ ಸಮುದಾಯಗಳ ಮಧ್ಯೆ ಬದುಕಬೇಕಾಗಿರುವುದರಿಂದ ತಮ್ಮ ಆಚಾರ-ವಿಚಾರ, ಮಡಿ ಮೈಲಿಗೆ ಮತ್ತು ಆಲೋಚನೆ ಎಲ್ಲವೂ ಆಧುನಿಕ ಪ್ರಕ್ರಿಯೆಗೆ ಒಳಗು ಮಾಡಿಕೊಳ್ಳುತ್ತಾ ತಮ್ಮ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿವೆ.

ಎಲ್ಲರಂತೆಯೇ ತಾವು ಶಿಷ್ಟ ಸಂಸ್ಕೃತಿಯಲ್ಲಿ ಸಾಗುತ್ತಿದ್ದೇವೆ ಎಂದು ತೋರಿಸಿಕೊಳ್ಳಲು ಸಂಪ್ರದಾಯ ಮತ್ತು ಸಂಸ್ಕೃತಿಯ ಆಚರಣ ವಿಧಿ ವಿಧಾನಗಳಲ್ಲಿ ಸರಳತೆ ಕಂಡುಕೊಂಡಿದ್ದಾರೆ. ತಮ್ಮ ಆರಾಧ್ಯದೈವ ಹಾಗೂ ಮನೆದೇವರ ಗರ್ಭಗುಡಿಯೊಳಗೆ "ಧರ್ಮಸ್ಥಳದ ಮಂಜುನಾಥಸ್ವಾಮಿ, ಮಂತ್ರಾಲಯದ ರಾಘವೇಂದ್ರ, ಶಬರಿಮಲೆ ಅಯ್ಯಪ್ಪ ಮುಂತಾದ ದೇವರುಗಳ ಪೋಟೊಗಳು ರಾರಾಜಿಸುತ್ತಿವೆ. ಅಲ್ಲದೆ, ಅವುಗಳಿಗೆ ವರ್ಷಕ್ಕೊಮ್ಮೆ ಪೂಜೆ ಪುರಸ್ಕಾರ ನಡೆಸುವುದಲ್ಲದೆ ಜನಪದರು ಅವುಗಳ ವ್ರತಾಚರಣೆ ಕೈಗೊಂಡು ಭಕ್ತರೂ ಆಗುತ್ತಿದ್ದಾರೆ."[೧೬]

ಬುಡಕಟ್ಟು ದೈವಗಳ ಬಗೆಗಿನ ಕಾಳಜಿ ತೀವ್ರ ಪರಿಶೀಲನೆಗೆ ಒಳಗಾಗುತ್ತಿದ್ದು, ತಮ್ಮ ನಡಾವಳಿಗಳ ಮೂಲಾಂಶಗಳು ದಿನದಿಂದ ದಿನಕ್ಕೆ ದೂರ ಸರಿಯುತ್ತಿವೆ. ಪರಂಪರೆಯ ಬದುಕು ತೀವ್ರತರವಾಗಿ ಬದಲಾಗುತ್ತಿದ್ದರೂ ಹಳ್ಳಿ ಅಥವಾ ಊರುಗಳಲ್ಲಿ ನೆಲೆಸಿರುವ ಜನರು ತಮ್ಮ ಕುಲ ಮೂಲದಲ್ಲಿ ಹಿಂದಿನಿಂದಲೂ ನಡೆದುಬಂದಿದ್ದ ಆಚರಣೆ, ರೂಢಿ, ಸಂಪ್ರದಾಯ ಮತ್ತು ನಂಬಿಕೆ ಮತ್ತು ಸಂಸ್ಕೃತಿಯ ಅಸ್ಮಿತೆಯನ್ನು ಉಳಿಸಿಕೊಳ್ಳಲು ಹೆಣಗುತ್ತಿದ್ದಾರೆ. ನಾಗರಿಕತೆಯ ಪ್ರಭಾವದಿಂದ ಜನಪದ ಆಚರಣೆಗಳು ಸಡಿಲಗೊಳ್ಳುತ್ತವೆ. ಹಳೆಯ ತಲೆಯ ಮಾರಿನ ಜನ ಆಚರಣೆಗಳಲ್ಲಿ ತನ್ನದೇ ಆದ ನಂಬಿಕೆಗಳಿಂದ ಬದುಕಿನಲ್ಲಿ ನೆಮ್ಮದಿಯನ್ನು ಕಂಡುಕೊಳ್ಳುತ್ತಿದ್ದರು.

ಗ್ರಾಮೀಣ ಪ್ರದೇಶದಲ್ಲಿ ಜನ ಸಾಂಸಾರಿಕ ಜೀವನದಲ್ಲಿ ಸುಖ ಸಂತೋಷವನ್ನು ಕಂಡುಕೊಳ್ಳಲು ಪೂಜೆ-ಪುರಸ್ಕಾರ ಮಾಡುವುದರ ಮೂಲಕ ಹರಕೆಗಳ ರೂಪದಲ್ಲಿ ಹಲವಾರು ಆಚರಣೆಗಳನ್ನು ಮಾಡುತ್ತಾರೆ. ಅದಕ್ಕಾಗಿಯೇ ಮೊದಲಿಗೆ ತಮ್ಮ ಮನೆ ದೇವರನ್ನು ನೆನೆದು ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ದೈಗಳ ಸಾಂಸ್ಕೃತಿಕ ಆಚರಣೆಗಳಲ್ಲಿ ಬದಲಾವಣೆ ಉಂಟಾಗಲು ಪ್ರಮುಖ ಕಾರಣವೆಂದರೆ ಶಿಕ್ಷಣ, ಯುವ

ಜನರ ನಿರಾಸಕ್ತಿ, ನಗರೀಕರಣ, ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಭಾವ. ಆಚರಣೆಗಳು ಜಾತ್ಯಾತೀತವಾಗಿರಬೇಕು. ಮನರಂಜನೆ ನೀಡಬೇಕು, ವೈಜ್ಞಾನಿಕವಾಗಿರಬೇಕು, ಮಹಿಳೆಯರಿಗೆ ಅವಕಾಶ ನೀಡಬೇಕು ಎನ್ನುವ ಅಂಶಗಳು ಸೇರಿಕೊಂಡು ಮೂಲ ಆಚರಣಾ ಪದ್ಧತಿಗಳು ಪಲ್ಲಟಗೊಂಡಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

ವೈಧಿಕ ಸಂಸ್ಕೃತಿಯ ಪ್ರಭಾವದಿಂದಾಗಿ ಹಿಂದಿನಿಂದಲೂ ಬಂದ ಆಚರಣೆಗಳು ಕೆಲವು ಬದಲಾಗಿವೆ. ಇನ್ನು ಕೆಲವು ತಮ್ಮ ಮೂಲ ಸಂಸ್ಕೃತಿಯ ಸೊಗಡು ಕಾಪಾಡಿಕೊಂಡು ಬದುಕಿಗೆ ಅನುಸಾರವಾಗಿ ಹೊಸ ರೂಪ ಪಡೆಯುತ್ತ ಸಾಗಿವೆ. ಜನರು ಭಯ ಭಕ್ತಿಯಿಂದ ದೇವರನ್ನು ಪೂಜಿಸುವ ವಿಧಿ ವಿಧಾನಗಳ ಜೊತೆಗೆ ಹರಕೆ ಹೋರುತ್ತಾರೆ. ಹಿಂದೆ ಕಟ್ಟುನಿಟ್ಟಾದ ಉಪವಾಸ ವ್ರತ ಕೈಗೊಳ್ಳುತ್ತಿದ್ದರು. ಉಪವಾಸ ವ್ರತ ಕೈಗೊಳ್ಳುವರು ತುಂಬಿದ ಕೊಡದ ನೀರು, ಎಳೆನೀರು, ಮೀಸಲು ಹಾಲು ಸೇವಿಸುತ್ತಿದ್ದರು. ಆದರೆ ಇಂದು ಹಣ್ಣು ಹಂಪಲು, ಪಾನಕ, ಕೋಸುಂಬರಿ, ಕಾಫಿ, ಟೀ, ಮಂಡಕ್ಕಿ ಇತರೆ ಪದಾರ್ಥಗಳನ್ನು ಆಹಾರವಾಗಿ ಸೇವಿಸುತ್ತಾರೆ. ಜಾತ್ರೆಯಲ್ಲಿ ಮತ್ತು ಮನೆಯಲ್ಲಿ ಎಲ್ಲಾ ಸದಸ್ಯರು ಉಪವಾಸ ಇರುತ್ತಿದ್ದರು. ಇಂದು ಮಾತ್ರ ಒಂದು ಮನೆಯಲ್ಲಿ ಒಬ್ಬರು ಮಾತ್ರ ಇರುತ್ತಾರೆ. ಕೆಲವು ಬಾರಿ ಉಪವಾಸ ಇರುವುದೇ ಇಲ್ಲ.

ದೇವರಿಗೆ ಮುಡುಪುಗಳು–ಹರಕೆ ಎಂದು ಹೂ,ಹಣ್ಣು ವಸ್ತುಗಳನ್ನು, ಕಂಚು ಮತ್ತು ತಾಮ್ರದ ಒಡವೆಗಳನ್ನು ನೀಡುತ್ತಿದ್ದರು. ಇಂದು ಚಿನ್ನ–ಬೆಳ್ಳಿಯ ಸಾವಿರಾರು ರೂಪಾಯಿ ಬೆಲೆ ಬಾಳುವ ಒಡವೆಗಳನ್ನು ನೀಡುತ್ತಾರೆ. ಹಿಂದೆ ಆಚರಣೆಗಳಲ್ಲಿ ಭಯ ಭಕ್ತಿ ಇದ್ದರೆ, ಇಂದು ಕೇವಲ ತೋರ್ಪಡಿಕೆಯಾಗಿ ವೈಭವ, ಅಲ್ಲದೆ ಪ್ರತಿಷ್ಠೆಗಾಗಿ ಆಚರಿಸುತ್ತಾರೆ. "ಬುಡಕಟ್ಟು ಸಂಸ್ಕೃತಿ ಪಲ್ಲಟಗೊಂಡ ಕಾರಣ ಹುಲ್ಲಿನ ಗುಡಿಸಲು ಅಥವಾ ಗುಬ್ಬಗಳ ಬದಲಿಗೆ ದೇವರಿಗಾಗಿ ದೊಡ್ಡ ದೊಡ್ಡ ದೇವಸ್ಥಾನಗಳು ತಲೆ ಎತ್ತಿವೆ. ಆಮೇಲೆ ನಗರಗಳಷ್ಟೆ ಹಬ್ಬ, ಉತ್ಸವ, ತೇರು, ಜಾತ್ರೆಗಳು ನಡೆಯುತ್ತಿವೆ. ಈ ಎಲ್ಲವೂ ಆಧುನಿಕತೆಯ ಮೆರಗನ್ನು ಪಡೆದಿದ್ದರೂ ಕೂಡಾ ದೇಸಿ ತನದಿಂದ ದೂರ ಉಳಿದಿಲ್ಲ. ಅವುಗಳಲ್ಲಿ ರೂಪಾಂತರ ಅಂಶಗಳು ಕಾಣಸಿಗುತ್ತವೆ. ಧಾರ್ಮಿಕ, ಸಂಸ್ಕೃತಿ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ದೇಸಿ ಸೊಗಡು ಜೀವಂತವಾಗಿರುತ್ತದೆ."[೨೭]

ದೇವರ ಗುಡಿಯ ರಕ್ಷಣೆಗೋಸ್ಕರ ರೂಪಿಸಿಕೊಂಡಿದ್ದ 'ಪಾರಿಬೇಲಿ'ಗಳು ಇಂದು ಕಾಣೆಯಾಗಿವೆ. ಇಂದಿನ ಕಾಲಮಾನಕ್ಕೆ ರಕ್ಷಣಾ ಸೌಕರ್ಯಗಳು ಬೇರೆ ಬೇರೆ ಮಾರ್ಗಗಳಲ್ಲಿ ಲಭ್ಯವಾಗುತ್ತಿರುವುದು ಇದರ ಶಿಥಿಲತೆಗೆ ಕಾರಣವಾಗಿದೆ. ಇದರೊಂದಿಗೆ ಪಾರಿಬೇಲಿಯ ಬಗ್ಗೆ ಮೂಲದಲ್ಲಿದ್ದ ಧಾರ್ಮಿಕ ಕಟ್ಟು ಪಾಡುಗಳೂ ಕ್ಷೀಣಿಸುತ್ತಿವೆ. ಹಟ್ಟಿಯ ಹುದಿಬಾಗಿಲು, ಅಗಸೆ ಬಾಗಿಲು ಗಳ, ಮುಳ್ಳು, ಹುಲ್ಲಿನ ಗುಡಿಸಲುಗಳ

ಜಾಗದಲ್ಲಿ ಸಿಮೆಂಟಿನ ಕಲಾಕೃತಿಯ ದ್ವಾರಗೋಪುರಗಳು ತಲೆ ಎತ್ತಿವೆ. ಇದರಿಂದಾಗಿ ಸಂಸ್ಕೃತಿಯ ಗಟ್ಟಿ ಮೂಲ ಬೇರುಗಳು ಕವಲೊಡೆದು ತಮ್ಮ ಅಂತಸತ್ವ ಕಳೆದುಕೊಳ್ಳಲು ಪ್ರಾರಂಭಿಸಿದೆ. ಬುಡಕಟ್ಟು ಜಾತ್ರೆ ಆಚರಣಾ ಸಂಸ್ಕೃತಿಗೆ ತನ್ನದೇ ಆದ ಸಾಂಸ್ಕೃತಿಕ ಶಕ್ತಿ ಇರುತ್ತದೆ. ಅದು ಆ ಸಮುದಾಯದ ಐಕ್ಯತೆಗೆ ಪುಷ್ಠಿ ನೀಡುತ್ತದೆ. ಆದ್ದರಿಂದ ಆಯಾ ಕಾಲ ಘಟ್ಟದಲ್ಲಿ ನಡೆಯುವ ಹಬ್ಬ ಹರಿದಿನ, ಜಾತ್ರೆ, ಉತ್ಸವ ಹಾಗೂ ಆಚರಣೆಗಳಲ್ಲಿ ಬಹುಸಂಸ್ಕೃತಿ ಮತ್ತು ದೇಶಿಯ ಪರಿಕಲ್ಪನೆಗಳು ತನ್ನದೇ ಆದ ಮೌಲ್ಯಗಳನ್ನು ಒಳಗೊಂಡಿರುತ್ತವೆ. ಯಾವುದೇ ಒಂದು ಜೀವಂತ ಸಮಾಜದಲ್ಲಿ ದೇಶಿ ಮತ್ತು ಬಹುಮುಖಿ ಸಂಸ್ಕೃತಿಗಳೆರಡು ಏಕಕಾಲದಲ್ಲಿ ಮಿಳಿತಗೊಂಡಿರುತ್ತವೆ.

ಜಾಗತಿಕ ಸಂಸ್ಕೃತಿಯ ಒಡಲೊಳಗೆ ಎಲ್ಲಾ ಸಂಸ್ಕೃತಿಗಳ ಬೇರುಗಳು ಇದ್ದರೂ ಅವುಗಳಲ್ಲಿ ಕ್ಷಣದಿಂದ ಕ್ಷಣಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಪಲ್ಲಟಗೊಳ್ಳುತ್ತಾ ಹೋಗುತ್ತವೆ. ಆದರೆ ಎಲ್ಲೋ ಒಂದು ಕಡೆ ಅವು ತನ್ನ ಮೂಲವನ್ನು ಉಳಿಸಿಕೊಂಡಿರುತ್ತವೆ ಎನ್ನುವುದನ್ನು ಮರೆಯುವಂತಿಲ್ಲ. ಆರಂಭದಲ್ಲಿ ಜಾತ್ರೆಗಳು ಇರಲಿಲ್ಲ, ಜನರಿಗೋಸ್ಕರ ಜಾತ್ರೆಗಳೇ ಹೊರತು, ಜಾತ್ರೆಗಳಿಗಾಗಿ ಜನಪದರಲ್ಲ ಎಂಬ ಅಂಶವನ್ನು ಮನವರಿಕೆ ಮಾಡಿಕೊಡಬೇಕಾಗಿದೆ. "ಮನುಷ್ಯ ನಿಸರ್ಗದ ವಸ್ತುಗಳ ಸುತ್ತ ನಂಬಿಕೆ ಇರಿಸಿ ಮೊದಲಿಗೆ ಅವುಗಳನ್ನು ಆರಾಧಿಸುತ್ತಾ ಬಂದ. ಕಾಲಾಂತರದಲ್ಲಿ ಕೆಲವು ವಸ್ತುಗಳನ್ನು ಪರಿಶುದ್ಧ ಎಂದು ಭಾವಿಸಿದ, ಅವುಗಳಲ್ಲಿ ಕೆಲವನ್ನು ದೇವರೆದು ನಂಬಿ ಪೂಜಿಸ ತೊಡಗಿದ. ಇನ್ನುಳಿದವುಗಳನ್ನು ತನ್ನೊಡನೆ ಇರಿಸಿಕೊಂಡು ಒಂದಲ್ಲ ಒಂದು ನೆಪದಲ್ಲಿ ಆಚರಣೆಯಲ್ಲಿರಿಸಿಕೊಂಡು ಬಂದ."[೧೮]

**ಪೂಜಾ ಆಚರಣೆಗಳ ಬದಲಾವಣೆಗಳು** – ಜನಪದರ ಜೀವನಾಡಿಯಾಗಿರುವ ಪೂಜಾ ಆಚರಣೆಗಳ ವಿಧಾನಗಳಲ್ಲಿ ಸಾಕಷ್ಟು ಬದಲಾವಣೆಗಳು ಇಂದು ಕಂಡು ಬರುತ್ತವೆ. ಹೆಣ್ಣು ದೇವತೆಗೆ ಸಾಧಾರಣ ಅಲಂಕಾರ, ಪುರುಷ ದೇವರಿಗೆ ಸಾವಿರಾರು ರೂಪಾಯಿಗಳ ವೆಚ್ಚಮಾಡುತ್ತಾರೆ. ದೇವರ ದರ್ಶನಕ್ಕೆ ಸಾವಿರಾರು ರೂಪಾಯಿ ನೀಡಬೇಕು. ಮಂಗಳಾರತಿ ತಟ್ಟೆಗೆ ಹೆಚ್ಚು ಹಣ ಹಾಕಿದ ಮೇಲೆ ಪ್ರಸಾದ ನೀಡುತ್ತಾರೆ. ಹೀಗೆ ದೇವರ ಕಾರ್ಯಗಳೆಲ್ಲವೂ ಇಂದು ವ್ಯಾಪಾರಿಕಣಗೊಂಡಿವೆ.

**ವ್ಯಾಪಾರ ವಹಿವಾಟಿನ ಬದಲಾವಣೆಗಳು** – ಪ್ರಾಚೀನ ಕಾಲದಿಂದಲೂ ಜಾತ್ರೆಗಳು ಗ್ರಾಮೀಣ ಜನರ ವ್ಯಾಪಾರ ಕೇಂದ್ರಗಳಾಗಿದ್ದವು. ಈ ಜಾತ್ರೆಗಳಲ್ಲಿ ಗ್ರಾಮೀಣ ಜನರು ತಮಗೆ ಬೇಕಾದಂತಹ ನಿತ್ಯ ಬಳಕೆಯ ವಸ್ತುಗಳನ್ನು ದವಸ ಧಾನ್ಯಗಳನ್ನು ಮತ್ತು ಬಹುಮುಖ್ಯವಾಗಿ ಒಕ್ಕಲುತನಕ್ಕೆ ಬೇಕಾದ ಸಲಕರಣೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಇಲ್ಲವೆ ಕೊಂಡುಕೊಳ್ಳುತ್ತಿದ್ದ ಪದ್ಧತಿ ಇತ್ತು ಅದು ಇಂದು

ಕಣ್ಮರೆಯಾಗುತ್ತಿದೆ.

**ಮಕ್ಕಳ ಆಟಿಕೆಗಳು** – ಹಿಂದಿನ ಕಾಲದಲ್ಲಿ ಮಕ್ಕಳ ಆಟಿಕೆಗಳೆಂದರೆ ಅವು ಭಿನ್ನವಾಗಿರುತ್ತಿದ್ದವು. ಮರದ ಬೊಂಬೆ, ಬುಗರಿ, ಕೊಳಲು, ಪೀಪಿ ಮತ್ತು ತುತ್ತೂರಿ ಮರ ಮತ್ತು ಮಣ್ಣಿನಿಂದ ಮಾಡಿದ ಪ್ರಾಣಿ, ಪಕ್ಷಿಗಳ ಕರ ಕುಶಲ ವಸ್ತುಗಳನ್ನು ಬಳಸುತ್ತಿದ್ದರು. ಇಂದು ಅವುಗಳ ಬದಲಿಗೆ ಪ್ಲಾಸ್ಟಿಕ್‌ನಿಂದ ತಯಾರಿಸಿದ ಕಾರು, ಜೀಪು, ಮೊಬೈಲ್, ಗನ್, ಹಾವು, ಬಲೂನ್, ವಿಮಾನ ಮುಂತಾದ ಆಟಿಕೆಗಳನ್ನು ಕಾಣುತ್ತಿದ್ದೇವೆ.

**ಸ್ತ್ರೀಯರಿಗೆ ಬೇಕಾದ ವಸ್ತುಗಳು** – ಜಾತ್ರೆ ಎಂದಾಕ್ಷಣ ಸ್ತ್ರೀಯರಿಗೆ ಎಲ್ಲಿಲ್ಲದ ಸಡಗರ. ಏಕೆಂದರೆ ತಮಗೆ ಬೇಕಾದಂತಹ ಹಲವಾರು ವಸ್ತುಗಳನ್ನು ತೆಗೆದುಕೊಳ್ಳುತ್ತಾರೆ. ಅಂದರೆ  ವಾಲೆ, ಬುಗಡಿ, ಕೈ, ಕಾಲಿಗೆ ಕಡಗ, ಪಿಲ್ಲಿ, ಕಾಸಿನ ಸರ, ಜಡೆಕುಚ್ಚು, ಟೇಪು, ಡಾಬು, ಪಟ್ಟಿ, ಕಾಡಿಗೆ, ಮರದ ಬಾಚಣಿಗೆ, ಸಿರಿಣಿಗೆ, ಅಡಿಗೆ ಸಾಮಾಗ್ರಿಗಳ ಬದಲಿಗೆ ಇಂದು ಬಣ್ಣ ಬಣ್ಣದ ಚಿತ್ತಾರವಾದ ಪ್ಲಾಸ್ಟಿಕ್, ಗಾಜು, ಹರಳು, ಮೆಟಲ್ ಹೀಗೆ ವಿಧ ವಿಧವಾದ ಬಳೆಗಳು ಮತ್ತು ರಿಬ್ಬನ್, ಕ್ಲಿಪ್, ಏರ್ಪಿನ್ ವಿವಿಧ ಬಗೆಯ ವಸ್ತುಗಳು ದೊರೆಯುತ್ತವೆ. ಇಂದಿನ ದಿನಗಳಲ್ಲಿ ವ್ಯಾಪಾರವನ್ನು ಉದ್ದೇಶವಾಗಿಟ್ಟುಕೊಂಡು ಹಲವು ಭಿನ್ನ ವಸ್ತುಗಳು ಕಾಣುತ್ತೇವೆ.

**ಗೃಹಬಳಕೆ ವಸ್ತುಗಳು** – ಮಣ್ಣಿನಿಂದ ಮಾಡಿದ ಮಡಿಕೆ, ಕುಡಿಕೆ, ದೀಪ, ಬೊಂಬೆ, ಅಡಿಗೆ ಮಾಡುವ ಸೋರೆ ಮರದಿಂದ ಮಾಡಿದ ಕಡೆಗೋಲು, ಮಸೆಯುವಗುಂಡು ಇವುಗಳ ಬದಲಿಗೆ ಆಧುನಿಕರಣದ ಪ್ರಭಾವದಿಂದಾಗಿ ಲೋಹದ ಪಾತ್ರೆಗಳು, ಅಲ್ಯೂಮಿನಿಯಂ, ಹಿತ್ತಾಳೆ, ಕಂಚಿನ ವಸ್ತು, ಪ್ಲಾಸ್ಟಿಕ್ ವಸ್ತುಗಳು ಹಂಡೆ, ಬಿಂದಿಗೆ, ಬಕೆಟ್, ಸ್ಟೀಲ್ ಮತ್ತಿತರ ಸಾಮಾನುಗಳನ್ನು  ಬಳಸುತ್ತಿದ್ದಾರೆ.



**ಮಡಿಕೆ ಮಾರಾಟ**

**ಮನರಂಜನೆ** – ಜಾತ್ರೆಗಳೆಂದರೆ ಮನರಂಜನೆಯ ಕೇಂದ್ರಗಳು. ಇವು ಜನರಲ್ಲಿ ವಿಶ್ರಾಂತಿ, ಉತ್ಸಾಹ, ಉಲ್ಲಾಸಗಳನ್ನು ಉಂಟುಮಾಡುತ್ತವೆ. ಜಾನಪದ ಕಲಾತಂಡಗಳು, ಪೂಜಾ ಕುಣಿತಗಳು, ನಂದಿಕೋಲು, ತಮಟೆಗಳು, ಹರಿಕಥೆ, ಜನಪದ ಹಾಡುಗಳು, ಪೌರಾಣಿಕ, ಸಾಮಾಜಿಕ ನಾಟಕ ಪ್ರದರ್ಶನಗಳು, ಯಕ್ಷಗಾನ ಪ್ರದರ್ಶನಗಳು ನಡೆಯುತ್ತಿದ್ದವು. ಆದರೆ ಇಂದು ಸಾಮಾಜಿಕ ನಾಟಕ, ಆರ್ಕೇಸ್ಟ್ರಗಳು, ಶಾಲಾ ಮಕ್ಕಳ ಹಾಡು, ನೃತ್ಯ, ಸುಗಮ ಸಂಗೀತ, ಡ್ಯಾನ್ಸ್, ಹಾಸ್ಯ, ಫ್ಯಾಷನ್ ಷೋಕಿ, ಗೊಂಬೆ ಕುಣಿಸುವುದು, ಡೊಳ್ಳು, ಡ್ರಮ್‌ಸೆಟ್ ಭಾರಿಸುತ್ತಾ ಕುಣಿಯುವುದು, ಸರ್ಕಸ್ ಹೀಗೆ ಹಲವು ರೀತಿಯ ಮನರಂಜನ ಕಾರ್ಯಕ್ರಮಗಳು ಜರಗುತ್ತಿರುತ್ತವೆ.

**ಸ್ಪರ್ಧೆಗಳು** – ಜಾತ್ರಾ ಸಮಯದಲ್ಲಿ ಹಲವಾರು ರೀತಿಯ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಗ್ರಾಮೀಣ ಜನರ ಸಾಹಸಮಯ ಕಲೆಗಳಾದ ಕತ್ತಿವರಸೆ, ದೊಣ್ಣೆವರಸೆ, ಕುಸ್ತಿ ಸ್ಪರ್ಧೆ, ಗುಂಡು ಎತ್ತುವುದು, ಪಗಡೆ, ಉಪ್ಪರಪಟ್ಟೆ, ಮಡಿಕೆ ಹೊಡೆಯುವುದು, ಹುಲಿವೇಷ, ಕರಡಿವೇಷ, ಕೋಳಿಪಂದ್ಯ, ಎತ್ತಿನಗಾಡಿ ಸ್ಪರ್ಧೆ ಹೀಗೆ ಹಲವಾರು ಆಟಗಳನ್ನು ಸ್ಪರ್ಧೆಯ ಮೂಲಕ ನಡೆಸುತ್ತಿದ್ದರು. ಇಂದು ಅವುಗಳ ಬದಲಿಗೆ ಬಲೂನ್ ಹೊಡೆಯುವುದು, ಹಣ್ಣು ತಿನ್ನುವುದು, ಜೂಜು, ಕ್ರಿಕೆಟ್, ಮ್ಯೂಸಿಕಲ್ ಚೇರ್, ರಂಗೋಲಿ, ಹೀಗೆ ಹಲವಾರು ರೀತಿಯ ಪಂದ್ಯ ಏರ್ಪಡಿಸುತ್ತಾರೆ. ಆಧುನಿಕರಣದ ಪ್ರಭಾವದಿಂದ ಗ್ರಾಮೀಣ ಜನರ ದೇಶಿ ಆಟಗಳು ಕಣ್ಮರೆಯಾಗಿವೆ. ಇವತ್ತಿನ ಸ್ಪರ್ಧೆಗಳು ಮನರಂಜನೆಗಲ್ಲದೆ ಕೇವಲ ಮೋಜಿಗಾಗಿ ನಡೆಯುತ್ತಿವೆ. ಪ್ರತಿಯೊಂದು ಕಲಾ ಸ್ಪರ್ಧೆಗಳು ವ್ಯಾಪಾರಿ ಮನೋಭಾವ ತಾಳಿವೆ.

**ಸಂಘಟನೆ–ಬದಲಾವಣೆ** – ಜಾತ್ರೆ ಆಚರಣೆಗಳಲ್ಲಿ ಹಲವು ಬದಲಾವಣೆಗಳನ್ನು ಕಾಣಬಹುದಾಗಿದೆ. ರಥೋತ್ಸವ, ಜಾತ್ರೋತ್ಸವಗಳಲ್ಲಿ ಎಲ್ಲರೂ ಒಂದಾಗಿ ಉತ್ಸುಕತೆಯಿಂದ ಭಾಗವಹಿಸುತ್ತಿದ್ದರು. ಆದರೆ ಇಂದು ಯಾವುದೇ ಹಬ್ಬ–ಉತ್ಸವಗಳಲ್ಲಿ ನಿರ್ಧಿಷ್ಟ ಜಾತಿ ಸಂಘಟನೆಗಳು ಕೆಲಸಗಳಲ್ಲಿ ತೊಡಗುತ್ತಿವೆ. ಅಷ್ಟೇ ಅಲ್ಲದೆ ರಾಜಕೀಯ ಧುರೀಣರು ಸಹ ಪ್ರತಿ ಹಂತದಲ್ಲೂ ತಮ್ಮ ಜಾತಿಗಳ ಕೆಲಸ ವಿಧಾನಗಳನ್ನು ಮಾತ್ರ ಪ್ರೋತ್ಸಾಹಿಸುತ್ತಾರೆ.ಇದರಿಂದ ಸಂಘರ್ಷಗಳಿಗೆ ಎಡೆ ಮಾಡಿಕೊಡುತ್ತದೆ. ಪ್ರಸ್ತುತ ಈ ದಿನಗಳಲ್ಲೂ ನಮ್ಮ ಸಮಾಜ ಮತ್ತು ವ್ಯವಸ್ಥೆ ಈ ಬುಡಕಟ್ಟು ಸಮುದಾಯದವರನ್ನು ಕುರಿತು ಯಾವುದೇ ಆಶಾದಾಯಕ ಭಾವನೆಯನ್ನು ಮೂಡಿಸದೇ ಇರುವುದನ್ನು ಕಾಣಬಹುದು. ಆಧುನಿಕತೆ ಹೆಚ್ಚಿದಂತೆಲ್ಲಾ ಈ ವೃತ್ತಿ ಮೂಲ ಸಮುದಾಯಗಳು ಹೆಚ್ಚಿನ ಆತಂಕಕ್ಕೆ ಒಳಗಾಗುತ್ತಲೇ ಇವೆ. ವೃತ್ತಿ ಮೂಲ ಸಮುದಾಯಗಳು ಜನತೆಯ ಕಣ್ಣಿನಿಂದ ದೂರವಾಗುತ್ತಿವೆ. ಸಾಮಾಜಿಕ ನಿರ್ಲಕ್ಷ್ಯದಿಂದಾಗಿ ಮರೆಯಾಗುತ್ತಿರುವ ಕ್ಯಾತಪ್ಪನ

ಜಾತ್ರಾ ಆಚರಣೆಗಳು ಸರಳೀಕರಣಗೊಳ್ಳುತ್ತಿವೆ. ಆಧುನಿಕತೆಯಿಂದಾಗಿ ಅಲಕ್ಷ್ಯಕ್ಕೆ ಒಳಗಾಗಿರುವ ಕೇತಪ್ಪನ ಆರಾಧಕ ಬೇಡಗುಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಂತೆ, ರಾಜಕೀಯವಾಗಿಯೂ ಹಿಂದುಳಿದಿವೆ. ಇಂದು ಪರಿಶಿಷ್ಟ ಪಂಗಡಕ್ಕೆ ಎಷ್ಟೋ ಸಮುದಾಯಗಳು ಸೇರ್ಪಡೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಇದೇ ಜಾತಿಪಟ್ಟಿಗೆ ತಾವು ಸಹ ಸೇರ್ಪಡೆಯಾಗಬೇಕು ಎಂದು ಎಷ್ಟೇ ಒತ್ತಡ ಹೇರುತ್ತಿದ್ದರೂ ಅದು ಸಾಧ್ಯವಾಗುತ್ತಿಲ್ಲ. ಇನ್ನು ಈ ಪ್ರಯತ್ನವೇ ಬೇಡವೇ ಬೇಡ ಎಂದು ತಿಳಿದು ಕೈ ಚೆಲ್ಲಿ ಕುಳಿತಿವೆ. ತಾವು ಮಾಡುವ ಕುರಿ, ದನಕರುಗಳ ಸಾಕಾಣೆ ಮತ್ತು ಅರೆ ಕೃಷಿ ಜೀವನದ ಜೊತೆಗೆ ತಮ್ಮ ಸಮುದಾಯದ ಸಾಂಸ್ಕೃತಿಕ ವೀರರ ಸಾಹಸಮಯ ಬದುಕಿನ ಕತೆಗಳನ್ನು ಹೇಳಿಕೊಂಡು ಇತರೇ ಕಸುಬುಗಳನ್ನು ಮೈಗೂಡಿಕೊಳ್ಳುವ ಪ್ರಯತ್ನ ಮಾಡುತ್ತಿವೆ.

ಆಧುನಿಕತೆಯ ಪ್ರವೇಶದಿಂದಾಗಿಯೇ ಅನಾನುಕೂಲಕರ ಸ್ಥಿತಿಗೆ ನೂಕಲ್ಪಟ್ಟ ಈ ಬುಡಕಟ್ಟಿಗೆ ಅಕ್ಷರ ಜ್ಞಾನದ ಕೊರತೆ, ಆರ್ಥಿಕ ಸ್ವಾವಲಂಬನೆ ಇಲ್ಲದೆ ಇರುವುದು, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯ ಭದ್ರತೆಗಳು ದೊರೆಯದೇ ಇರುವುದರಿಂದ ಇವರ ಅಭಿವೃದ್ಧಿಗೆ ಸಾಕಷ್ಟು ತೊಡಕು ಉಂಟಾಗಿದೆ. ಹೀಗೆ ಜಾಗತೀಕರಣದ ಪ್ರಭಾವದಿಂದ ಬದಲಾದ ಸಂದರ್ಭದಲ್ಲಿ ಆರ್ಥಿಕ, ಧಾರ್ಮಿಕ, ರಾಜಕೀಯ ಪರಿಸ್ಥಿತಿಗಳಿಗನುಗುಣವಾಗಿ ಬುಡಕಟ್ಟು ದೈವಗಳ ಸಾಂಸ್ಕೃತಿಕ ಆಚರಣೆ ಮತ್ತು ಸಂಪ್ರದಾಯಗಳು ಸರಳೀಕರಣಗೊಳ್ಳುತ್ತಾ ನಡೆದಿವೆ. ಆದ್ದರಿಂದ ಜಾನಪದ ಎಂದಾಕ್ಷಣ ರೋಮಾಂಚನಗೊಳ್ಳದೆ, ಅದನ್ನು ಜಾಗತಿಕ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಬುಡಕಟ್ಟು ಹಾಗೂ ಜಾನಪದ ಸಂಬಂಧವನ್ನು ಸೈದ್ಧಾಂತಿಕವಾಗಿ ಗುರುತಿಸಿ ಕೆಲಸ ಮಾಡುವುದಲ್ಲದೆ, ವಾಸ್ತವ ಪರಿಸ್ಥಿತಿ ಅರ್ಥಮಾಡಿಕೊಳ್ಳಬೇಕಾದ ಅಗತ್ಯವಿದೆ. ಪುರುಷೋತ್ತಮ ಬಿಳಿಮಲೆ–ಹೇಳುವಂತೆ "ಜಾನಪದವು ಚಲನಶೀಲ ಸಮಾಜದೊಂದಿಗೆ ಸಂಬಂಧ ಹೊಂದಿರುವುದರಿಂದ ಅದು ಸದಾ ಆಧುನಿಕವೇ ಅನ್ನಬಹುದಾದ ವಿಚಾರ ಸರಣಿಗೆ ಬದ್ಧವಾಗಿರುವುದರಿಂದ, ಜಾನಪದದ ಅಸ್ತಿತ್ವಕ್ಕೆ ಉತ್ಪಾದನಾ ವಿಧಾನಗಳೊಂದಿಗೆ ನೇರ ಸಂಬಂಧ ಇರುವುದರಿಂದ ಅದು ಅತ್ಯಂತ ಸತ್ವಪೂರ್ಣವು, ಬಲಿಷ್ಠವೂ ಆಗಿರುವುದು."[೧೯] ಈ ಹಿನ್ನಲೆಯಲ್ಲಿ ಬುಡಕಟ್ಟು ಸಂಸ್ಕೃತಿಯ ಆಚರಣೆಗಳು ಜಾನಪದೀಯ ಅಂಶಗಳನ್ನು ಒಳಗೊಂಡಂತೆಯೂ ಜೀವನ ನಿರ್ವಹಣೆಗೆ ಅಗತ್ಯವಾದ ವಾತಾವರಣವನ್ನು ನಿರ್ಮಿಸಿಕೊಡುವ ತುರ್ತು ಇಂದು ಎದುರಾಗಿದೆ.

## ೬.೫ ಕ್ಯಾತಪ್ಪನ ಧ್ಯಾನ ಜ್ಞಾನಪರಂಪರೆಯ ಮುನ್ನೋಟ

ಮಧ್ಯಕರ್ನಾಟಕ ಭಾಗದಲ್ಲಿ ಬುಡಕಟ್ಟು ಸಮುದಾಯಗಳನ್ನು ಹೊಂದಿರುವ ಚಿತ್ರದುರ್ಗ ಹಾಗೂ ತುಮಕೂರು ಈ ಕೇಂದ್ರಗಳಲ್ಲಿ ಕ್ಯಾತಪ್ಪ ಮತ್ತು ಜುಂಜಪ್ಪನ ಆಚರಣೆಗಳು ವಿಶಿಷ್ಟವಾಗಿ ಕಂಡು ಬರುತ್ತವೆ. ಈ ಇಬ್ಬರೂ ಸಹ ಸಾಂಸ್ಕೃತಿಕ ವೀರರೇ. ಇವರು ಈ ಎರಡು ಜಿಲ್ಲೆಗಳನ್ನೇ ತಮ್ಮ ಪ್ರಧಾನ ಕೇಂದ್ರವನ್ನಾಗಿ ಮಾಡಿಕೊಂಡು ದನಕರುಗಳ ಸಾಕಾಣೆ ಹಾಗೂ ಪೋಷಣೆಯ ಜೊತೆಗೆ ತಮ್ಮ ಸಮುದಾಯವನ್ನು ಸಂಘಟಿಸುವ ಕೆಲಸವನ್ನು ಮಾಡಿದ್ದಾರೆ. ಜುಜಂಪ್ಪನ ಬೃಹತ್ ಸ್ವರೂಪದ ಕಥನದಂತೆ ಕ್ಯಾತಪ್ಪನ ಬಗ್ಗೆ ಬೃಹತ್ ಪುರಾಣವೇ ಸೃಷ್ಟಿಯಾಗಿದ್ದರೂ ಇದು ಪೂರ್ಣ ಪ್ರಮಾಣದಲ್ಲಿ ಸಂಗ್ರಹವಾಗಿಲ್ಲ. ಕೇತಪ್ಪನ ಬಗ್ಗೆ ಮೊದ ಮೊದಲು ಉಲ್ಲೇಖ ಮಾಡಿದವರು ಬುಡಕಟ್ಟು ಅಧ್ಯಯನಕಾರಾದ ಎಚ್.ವಿ.ನಂಜುಂಡಯ್ಯ, ಅನಂತಕೃಷ್ಣ ಅಯ್ಯರ್‌ರವರು. ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆ, ಆಚರಣೆಗಳನ್ನು ಕುರಿತು ಸಂಶೋಧನೆ ನಡೆಸಿದವರು ತೀ.ನಂ.ಶಂಕರನಾರಾಯಣರವರು ಮೊದಲ ಬಾರಿಗೆ ಕ್ಯಾತಪ್ಪನ ಪುರಾಣವನ್ನು ಅಲ್ಪ ಪ್ರಮಾಣದಲ್ಲಿ ಸಂಗ್ರಹಿಸಿ, ಕೆಲ ಆಚರಣೆಗಳನ್ನು ವಿವರಿಸಿ ವಿಶ್ಲೇಷಿಸಿದ್ದಾರೆ. ಕಾಡುಗೊಲ್ಲರ ಜನಪದ ಕಾವ್ಯಗಳನ್ನು ಸಂಗ್ರಹಿಸಿದ ಅಂಬಳಿಕೆ ಹಿರಿಯಣ್ಣರವರು ಕ್ಯಾತಪ್ಪನ ಕಾವ್ಯ ಸಂಗ್ರಹಿಸಿದ್ದಾರೆ. ಕಾಡುಗೊಲ್ಲರ ಸಾಂಸ್ಕೃತಿಕ ವೀರರ ಬಗ್ಗೆ ಕುರಿತು ಅಧ್ಯಯನ ಮಾಡಿದ ಮೀರಾಸಾಬಿಹಳ್ಳಿ ಶಿವಣ್ಣರವರು ಕ್ಯಾತಪ್ಪನ ಜಾತ್ರೆ ಬಗ್ಗೆ ಬಿಡಿ ಲೇಖನಗಳನ್ನಷ್ಟೇ ಬರೆದು ಪ್ರಕಟಿಸಿದ್ದಾರೆ. ಕೃಷ್ಣಗೊಲ್ಲರ ಕಾವ್ಯದಲ್ಲಿ ಕೆ.ಎ.ಮೇತ್ರಿರವರು ನಿಂಗಣ್ಣನ ಕಾವ್ಯ ಎಂದು ಸಂಗ್ರಹಿಸಿದ್ದಾರೆ. ಚಿತ್ರದುರ್ಗದ ಜನಪದ ವೀರಗೀತೆಗಳ ಸಂಗ್ರಹ ಮತ್ತು ಸಾವಿರ ಸಿರಿ ಬೆಳಗು ಕೃತಿಯಲ್ಲಿ ಕೃಷ್ಣಮೂರ್ತಿ ಹನೂರುರವರು ಕ್ಯಾತಪ್ಪನ ಬಗ್ಗೆ ಉಲ್ಲೇಖ ಮಾಡಿದ್ದಾರೆ. ಕಾಡುಗೊಲ್ಲರ ಮಹಾ ಕಾವ್ಯಗಳಲ್ಲಿ ಮುಖಾಮುಖಿ ಸಂಘರ್ಷ ಅಧ್ಯಯನದಲ್ಲಿ ಮಲ್ಲಿಕಾರ್ಜುನ ಕೆ.ರವರು ಕ್ಯಾತಪ್ಪನ ಪರಿಷೆ ಮತ್ತು ಆಚರಣೆಗಳನ್ನು ಕುರಿತು ಸಂಕ್ಷಿಪ್ತವಾದ ವಿವರಣೆ ಮತ್ತು ವಿಶ್ಲೇಷಣೆ ಮಾಡಿದ್ದಾರೆ.

ಜುಂಜಪ್ಪನ ಕಾವ್ಯಗಳನ್ನು ಮಹಿಳೆ ಹಾಗೂ ಪುರುಷರು ಹಾಡಿದಂತೆ ಕ್ಯಾತಪ್ಪನ ಕಾವ್ಯಗಳನ್ನು ಪ್ರಧಾನವಾಗಿ ಮಹಿಳೆಯರೇ ಹಾಡುತ್ತಾರೆ. ಇವರು ಹಾಡಿದ ಪದಗಳಲ್ಲಿ ಕ್ಯಾತಪ್ಪನ ಕತೆ ವಿಸ್ತರಿಸಿಕೊಂಡಿದೆ. ಕ್ಯಾತಪ್ಪ ಕೂಡ ಕಲ್ಯಾಣ ಅಥವಾ ಕಲ್ಯಾಣಪುರ ಕಲ್ಪನೆಯ ಪರದಿಯಲ್ಲಿ ಬರುವ ಒಬ್ಬ ದನಗಾಹಿ. ಕ್ಯಾತಪ್ಪ ಮತ್ತು ಲಿಂಗಣ್ಣ ಈ ನಾಯಕರಿಬ್ಬರೂ ಕಲ್ಯಾಣಪುರ (ಆಂಧ್ರಪದೇಶದ ಕಲ್ಯಾಣದುರ್ಗ)ದಿಂದ ಬಂದವರು ಎಂದು ಹೇಳುತ್ತದೆ. ಇಬ್ಬರೂ ಕಲ್ಯಾಣದ ಕಡೆಯಿಂದ ಮಧ್ಯಕರ್ನಾಟಕಕ್ಕೆ ಹೊರಟು ಬಂದವರು. ಚಿತ್ರದುರ್ಗ ಜಿಲ್ಲೆಯನ್ನೇ ತನ್ನ ನೆಲೆ ಮಾಡಿಕೊಂಡು ತಮ್ಮ ಕುಲವನ್ನು

ಸಂಘಟಿಸಿದಂತೆ ಕಾಣುತ್ತದೆ. ಈ ಇಬ್ಬರೂ ಸಮಕಾಲೀನರೇ ಎಂಬುವುದು ಗೊತ್ತಿಲ್ಲ. ಆದರೆ ಬೊಮ್ಮಣ್ಣ ಕಾಡುಗೊಲ್ಲರ ಕುಲದವನು, ಕ್ಯಾತಪ್ಪನು ಕೂಡ ಅದೇ ಸಮುದಾಯದ ವ್ಯಕ್ತಿ. ಬೊಮ್ಮಣ್ಣ ಅಳವೂನೋರ ಕುಲದವನೆಂದು ತರ್ಕಿಸಲಾಗುತ್ತದೆ.

ಕ್ಯಾತಪ್ಪನ ಕಾರ್ಯ, ನಿಷ್ಠೆ, ಸ್ವಭಾವವನ್ನು ಒಪ್ಪಿ ಆತನಿಗೆ ಒಕ್ಕಲಾದವರನ್ನು ಬೊಮ್ಮನ ಹಾಗೂ ಕೋಣನ ಬೆಡಗಿನ ಕಾಡುಗೊಲ್ಲರು ಎಂದು ಕರೆಯಲಾಗುತ್ತದೆ. ಈ ಬೆಡಗುಗಳ ಪೂಜಾರಿಗಳು, ದಾಸಯ್ಯಗಳು ಹಾಗೂ ಗೌಡರು ಕ್ಯಾತಪ್ಪನ ಪುರಾಣವನ್ನು ಕತೆಯ ರೂಪದಲ್ಲಿ ಹೇಳುವ, ಮಹಿಳೆಯರು ಕಾವ್ಯದಲ್ಲಿ ಹಾಡುವ ಸಂಪ್ರದಾಯ ರೂಢಿಸಿಕೊಂಡಿದ್ದಾರೆ. ಇವರ ಕತೆ ಹಾಗೂ ಕಾವ್ಯಗಳಲ್ಲಿ ಕ್ಯಾತಪ್ಪನ ಹುಟ್ಟು, ದನಕರುಗಳ ಪೋಷಣೆ, ಸಾಕಾಣೆ, ಬೊಮ್ಮಣ್ಣನಿಗೆ ಒಲಿದಿದ್ದು, ರೆಡ್ಡಿಗರನ್ನು ಹಾಳುಮಾಡಿದ್ದು, ಮತ್ಸಮುದ್ರದ ಹನುಮಂತರಾಯನ ಪೂಜಾರಿಗೆ ಒಲಿದಿದ್ದು, ಕರಿಯಣ್ಣ, ಸಿರಿಯಣ್ಣ, ನಾಗಮ್ಮ ಮತ್ತು ಸಿರಿಯಮ್ಮ ಅವರುಗಳ ಜೊತೆ ವಸತಿ ದಿಬ್ಬದಲ್ಲಿ ನೆಲೆ ನಿಂತದ್ದು, ಗೌರಸಂದ್ರದ ಮಾರಮ್ಮನ ಮೂಲಕ ದುರ್ಗದಲ್ಲಿ ಕ್ಷಾಮ ಹರಡಿದ್ದು, ದೊರೆಗಳಿಗೆ ತೊಂದರೆ ಉಂಟುಮಾಡಿದ್ದು, ಜೋಗಿ ವೇಷ ಹಾಕಿಕೊಂಡು ತಲೆ ಮರೆಸಿಕೊಂಡಿದ್ದು ಮುಂತಾದ ಹಲವು ಕಥಾ ಭಾಗಗಳಿವೆ.

ಕ್ಯಾತಪ್ಪನ ಪರಂಪರೆಯಲ್ಲಿ ಬಹು ಮುಖ್ಯವಾಗಿ ಕಾಣುವ ಅಂಶವೆಂದರೆ ಅತಿಮಾನುಷ ಪವಾಡಗಳನ್ನು ಮೆರೆಯುವುದು. ಮಾಟ–ಮಂತ್ರಗಳಿಂದ ದನಕರುಗಳನ್ನು ಅದಲು ಬದಲು ಮಾಡಿದ್ದು, ತಾನು ಸಹ ವೇಷ ಮರೆಸಿಕೊಂಡಿದ್ದು, ಕ್ಯಾತಪ್ಪ ಒಬ್ಬ ದನಗಾಹಿ ಸದಾ ಕಾಡಿನಲ್ಲಿ ಪಯಣ ಮಾಡುವಂತವನು. ಏನೂ ಇಲ್ಲದ ಬೈರಾಗಿಯಂತೆ ಸರಳ ಜೀವನ ನಡೆಸಿದವನು. ಕಲ್ಯಾಣಪುರದಲ್ಲಿ ಕೆಳಜಾತಿ ದೈವಗಳ ಮೇಲಿನ ಪ್ರೀತಿ ಕಡಿಮೆಯಾಗದಂತೆ ಇತರೇ ಧರ್ಮಗಳಂತೆಯೇ ಸಾಂಸ್ಥಿಕ ರೂಪವನ್ನು ನೀಡಿದವನು. ಅಂಥ ಸಂದರ್ಭದಲ್ಲಿ ಬಹುಶಃ ಬಸವಣ್ಣ, ಅಲ್ಲಮಪ್ರಭುಗಳ ನಂತರದ ಒಂದೆರಡು ಶತಮಾನಗಳಲ್ಲಿ ಈ ನಾಯಕರುಗಳು ಅಂಥ ಒಂದು ಸಾಂಸ್ಥಿಕ ಸ್ವರೂಪದ ಮತ್ತು ಧರ್ಮದ ವಿರುದ್ಧ ಒಂದು ಪರ್ಯಾಯ ಧರ್ಮವನ್ನು ಕಟ್ಟುವ ಹಂಬಲದಿಂದ ಈ ಕಡೆ ಬಂದಂತೆ ಕಾಣುತ್ತದೆ. ಈ ಕಾರಣದಿಂದಾಗಿಯೇ ಶೂದ್ರ ಮತ್ತು ಅರೆಶೂದ್ರರು ಈ ನಾಯಕರಿಗೆ ಒಕ್ಕಲಾಗಿರುವಂತೆ ಕಾಣುತ್ತದೆ. ಎಲ್ಲಾ ಕೆಳವರ್ಗದವರನ್ನು ಸಂಘಟಿಸಿದಂತೆ ದನಗಾಹಿಗಳನ್ನು ಒಟ್ಟುಗೂಡಿಸುವ ಕಲ್ಯಾಣದ ಆಶಯವನ್ನು ನಂತರದ ಶತಮಾನಗಳಲ್ಲಿ ಈ ಇಬ್ಬರು ಈಡೇರಿಸಿದಂತೆ ಕಾಣುತ್ತದೆ.

ಅದರ ಕುರುಹಾಗಿ ವಿವಿಧ ಸಮುದಾಯಗಳ ಅಪಾರ ಭಕ್ತ ಸಮೂಹ ಇಂದಿಗೂ ಕಂಡು ಬರುತ್ತಿದ್ದಾರೆ. ಕ್ಯಾತಪ್ಪನ ಕೇಂದ್ರಸ್ಥಾನ ಪುರ್ಲೆಹಳ್ಳಿ ಬಳಿಯ ಕುರುಚಲು ಕಾಡಿನ

ಮಧ್ಯೆ ಇರುವ ವಸತಿದಿಬ್ಬ. ಇವತ್ತಿಗೂ ಬಟಬಯಲಾಗಿ ಉಳಿದಿದೆ. ಪ್ರತಿವರ್ಷ ಕಾಡುಗೊಲ್ಲ ಸಮುದಾಯದ ಹದಿಮೂರು ಗುಡಿಕಟ್ಟಿನವರು ಸೇರಿ ಒಂದು ತಿಂಗಳ ಕಾಲ ವಿಜೃಂಭಣೆ ಹಾಗೂ ಭೀತಿಯ ವೈಶಿಷ್ಟ್ಯವಾಗಿ ಜಾತ್ರೆ ಆಚರಿಸುತ್ತಾರೆ. ಈ ಜಾತ್ರೆಗೆ ಸಾವಿರಾರು ಸಂಖ್ಯೆಯಲ್ಲಿ ಜನರು ಸೇರಿ ತಮ್ಮ ತಮ್ಮ ಹರಕೆಗಳನ್ನು ಒಪ್ಪಿಸಿ ಪೂಜೆ ಸಲ್ಲಿಸುತ್ತಾರೆ. ಹುರುಳಿ-ನವಣೆ ಕಟ್ಟುನಿಟ್ಟಿನ ವ್ರತಾಚರಣೆ ಮಾಡುತ್ತಾರೆ. ಈ ಜಾತ್ರೆಯನ್ನು ಸುಗ್ಗಿ ಮುಗಿದ ನಂತರ ಮಾಗಿಯ ಕಾಲದಲ್ಲಿ ಆಚರಿಸಲ್ಪಡುವುದು ರೂಢಿ. ಸಾಮಾನ್ಯವಾಗಿ ದುಡಿದ ದಣಿತ ರೈತ ವರ್ಗಕ್ಕೆ ವಿಶ್ರಾಂತಿ ನೀಡುವ ಉದ್ದೇಶದಿಂದ ಜಾತ್ರೆಗಳು ಅಸ್ತಿತ್ವಕ್ಕೆ ಬಂದಿವೆ. ಒಬ್ಬ ವ್ಯಕ್ತಿಯ ಹಿತ ಆ ವ್ಯಕ್ತಿಯ ಸಮುದಾಯದ ಹಿಡಿತದಲ್ಲಿ ಅಡಗಿದೆ. ಈ ಕಾರಣದಿಂದಾಗಿ ಇಡೀ ಸಮುದಾಯ ಒಂದುಗೂಡಿ ತಮ್ಮ ಬೇಸರವನ್ನು ಕಳೆಯಲು ಜಾತ್ರೆಗಳನ್ನು ಆಚರಿಸತೊಡಗಿದರು.

ಕ್ಯಾತೆದೇವರ ಜಾತ್ರೆ ಈ ಭಾಗದ ಸುಗ್ಗಿ ಮುಗಿದ ನಂತರ ಆಚರಿಸಲ್ಪಡುತ್ತದೆ. ಸಂಪ್ರದಾಯದಂತೆ ಕಾರ್ತಿಕ-ಮಾರ್ಘಶಿರ ಮಾಸದಲ್ಲಿ ಕಾಡುಗೊಲ್ಲ ಸಮುದಾಯದ ಹದಿಮೂರು ಗುಡಿಕಟ್ಟಿನ ಭಕ್ತಾಧಿಗಳು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಚನ್ನನಾಗತಿಹಳ್ಳಿಯ ಕ್ಯಾತೆದೇವರ ದೇಸ್ಥಾನದಲ್ಲಿ ಸಭೆ ಸೇರಿ ಚರ್ಚಿಸಿ ಜಾತ್ರಾ ಆಚರಣಾ ದಿನಾಂಕವನ್ನು ನಿಗಧಿಪಡಿಸುತ್ತಾರೆ. ಮಾರ್ಘಶಿರ-ಪುಷ್ಯ ಮಾಸದಲ್ಲಿ ಈ ಜಾತ್ರೆ ಒಂದುತಿಂಗಳ ಕಾಲ ನಡೆಯುತ್ತದೆ. ಜಾತ್ರೆ ಕಾರ್ಯಕ್ರಮಗಳು ಗುರುವಾರದಂದು ಆರಂಭವಾಗಿ ಗುರುವಾರವೇ ಅಂತ್ಯಗೊಳ್ಳಬೇಕು ಎಂಬುವುದು ಈ ಸಮುದಾಯದವರ ನಂಬಿಕೆ. ಅನಿವಾರ್ಯ ಸಂದರ್ಭಗಳಲ್ಲಿ ಸೋಮವಾರದಂದು ಆರಂಭವಾಗಿ ಗುರುವಾರವೇ ಅಂತ್ಯಗೊಳ್ಳಬೇಕು. ಅಲ್ಲದೆ ಕೇತೆದೇವರು ತಮ್ಮ ಸಮುದಾಯದವರಿಗೆ ಈ ರೀತಿಯಾಗಿ ಆಜ್ಞಾಪಿಸಿದ್ದ ಎಂಬ ನಂಬಿಕೆ ಇವರಲ್ಲಿ ಈಗಲೂ ಇದೆ. ಕೇತಪ್ಪ, ಹಾಲುಕುಡಿದಪ್ಪ, ಹಾಲುಕೇತೇಲಿಂಗ, ಹಾಲ್ಕಂಬಿಕೇತೇಲಿಂಗ, ಹಿರೇಕೇತೇಲಿಂಗ, ಕೇದಾರಲಿಂಗ, ಹಿಮವತ್ ಕೇತೇಲಿಂಗ, ರೇವಣ್ಣ, ಜಡಿಯಪ್ಪ, ಕೆಂಜಡಿಯಪ್ಪ, ನಿಂಗಣ್ಣ, ಮಹಾಲಿಂಗ, ಲಿಂಗಣ್ಣ, ಕೇತೇಲಿಂಗೇಶ್ವರ, ಕ್ಯಾತಪ್ಪ, ಹಾಗೂ ಬತದ ದೇವರು ಅಥವಾ ವ್ರತದ ದೇವರು ಹೀಗೆ ಕ್ಯಾತಪ್ಪನ ಪರಂಪರೆ ಮುಂದುವರೆದು ಬಂದಿರುವುದು ಕಂಡು ಬರುತ್ತದೆ. ಹಾಲ್ಕಂಬಿ ಕೇತೇಲಿಂಗ, ಕಲ್ಲೇಲಿಂಗ, ಮಲ್ಲೇಲಿಂಗ, ಕದರಿನರಸಿಂಹ, ತುಪ್ಪದ ನರಸಿಂಹ, ಗುಂಡಕಲ್ಲು ನರಸಿಂಹ, ಡಮಗಿನ ನರಸಿಂಹ, ಹೀಗೆ ಕ್ಯಾತಪ್ಪನ ಪರಂಪರೆ ಮುಂದುವರೆದಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಈ ಕ್ಯಾತಪ್ಪನ ಆರಾಧಕರು ಬುಡಕಟ್ಟು ಸಂಸ್ಕೃತಿಯ ಆಚರಣೆಗಳನ್ನೇ ಹೊಂದಿದ್ದು ಕತೆಗಳನ್ನು ಯಾವುದೇ ಬೇದ ಭಾವವೂ ಇಲ್ಲದೆ ಹೇಳುತ್ತಾರೆ. ಕತೆ

ಹೇಳುವ ಶೈಲಿ, ತಂತ್ರ, ನಿರೂಪಣೆ ಹಾಗೂ ಕಥನ ರೂಪಗಳು ಮಾತ್ರ ಅವರವರ ಆಲೋಚನೆಯ ಹಿನ್ನೆಲೆಯಲ್ಲಿ ಇರುತ್ತದೆ. ಜಾತ್ರಾ ಆಚರಣ ಸಂದರ್ಭದಲ್ಲಿ ಕಾಡುಗೊಲ್ಲ ಸಮುದಾಯದವರು ಜಾತ್ರೆ ಆರಂಭದಿಂದ ಹಿಡಿದು ಅಂತ್ಯದವರೆಗೂ ಮಡಿ, ಮೈಲಿಗೆ, ಹುರುಳಿ ಮತ್ತು ನವಣೆ ವ್ರತವನ್ನು ಒಂದು ತಿಂಗಳ ಕಾಲ ಕಟ್ಟು ನಿಟ್ಟಾಗಿ ಪಾಲಿಸುತ್ತಾರೆ. ಈ ಅವಧಿಯಲ್ಲಿ ಚಿತ್ರದುರ್ಗ ಜಿಲ್ಲೆ ಅತಿ ಉಷ್ಣಾಂಶದಿಂದ ಕೂಡಿರುತ್ತದೆ. ಕಾಡುಗೊಲ್ಲ ಬುಡಕಟ್ಟು ಸಮುದಾಯದ ಜನ ದೈಹಿಕ ಶ್ರಮಾಧಾರಿತ ವ್ಯವಸಾಯ, ಪಶುಪಾಲನೆ, ಕುರಿಸಾಕಾಣಿಕೆಯಲ್ಲಿ ತೊಡಗಿಸಿಕೊಂಡು ಬಿರಿ ಬಿಸಿಲಲ್ಲಿ ಒಣಗುತ್ತಾರೆ. ಹುರುಳಿ ಮತ್ತು ನವಣೆ ಧಾನ್ಯಗಳು ಕಾವು ಪದಾರ್ಥಗಳಾಗಿದ್ದು ಇವುಗಳ ನಿಷೇಧ ಅವರ ಆರೋಗ್ಯವನ್ನು ಕೇಂದ್ರಿಕರಿಸಿಕೊಂಡಿದೆ ಎನ್ನಬಹುದು. ಈ ಸಮುದಾಯದ ಜನರು ಸಸ್ಯ ಹಾಗೂ ಮಾಂಸಹಾರಿಗಳಾಗಿದ್ದರೂ ಈ ಜಾತ್ರೆಯ ಒಂದು ತಿಂಗಳ ಕಾಲಾವಧಿಯವರೆಗೆ ಹುರುಳಿ ಮತ್ತು ನವಣೆಯನ್ನು ಸಂಪೂರ್ಣವಾಗಿ ನಿಷೇಧಿಸಿ ಮಾಂಸಹಾರವನ್ನು ಮುಟ್ಟದೆ ಕೆಲವೇ ಕೆಲವು ಸಸ್ಯ ಆಹಾರವನ್ನು ಸೇವಿಸುತ್ತಾರೆ. ಈ ಸಂದರ್ಭ ವ್ರತದ ಕಾಲವಾಗಿರುವುದರಿಂದ ಮದ್ದು ಮಾಂಸ ನಮ್ಮ ದೇವರಿಗೆ ಆಗುವುದಿಲ್ಲ ಎಂದು ನಂಬಿದ್ದಾರೆ. ಮೂಲದಲ್ಲಿದ್ದ ಕೆಲವು ಆಚರಣೆಗಳು ಯಥಾವತ್ತಾಗಿ ಇಂದಿಗೂ ಜಾರಿಯಲ್ಲಿದ್ದರೂ ಅವು ಅನೇಕ ಬಗೆಯಲ್ಲಿ ಭಿನ್ನ ಸಂಸ್ಕೃತಿಗಳ ಮತ್ತು ಆಧುನಿಕ ಸಂಪರ್ಕದ ಕಾರಣದಿಂದಾಗಿ ರೂಪಾಂತಾರಗೊಂಡು ಅಸ್ತಿತ್ವದಲ್ಲಿರುವುದನ್ನು ಗುರುತಿಸಲಾಗಿದೆ.

**ಅಡಿ ಟಿಪ್ಪಣಿ**

೧. ಗೌಡರ ಸೋಮಶೇಖರಪ್ಪ, ಸಾಮಾಜಿಕ ಬದಲಾವಣೆಯಲ್ಲಿ ಶಿಳ್ಳೇಕ್ಯಾತರು ಪುಟ,೧

೨. ಮೂರ್ತಿರಾವ್ ಎ.ಎನ್. ದೇವರು, ಪುಟ ೧೧ ಮತ್ತು ೧೨

೩. ಅದೇ ಪು

೪. ತಂಬಡ ವಿಜಯ್‌ಪೊಣಚ್ಚ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-ಉಟ ೭೨

೫. ಜಗನ್ನಾಥ ಹೆಬ್ಬಾಳೆ, ಹೈದರಬಾದದ ಕರ್ನಾಟಕದ ಜಾತ್ರೆಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪುಟ೩.

೬. ಬಾಮಿನಿ ರಾಘವಯ್ಯ, ಕೊಡಗಿನ ಬುಡಕಟ್ಟುಗಳು,೨೦೦೭, ಪುಟ ೪.

೭. ಹಂಪ ನಾಗರಾಜಯ್ಯ, ಕರ್ನಾಟಕದ ಜಾತ್ರೆಗಳು ೧೯೯೫, ಪುಟ ೧೨.

೮. ಅದೇ ೧೯೯೫, ,ಪುಟ೨೫

೯. ಕನ್ನಡ ವಿಶ್ವಕೋಶ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ೧೯೯೭, ಪುಟ ೩೬.

೧೦. ತಿಪ್ಪೆಸ್ವಾಮಿ.ಜಿ.ಆರ್. ಜಾನಪದ ಪರಿಭಾವನೆ, ೨೦೦೧ ಪುಟ ೬೩.

೧೧. ಶಿವಕುಮಾರಸ್ವಾಮಿ,ಸಿ.ಎಸ್ ಕರ್ನಾಟಕದ ಜಾತ್ರೆಗಳು ೧೯೯೮, ಪುಟ ೬೮.

೧೨. ಈಶ್ವರಪ್ಪ.ಎಂ.ಜಿ.ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜನಪದ, ಪುಟ ೪೦೨

೧೩. ಎರಿಕ್ ವೋನ್ ಡಾನಿಕನ್, ದೇವರು-ದೇವಾಲಯ ವಿಸ್ಮಯ ಪ್ರಕಾಶನ ೨೦೦೮, ಪುಟ,೧

೧೪. ಮೀರಾಸಾಬಿಹಳ್ಳಿ ಶಿವಣ್ಣ, ವೇದಾವತಿ ವಾರ್ಷಿಕ ಸಂಚಿಕೆ ೨೦೦೩, ಪುಟ ೪೭

೧೫. ತಿಪ್ಪೇಸ್ವಾಮಿ ಜಿ.ಆರ್. ಕೋಲಾರಮ್ಮ ಪುಟ ೩೪-೩೫

೧೬. ನೀಲಗಾರರು ಸಂಕಥನ- ಸಿ.ಟಿ.ಗುರುಪ್ರಸಾದ್, ಪುಟ ೧೩೯,

೧೭. ಮೀರಾಸಾಬಿಹಳ್ಳಿ ಶಿವಣ್ಣ- ಸಿರಿಯಜ್ಜಿ ಸಂಸ್ಕೃತಿ ಕಥನ ಪುಟ, ೧೧೪

೧೮. ಹೆಬ್ಬಾಲೆ ಕೆ.ನಾಗೇಶ್, ಬಹು ಸಂಸ್ಕೃತಿ ಮತ್ತು ದೇಶಿ ಜಾತ್ರೆಗಳ ಮಹಾ ಸಮನ್ವಯ ಪುಟ ೫-೬

೧೯. ನಿಂಗಣ್ಣ ಟಿ.ಸಿ., ಜಾಗತಿಕರಣ-ಜಾತ್ರೆಗಳು ಪುಟ ೩೭

## ಅಧ್ಯಾಯ ೭

# ಸಮಾರೋಪ

ಆಧುನಿಕ ಜೀವನದ ವೈಜ್ಞಾನಿಕ ಮತ್ತು ವೈಚಾರಿಕ ಬೆಳವಣಿಗೆಯಲ್ಲಿ ಅಂದಿನಿಂದ ಇಂದಿನವರೆಗೂ ನಡೆದುಕೊಂಡು ಬಂದ ಜನಪದ ಸಂಸ್ಕೃತಿ, ಸಂಪ್ರದಾಯ, ನಂಬಿಕೆ, ಆಚರಣೆ, ಹಾಗೂ ಭಯ, ಭಕ್ತಿ ಮುಂತಾದ ವಿಚಾರಗಳೆಲ್ಲವೂ ಜಾಗತಿಕರಣಕ್ಕೆ ಒಳಗಾಗುತ್ತಲಿವೆ. ಮುಂದೊಂದು ದಿನ ಈ ಅಂಶಗಳೆಲ್ಲವೂ ಅರ್ಥಹೀನವಾಗಿ, ಕಣ್ಮರೆಯಾಗುವ ಸಾಧ್ಯತೆಗಳಿವೆ. ಪರಿಸ್ಥಿತಿ ಹೀಗೆ ಮುಂದುವರೆದರೆ ಅವುಗಳಿಗೆ ಅರ್ಥ ವೈಶಿಷ್ಟ್ಯತೆಯನ್ನು ಕಲ್ಪಿಸುವುದು ಕಷ್ಟವಾಗುತ್ತದೆ. ಆದ್ದರಿಂದ ವರ್ತಮಾನದ ಈ ಹೊತ್ತಿನಲ್ಲಿ ಬುಡಕಟ್ಟು ದೈವಗಳ ಆಚರಣೆಗಳ ಅಧ್ಯಯನ ಮತ್ತು ಅರ್ಥಗ್ರಹಿಕೆಗಳು ನಡೆಯುವುದು ಹೆಚ್ಚು ಸೂಕ್ತ. ಈ ನೆಲೆಯಲ್ಲಿ ಇದೊಂದು ಮೌಲಿಕವಾದ ಅಧ್ಯಯನವಾಗುತ್ತದೆ. ದೈವಗಳ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಧಾರ್ಮಿಕ ಹಿನ್ನಲೆಗಳಲ್ಲಿ ಸಂಶೋಧನೆ ಮಾಡಲಾಗಿದೆ. ಇಂದಿನ ಅಧ್ಯಯನಗಳು ಸ್ಥಳೀಯ ಸಂಸ್ಕೃತಿಯನ್ನು ಗಂಭೀರ ಮತ್ತು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸುತ್ತಿವೆ. ಈ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಸಾಂಸ್ಕೃತಿಕ ಅನನ್ಯತೆಯಿಂದ ಕೂಡಿದ ಕ್ಯಾತಪ್ಪ ದೈವಗಳ ಸಾಂಸ್ಕೃತಿಕ ಅಧ್ಯಯನವು ಅತ್ಯಂತ ಮಹತ್ವ ಪಡೆದುಕೊಳ್ಳುತ್ತದೆ.

ಈ ತರದ ಅಧ್ಯಯನಗಳು ಫಲಕಾರಿಯಾಗಬೇಕಾದರೆ ಆ ಆರಾಧನಾ ನೆಲೆಗಳಲ್ಲಿ ದೊರಕುವ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಸಂಗ್ರಹಿಸಿ ವೈಜ್ಞಾನಿಕ ಮತ್ತು ವೈಚಾರಿಕ

ಚಿಂತನೆಗೆ ಒಳಪಡಿಸಬೇಕಾಗುತ್ತದೆ. ಹೀಗೆ ಒಂದು ಭೌಗೋಳಿಕ ಪ್ರದೇಶದಲ್ಲಿ ನಡೆಯುವ ಬುಡಕಟ್ಟು ಸಮುದಾಯದ ಆರಾಧ್ಯ ದೈವದ ಜಾತ್ರೆ, ಆಚರಣೆ, ಸಂಪ್ರದಾಯ ಹಾಗೂ ನಂಬಿಕೆಯನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುವುದರಿಂದ ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ, ಹಾಗೂ ಜಾನಪದೀಯವಾದ ಜಾತ್ರಾ ಕ್ಷೇತ್ರದ ವಿನ್ಯಾಸವನ್ನು ಒಳಗೊಂಡಂತೆ ಅನೇಕ ಮಾಹಿತಿಗಳು ಲಭ್ಯವಾಗುತ್ತವೆ. ಈ ಹಿನ್ನಲೆಯಿಂದ 'ಕರ್ನಾಟಕದ ಕ್ಯಾತಪ್ಪನ ದೈವಗಳು: ಸಾಂಸ್ಕೃತಿಕ ಕಥನ' ಕುರಿತಂತೆ ಅಧ್ಯಯನ ಮಾಡಿ ಅಲ್ಲಿನ ಎಲ್ಲಾ ರೀತಿಯ ಅತಿ ಮುಖ್ಯವಾದ ಅಂಶಗಳನ್ನು ಈ ಪ್ರಬಂಧದಲ್ಲಿ ಶೋಧಿಸಲಾಗಿದೆ.

ದೈವದ ಜಾತ್ರೆಯಲ್ಲಿ ನಡೆಯುವ ಪ್ರತಿಯೊಂದು ಆಚರಣೆಗಳಲ್ಲಿ ಬುಡಕಟ್ಟು ಸಂಸ್ಕೃತಿಯ ಅಂತಃಸತ್ವ ನೆಲೆಗೊಂಡಿರುತ್ತದೆ. ಇದು ಜನಪದರ ಜೀವನದ ಆಗು–ಹೋಗುಗಳ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರಿರುತ್ತದೆ. ಒಂದು ಪ್ರದೇಶದ ಜನ ಸಂಸ್ಕೃತಿಯೊಳಗೆ ಇದ್ದಿರಬಹುದಾದ ಅಂಶಗಳು ಜಾತ್ರೆಯಲ್ಲಿನ ಎಲ್ಲಾ ಆಚರಣೆಗಳ ಮೂಲಕ ಅಭಿವ್ಯಕ್ತವಾಗುತ್ತವೆ. ಅಲ್ಲಿನ ಭಾಷೆ, ಸಂಸ್ಕೃತಿ, ಜನಪದ ಕಲೆಗಳು, ಉಡುಗೆ ತೊಡುಗೆ, ಆಚಾರ–ವಿಚಾರ, ಆಚರಣೆಗಳು, ನಂಬಿಕೆ, ಸಂಪ್ರದಾಯಗಳು ಹೀಗೆ ಹಲವು ಅಂಶಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಆರಾಧನೆ, ಹಬ್ಬ ಹರಿದಿನಗಳು ಹಾಗೂ ಜಾತ್ರೆಗಳಲ್ಲಿ ನಡೆಸುವ ಆಚರಣೆಗಳಲ್ಲಿನ ಶಕ್ತಿ, ಸಾಮರ್ಥ್ಯ, ದೇಶಿ ಸಂಸ್ಕೃತಿಯ ಪ್ರಜ್ಞೆ ಮತ್ತು ಮಾನವೀಯ ಸಂಬಂಧಗಳನ್ನು ಸೂಕ್ಷ್ಮವಾಗಿ ಅರಿತು ಗುರುತಿಸಲಾಗಿದೆ. ಇವೆಲ್ಲವೂ ಆ ಬುಡಕಟ್ಟು ಸಮುದಾಯದ ಹಾಗೂ ಅವರು ನೆಲೆಸಿರುವ ನೆಲೆಗಳ ಮನೋಧರ್ಮವನ್ನು ಪ್ರತಿನಿಧಿಸುವ, ಅಭಿವ್ಯಕ್ತಿಸುವ ಆಕರಗಳಾಗಿ ಕಂಡುಬರುತ್ತವೆ.

ದೈವವನ್ನು ಕುರಿತ ಕಲ್ಪನೆ, ಅತಿಮಾನುಷ ಶಕ್ತಿ, ಪವಾಡ, ಪುರಾಣ, ಐತಿಹ್ಯ, ಮುಂತಾದ ಆಚರಣೆಗಳನ್ನು ಈ ಸಂದರ್ಭದಲ್ಲಿ ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ. ಅಲ್ಲದೆ ಜೀವಪರ ಮತ್ತು ಜೀವ ವಿರೋಧಿಯ ಅಂಶಗಳು ಸಾಂಸ್ಕೃತಿಕ ವಾಹಕವಾಗಿ ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ. ಜನಪದರ ಸಾಮಾಜಿಕ, ಧಾರ್ಮಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಂಶಗಳು ಒಂದು ಭೌಗೋಳಿಕ ಪ್ರದೇಶದಲ್ಲಿ ನಡೆಯುವ ಜಾತ್ರಾಚರಣೆಗಳ ಸ್ವರೂಪದ ರಚನೆಗೆ ವಸ್ತುವಾಗುತ್ತವೆ. ಪ್ರಾದೇಶಿಕವಾಗಿ ಸಿಗುವ ವಿವಿಧ ಬಗೆಯ ಸಂಪ್ರದಾಯ ಮತ್ತು ಆಚರಣೆಗಳನ್ನು ಅಧ್ಯಯನದ ಶಿಸ್ತಿಗೆ ಒಳಪಡಿಸಿ ಜನಪದ ದೈವಗಳ ಜಾತ್ರೆಯ ಸಂದರ್ಭವನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಈ ಅಧ್ಯಯನದಿಂದ ಬುಡಕಟ್ಟು ಸಂಸ್ಕೃತಿಯ ಆಚರಣೆ, ಜಾತ್ರೆಗಳ ವೈವಿಧ್ಯತೆ, ಮತ್ತು ವೈರುಧ್ಯತೆಗಳನ್ನು ಅರ್ಥಮಾಡಿಕೊಳ್ಳಲಾಗಿದೆ. ದೈವಗಳ ಪುರಾಣಗಳಿಂದ ಸಿಗುವ ಮಾಹಿತಿಗಿಂತ, ಜನಪದರು ಅನುಸರಿಸಿಕೊಂಡು

ಬರುತ್ತಿರುವ ಬುಡಕಟ್ಟು ಸಮುದಾಯದ ಆಚರಣೆ ಪರಂಪರೆಯೆಲ್ಲವೂ ಆ ಸಮುದಾಯದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಕಾರಣ ಇವೆಲ್ಲವೂ ಜನಪದರನ್ನು ಜೀವಂತವಾಗಿರಿಸಿದ ದೀರ್ಘಕಾಲದ ಮೌನ ಸಂವೇದನೆಗಳಾಗಿವೆ. ಒಂದು ನಿರ್ದಿಷ್ಟವಾದ ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಿರುವ ಜನಪದರ ಸಾಂಸ್ಕೃತಿಕ ಚರಿತ್ರೆಯನ್ನು ಗ್ರಹಿಸಲು ಸಂಪ್ರದಾಯ ಹಾಗೂ ಆಚರಣೆಗಳು ಸಹಾಯಕವಾಗಿವೆ. ಇಲ್ಲಿನ ಸಾಂಸ್ಕೃತಿಕ ಅನುಭವಗಳನ್ನು ಸಮಕಾಲೀನತೆಯ ಜೊತೆಗೆ ನಿರ್ವಹಿಸುವಾಗ ದೈವಗಳ ಜಾತ್ರೆಯಲ್ಲಿನ ಸಂಪ್ರದಾಯಗಳ ಬಹುರೂಪಿ ಲಕ್ಷಣಗಳು ವ್ಯಕ್ತವಾಗುವುದನ್ನು ಗುರುತಿಸಲಾಗಿದೆ. ಬುಡಕಟ್ಟು ದೈವದ ಜಾತ್ರೆಯಲ್ಲಿ ನಡೆಸುತ್ತಿರುವ ಹರಕೆ, ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಕುರಿತಂತೆ ನಡೆಸಲಾದ ಅಧ್ಯಯನದಿಂದ ಬುಡಕಟ್ಟು ಸಂಸ್ಕೃತಿ ಆಚರಣೆಗಳ ಮಹತ್ವವನ್ನು ಒರೆಹಚ್ಚಿದಂತಾಗಿದೆ.

ಜನರು ತಮ್ಮ ಸಮುದಾಯದೊಳಗಿನ ಹಲವು ಬೆಡಗುಗಳು ಮತ್ತು ಕೆಲ ಜಾತಿಗಳೊಂದಿಗೆ ಸ್ನೇಹ, ಸೌಹಾರ್ಧ, ಸಹಬಾಳ್ವೆ ಬಂಧುತ್ವ ಅಥವಾ ಸಾಮರಸ್ಯಕ್ಕೆ ಮಹತ್ವದ ಸ್ಥಾನಮಾನ ನೀಡಿವೆ. ಅಷ್ಟೆ ಅಲ್ಲದೆ ಸಾಮಾಜಿಕ ಐಕ್ಯತೆಯನ್ನುಂಟು ಮಾಡಿವೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಚೌಕಟ್ಟು ಜಾತ್ರೆಯಲ್ಲಿ ಮೀರುವಂತಿರುತ್ತದೆ ಎಂದುಕೊಂಡರೂ, ಮತ್ತೊಂದು ದೃಷ್ಟಿಯಲ್ಲಿ ಜಾತಿ ವ್ಯವಸ್ಥೆಯನ್ನು ಭದ್ರಪಡಿಸುತ್ತದೆ. ದೈವಗಳನ್ನು ಹೊತ್ತು ನಿಲ್ಲುವ, ದೇವರುಗಳನ್ನು ಪೂಜಿಸುವುದರಿಂದ ಹಿಡಿದು ಹಬ್ಬ ಹರಿದಿನಗಳಲ್ಲಿ ನಡೆಮುಡಿ ಹಾಸುವವನು, ಪಂಜು ಹಿಡಿದವನು, ಘಂಟೆಯ ಸೇವೆ ಸಲ್ಲಿಸುವ ಹೆಳವ, ಒಳಮರ ತರುವ ತಳವಾರ, ಹೊಸ ಚಪ್ಪಲಿ ಏರಿಸುವ ಹರಿಜನರು, ವಾಲಗ ಬಾರಿಸುವವನವರೆಗೂ ಜಾತ್ರೆಯ ಬಹುಪಾಲು ಕೆಲಸಗಳನ್ನು ಜಾತಿವಾರು ಮತ್ತು ತಮ್ಮ ಸಮುದಾಯದ ಬೆಡಗುಗಳವಾರು ಹಂಚಿಕೆಯಾಗಿರುವುದನ್ನು ಕಾಣಬಹುದು. ಇದೊಂದು ಶ್ರೇಣೀಕರಣಗೊಂಡಿರುವ ಜಾತಿ ವ್ಯವಸ್ಥೆಯನ್ನು ಭದ್ರಗೊಳಿಸಲು ನಿರ್ಮಾಣಗೊಂಡಿರುವಂತೆ ಕಂಡು ಬರುತ್ತದೆ.

ಜಾತ್ರೆಯಲ್ಲಿ ಆಚರಿಸುವ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳಂತಹ ಅನೇಕ ಅಂಶಗಳ ಅಧ್ಯಯನವು ಬುಡಕಟ್ಟು ಸಂಸ್ಕೃತಿಯ ಮೂಲ ರೂಪವನ್ನು ಕಂಡುಕೊಳ್ಳಲು ಸಹಕಾರಿಯಾಗಿವೆ. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿನ ರೀತಿ–ನೀತಿ, ನಡೆ ನುಡಿಗಳು ನೆಲ ಮೂಲ ಸಂಸ್ಕೃತಿಯ ಮೇಲೆ ಸಾಕಷ್ಟು ಆಕ್ರಮಣಗಳನ್ನು ನಡೆಸಿವೆ. ಇವುಗಳ ಶೋಧನೆ ಇಂದು ಅಗತ್ಯವಾಗಿ ನಡೆಯಬೇಕಾದ ತುರ್ತು ಇದೆ. ಈ ನಿಟ್ಟಿನಲ್ಲಿ ಪ್ರಸ್ತುತ ಮಹಾ ಪ್ರಬಂಧವು ಸಾರ್ಥಕವಾದ ಅಂಶಗಳನ್ನು ತಿಳಿಸಿಕೊಡುತ್ತದೆ. ಕೇತಪ್ಪದೈವಗಳ ಹಬ್ಬ, ಜಾತ್ರೆ, ಉತ್ಸವಗಳನ್ನು ಸಾಮಾಜಿಕ, ಭೌಗೋಳಿಕ ಹಾಗೂ

ಪ್ರದರ್ಶನಾತ್ಮಕ ಸಿದ್ಧಾಂತಗಳ ಹಿನ್ನಲೆಯಲ್ಲಿ ಅಭ್ಯಸಿಸಲಾಗಿದೆ. ಈ ಸಿದ್ಧಾಂತಗಳಿಗೆ ಅನುಗುಣವಾಗಿ ಆಯಾ ನೆಲೆಗಳಲ್ಲಿ ನಡೆಯುವ ಜಾತ್ರೆ ಮತ್ತು ಆಚರಣೆಗಳನ್ನು ಕೂಲಂಕಷವಾಗಿ ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ಅಗತ್ಯವಿರುವ ಕಡೆ ಪೋಟೊಗಳೊಂದಿಗೆ ಆಚರಣೆಗಳ ವೈಶಿಷ್ಟ್ಯವನ್ನು ವಿವರಿಸಲಾಗಿದೆ. ಇದಕ್ಕೆ ಪೂರಕವಾಗಿ ಜಾತ್ರೆಗಳಲ್ಲಿ ಆಚರಣೆಗೊಳ್ಳುವ ಚಾರಿತ್ರಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಪರಿಚಯಿಸಲಾಗಿದೆ. ಇಂತಹ ಆಚರಣೆಗಳನ್ನು ಉಳಿಸಿಕೊಂಡು ಬರುತ್ತಿರುವ ಬುಡಕಟ್ಟು ಸಮುದಾಯವನ್ನು ಪ್ರಾಸಂಗಿಕವಾಗಿ ಪರಿಚಯಿಸಲಾಗಿದೆ. ಜಾತ್ರೆಗಳ ಆಚರಣೆಗಳು ಚಲನಶೀಲವಾದ್ದರಿಂದ ದಿನದಿಂದ ದಿನಕ್ಕೆ, ವರ್ಷದಿಂದ ವರ್ಷಕ್ಕೆ ಬದಲಾಗುತ್ತಾ ಹೋಗುತ್ತವೆ. ಇದರಿಂದ ಆಚರಣೆಗಳ ಮೂಲ ಬದಲಾಗಿವೆ. ಶಿಕ್ಷಣ, ಆಧುನಿಕ ಜೀವನ ಪದ್ಧತಿ, ಕಾನೂನಿನ ವ್ಯವಸ್ಥೆ ಇವುಗಳಿಂದ ಜನಪದರ ಹಳ್ಳಿಗಳಲ್ಲಿ ಬದಲಾವಣೆಗಳು ಸಹಜವಾಗಿವೆ. ಜನಪದರ ಹೊಸ ಆಚರಣೆಯ ಅಂಶಗಳು, ಹೊಸ ವಿಚಾರಗಳು ಬೆಳಕಿಗೆ ಬರುತ್ತವೆ. ಏನೇ ಆದರೂ ಜನಪದರ ಧಾರ್ಮಿಕ ನಂಬಿಕೆ ಮುಂದುವರೆದುಕೊಂಡು ಬರುತ್ತವೆ. ಆದರೂ ಕೆಲವು ಆಚರಣೆಗಳು ಇತ್ತೀಚೆಗೆ ಸುಧಾರಣೆಗೊಳ್ಳುತ್ತಿವೆ. ಹೀಗೆ ಸುಧಾರಣೆಗೊಳ್ಳುತ್ತಿರುವ ಆಚರಣೆಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಕೇತಪ್ಪನ ದೈವದ ಜಾತ್ರೆ ಜನರ ಬದುಕು ಜೀವನಕ್ಕೆ ಮಹತ್ವದ್ದಾಗಿದೆ. ನೊಂದು ಬೆಂದಿರುವ ಜೀವನಗಳಿಗೆ ಜಾತ್ರೆ ಹಾಗೂ ಉತ್ಸವಗಳು ಸಂತೋಷದ ತಾಣಗಳಾಗಿವೆ ಎನ್ನುವುದು ತಿಳಿದು ಬಂದಿದೆ. ಪ್ರಸ್ತುತ ಸಂದರ್ಭದಲ್ಲಿ ಈ ಅಧ್ಯಯನವು ಕೇತಪ್ಪ ದೈವದ ಜಾತ್ರಾ ಆಚರಣೆಗಳ ಮೂಲಕ ಮೂಲ ಸಂಸ್ಕೃತಿಯನ್ನು ಪುನರ್ ಮೌಲ್ಯೀಕರಿಸುವ ಅಗತ್ಯತೆಯನ್ನು ಮತ್ತು ಪರಂಪರೆಯ ಭಿನ್ನ ಸಂದರ್ಭದ ಭಿನ್ನ ಅಭಿವ್ಯಕ್ತಿಯ ಅನಿವಾರ್ಯತೆಯನ್ನು ವಿಶ್ಲೇಷಿಸುವ ನಿಟ್ಟನಲ್ಲಿ ಪ್ರಸ್ತುತ ಪ್ರಬಂಧವು ಸಂಶೋಧನೆಯ ಅಂತರ್ ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸುವಲ್ಲಿ ಆಸಕ್ತಿವಹಿಸಿದೆ.

**ಫಲಿತಗಳು**

ಆಧುನಿಕ ಜಗತ್ತಿನಲ್ಲಿ ಸಾಂಸ್ಕೃತಿಕ ಪುರುಷರು ಹಾಗೂ ಬುಡಕಟ್ಟು ದೈವಗಳು ಹೊಸ ಪ್ರಕ್ರಿಯೆಗೆ ಒಳಗಾಗುತ್ತಲಿದ್ದು ಕರ್ನಾಟಕದ ಕ್ಯಾತಪ್ಪನ ದೈವಗಳ ಸಾಂಸ್ಕೃತಿಕ ಕಥನದ ಸಂದರ್ಭದಲ್ಲಿ ಕಂಡುಕೊಂಡ ಫಲಿತಗಳು.

೧. ದೈವ ಮತ್ತು ಜಾತ್ರೆಗಳ ಜೀವಪರವಾದ, ಮಾನವಪರವಾದ ನಂಬಿಕೆಗಳು ಹಾಗೂ ಸಂಪ್ರದಾಯಿಕ ಆಚರಣೆಗಳು ತ್ರಿಕರಣದ ಸಂದರ್ಭದಲ್ಲಿ ಯಥಾವತ್ತಾಗಿ ಮೂಲ ಮೌಲ್ಯಗಳನ್ನು ಕಳೆದುಕೊಳ್ಳದೆ ಮುಂದುವರೆಯುತ್ತಿವೆ.

೨. ಹಿಂದಿಗಿಂತಲೂ ಇಂದು ಜಾತ್ರೆಗೆ ಬರುವ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಕಾರಣವೆನೆಚಿದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಕೌಟುಂಬಿಕ, ವೈಯಕ್ತಿಕ, ಮಾನಸಿಕ ಒತ್ತಡಗಳ ಪರಿಣಾಮ.

೩. ಹಿಂದೆ ಇದ್ದ ಆಚಾರ-ವಿಚಾರಗಳಲ್ಲಿ ಆಧುನಿಕತೆಯ ಆಶಯಗಳು ಹೆಚ್ಚಾಗಿ ಕಂಡು ಬರುತ್ತಿವೆ.

೪. ವರ್ತಮಾನದ ಈ ಹೊತ್ತಿನಲ್ಲಿ ದೈವಗಳ ಜಾತ್ರೆಗಳು ವ್ಯಾಪಾರದ ಕೇಂದ್ರಗಳಾಗಿ ಬದಲಾಗಿವೆ.

೫. ಸಮುದಾಯದ ಮೂಲ ಕಟ್ಟೆಮನೆಗಳು ಮಾತ್ರ ದೈವ ಭಕ್ತಿಯ ಕೇಂದ್ರವಾಗಿಯೇ ಉಳಿದು ಕೊಂಡಿವೆ.

೬. ಇಂದು ಕೂಡ ಜಾತ್ರೆಗಳ ಸಂದರ್ಭದಲ್ಲಿ ಪ್ರಾಣಿ ಬಲಿ, ಬೆತ್ತಲೆ ಸೇವೆ ಹೀಗೆ ಅನೇಕ ಆಚರಣೆಗಳು ಜೀವಂತವಾಗಿವೆ.

೭. ಸಮುದಾಯದೊಳಗಿನ ವ್ಯಾಜ್ಯಗಳನ್ನು ದೈವಗಳ ಮೂಲ ನೆಲೆಯಾದ ಕಟ್ಟೆಮನೆ ಹಾಗೂ ಗುಡಿಕಟ್ಟು ಕೇಂದ್ರಗಳಲ್ಲಿ ಬಗೆಹರಿಸಿಕೊಳ್ಳುವುದನ್ನು ನೋಡಬಹುದು.

೮. ಬಹಿಷ್ಕಾರದಂತ ಪದ್ಧತಿಗಳು ಇಂದಿಗೂ ಆಚರಣೆಯಲ್ಲಿದ್ದು ಪ್ರಸ್ತುತ ಕಾನೂನುಗಳಿಗೆ ಮುಖಾಮುಖಿಯಾಗುತ್ತಿವೆ.

೯. ಸರ್ಕಾರದ ಅನೇಕ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದರೂ ಸೂಕ್ತವಾದ ಪ್ರಮಾಣದಲ್ಲಿ ಬುಡಕಟ್ಟು ಸಮುದಾಯಗಳಿಗೆ ಹಾಗೂ ಜಾತ್ರೆಯ ಸಾಂಸ್ಕೃತಿಕ ಆಶಯಗಳ ಮೇಲೆ ಸಾಪೇಕ್ಷ ಪರಿಣಾಮ ಅಷ್ಟಾಗಿ ಕಂಡು ಬಂದಿಲ್ಲ.

೧೦. ಜಾಗತೀಕರಣದ ಸುಳಿಯಲ್ಲಿ ಸುತ್ತಿಕೊಂಡಿರುವ ಈಗಿನ ಜನರು ಈಗಿನ ಕಠಿಣ ವ್ರತಾಚರಣೆಗಳು (ಹುರುಳಿ-ನವಣೆ ವ್ರತ) ಸಡಿಲಗೊಳ್ಳುತ್ತಿವೆ. ಎಲ್ಲರೂ ನಾಜೂಕಿನ ಜೀವನದತ್ತ ದಾಪುಗಾಲು ಹಾಕುತ್ತಿದ್ದಾರೆ.

೧೧. ಹಬ್ಬ, ಜಾತ್ರೆ, ತೇರು, ತೆಪ್ಪ, ಉತ್ಸವ, ಭಜನೆ, ಪಲ್ಲಕ್ಕಿ, ಎಲ್ಲವೂ ದಿನ, ವಾರ, ತಿಂಗಳು ಬದಲಿಗೆ ಒಂದೇ ದಿನ ಮುಗಿಯುವ ಮುಗಿಯುವ ಸಾಮಾಜಿಕ ಸ್ಥಿತಿಗೆ ಒಳಪಡುತ್ತಿವೆ.

೧೨. ಪಟ್ಟಭದ್ರ ಹಿತಾಸಕ್ತಿಗಳ ಹಿಡಿತಕ್ಕೆ ಸಿಕ್ಕಿ ಜಾತ್ರೆಗಳು ರಾಜಕೀಯ ಪರಿವೇಷಕ್ಕೆ ಗುರಿಯಾಗುತ್ತಿವೆ. ಇದರಿಂದಾಗಿ ನೈಜ ಆಚರಣೆಗಳು ಸಾಂಕೇತಿಕರಣಗೊಳ್ಳುತ್ತಿವೆ.

## ಕ್ಯಾತಪ್ಪನ ಜಾತ್ರೆ ಮತ್ತು ಕ್ಯಾತೆ

ಕ್ಯಾತೆ ನಡೆಯದೆ ಕ್ಯಾತಪ್ಪನ ಜಾತ್ರೆ ನಡಿಯಲ್ಲ. ಒಂದಲ್ಲ ಒಂದು ಸಣ್ಣ ಪುಟ್ಟ ಕಾರಣಕ್ಕಾದರೂ ಕ್ಯಾತೆ(ಜಗಳ) ನಡೆದೇ ನಡೆಯುತ್ತದೆ, ಎಂದಿಗೂ ಹುಸಿಯಾಗುವುದಿಲ್ಲ ಎಂಬುದು ಜನರ ನಂಬಿಕೆಯಾಗಿದೆ. ಕ್ಯಾತಪ್ಪನ ಜಾತ್ರಾ ಆಚರಣೆಯಲ್ಲಿ ಸಣ್ಣ–ಪುಟ್ಟದಕ್ಕೂ ಒಬ್ಬರಿಗೊಬ್ಬರು ಕ್ಯಾತೆ ಮಾಡಿಕೊಂಡೇ ತೀರುತ್ತಾರೆ. ಈ ಹಿಂದೆ ಸೋಮಮುತ್ತಿ ಸಂತತಿಯ ಬಂಜಗೆರೆ, ಚನ್ನಮ್ಮನಾಗತಿಹಳ್ಳಿ ಕಟ್ಟೆಮನೆಯ ವ್ರತದ ದೇವರು ಕ್ಯಾತಪ್ಪ ಯಾನೆ ಕೇತೇದೇವರು ಈ ಜಾತ್ರೆ ಪುಷ್ಯ ಮಾಸದಲ್ಲಿ ನಡೆಸುವ ಸಂದರ್ಭದಲ್ಲಿ ಕಳಸದ ಮೇಲಿನ ತಮ್ಮ ಹಕ್ಕು ಬಾಧ್ಯತೆಗಾಗಿ ಚೌಳೂರು ಗ್ರಾಮದ ಚಿಕ್ಕನಗೌಡರ ಯರ‍್ರಪ್ಪ ಎಂಬುವವರು, ಗುಡಿಕಟ್ಟಿನ ಗೌಡ ಕ್ಯಾತಗೊಂಡನಹಳ್ಳಿಯ ಗೌಡ ಕೆಂಜೆಡಿಯಪ್ಪ, ಗೋಂಚಿಗಾರ ಕ್ಯಾತಪ್ಪ ಹಾಗೂ ಕೋಣನಗೌಡ ದೊಡ್ಡಗೌಡರ ಸಣ್ಣತಮ್ಮಣ್ಣ ಇವರುಗಳ ವಿರುದ್ಧ ೧೯೯೧ರಲ್ಲಿ ಚಿತ್ರದುರ್ಗದ ನ್ಯಾಯಾಲಯದಲ್ಲಿ ದಾವೆ ಹಾಕಿದ್ದರು. ಆಗ ವಿಚಾರಣೆ ನಡೆಸಿದ ನ್ಯಾಯಾಲಯವು ಆತನ ವಿರುದ್ಧವಾಗಿ ಅಂದರೆ ತಾವು ಕೇಳುವ ಹಕ್ಕು ಗೌಡನ ಹೇಳಿಕೆಯಂತೆಯೇ ಸರಿಯಾದುದು ಎಂದು ಅದಕ್ಕೆ ತಕ್ಕನಾಗಿ ನಡೆದುಕೊಳ್ಳಬೇಕೆಂದು ತೀರ್ಪು ನೀಡಿತ್ತು. ನಂತರ ಅದೇ ಪ್ರಕರಣವನ್ನು ಚಳ್ಳಕೆರೆ ನ್ಯಾಯಾಲಯಕ್ಕೆ ವರ್ಗಾಯಿಸಿತು. ಪುನಃ ಜಾತ್ರಾ ಆಚರಣೆ ಒದಗಿ ಬಂದಾಗ ಚೌಳೂರು ಗ್ರಾಮದ ವ್ಯಾಪಾರಿ ಸಿರಿಯಣ್ಣ, ಕಸ್ತೂರಿ ತಿಮ್ಮನಹಳ್ಳಿ ರಾಮಣ್ಣ ಎಂಬುವವರು, ೧೯೯೪ರಲ್ಲಿ ಜಾತ್ರೆ ಆಚರಣೆಗೆ ತಡೆಯಾಜ್ಞೆ ಕೋರಿ ಸುಮ್ಮನಾದರು. ಆಗ ಪ್ರತಿವಾದಿಗಳು ಇಲ್ಲದ ಕಾರಣ (ಸ್ಟೆಸ್ಕೋ)ಯಾಥಾಸ್ಥಿತಿ ಕಾಪಾಡಬೇಕೆಂದು ನ್ಯಾಯಾಲಯ ತೀರ್ಪು ನೀಡಿತು. ದೇವರ ಗುಡಿಕಟ್ಟಿನಗೌಡ ಕ್ಯಾತಗೊಂಡನಹಳ್ಳಿ ಗೌಡಕೆಂಜೆಡಿಯಪ್ಪ, ಗೋಂಚಿಗಾರ ಕ್ಯಾತಪ್ಪ ಮುಂತಾದವರ ವಿರುದ್ಧ ಚಳ್ಳಕೆರೆ ಪ್ರಕರಣ ನ್ಯಾಯಾಲಯದ ಮೆಟ್ಟಿಲು ಹತ್ತಿದ್ದರಿಂದ ಆಗ ೩–೪ ವರ್ಷ ಜಾತ್ರೆ ನಿಂತೇ ಹೋಯಿತು. ಕಳ್ಳೆಮುಳ್ಳಿನ ಗುಡಿ ನಿರ್ಮಾಣ ಮಾಡುವ ಸಂದರ್ಭದಲ್ಲಿ ಬೊಮ್ಮನ ಬೆಡಗು ಮತ್ತು ಕೋಣನಬೆಡಗು ಇವುಗಳ ನಡುವೆ ಗಲಾಟೆ ನಡದೇ ನಡೆಯುತ್ತದೆ. ಗಳ, ಗೂಟ, ಕಳ್ಳೆ ಬದಲಿಸುವುದರಲ್ಲೊ ಅಥವಾ ಕಳಸ ಇಡುವ ವಿಚಾರವಾಗಿಯೋ ಜಗಳ ಮಾಡಿಕೊಳ್ಳುತ್ತಾರೆ. ಕಳ್ಳೆಮುಳ್ಳಿನ ಗುಡಿ ಹತ್ತಿ ಕಳಸ ಇಡುವ ವಿಚಾರದಲ್ಲಿ ಒಮ್ಮೆ ಹೀಗೆ ನಡೆಯಿತು. ಗುಡಿ ನಿರ್ಮಾಣ ಕಾರ್ಯ ಮುಗಿದ ತಕ್ಷಣ ಈರಗಾರರಿಬ್ಬರು ಅಕ್ಕಳ ಬಾವಿಯ ತಣ್ಣೀರಿನಲ್ಲಿ ಮುಳುಗಿ ಬಂದಿರುತ್ತಾರೆ. ಅವರಿಗೆ ತಿಳಿ ಹೇಳಿ ಪೂಜಾರಪ್ಪ ಅವರ ಕೈಗೆ ಕಳಸ ಕೊಟ್ಟು ಇಬ್ಬರನ್ನು ಒಂದೇ ಸಲ ಬಿಡಬೇಕು. ಅದರಂತೆ ಪ್ರತಿ ವರ್ಷ ನಡೆಯುತ್ತದೆ. ಕೋಣನ ಬೆಡಗಿನವನು ಒಮ್ಮೆ ಮುಂಚಿತವಾಗಿ ಓಡಿ ಹೋಗಿ ಕಳಸ ಇಟ್ಟ. ಬೊಮ್ಮನ ಬೆಡಗಿನವರಿಗೆ ಸಿಟ್ಟು ಬಂದು ಒಬ್ಬರಿಗೊಬ್ಬರು ಗಲಾಟೆ ಮಾಡಿಕೊಂಡು ಕೊನೆಗೆ ಇಟ್ಟ

ಕಳಸ ತೆಗೆದುಕೊಂಡು ಮತ್ತೆ ಮುಳ್ಳಿನ ರಾಶಿಯಿಂದ ಕೆಳಕ್ಕೆ ಇಳಿದು ಬರುವಂತೆ ಒತ್ತಾಯಿಸಿದರು. ಆತ ಕೆಳಗೆ ಇಳಿದು ಬಂದು ಪುನಃ ಇಬ್ಬರು ಕಳ್ಳೆಮುಳ್ಳಿನ ಗುಡಿಯ ಮೇಲೆ ಹತ್ತಿ ಜೊತೆಯಲ್ಲಿಯೇ ಕಳಸ ಪ್ರತಿಷ್ಠಾಪಿಸಿ ಇಳಿದು ಬಂದ ಘಟನೆ ನಡೆಯಿತು.

ಕಳ್ಳೆಮುಳ್ಳಿನ ಕಂಟಾವರಣದಲ್ಲಿ ಬೆಳೆದ ಬುಡಕಟ್ಟು ಸಮುದಾಯದ ಕಾಡುಗೊಲ್ಲರಿಗೆ ದನಕರುಗಳು, ಮುಳ್ಳುಕಳ್ಳೆ, ಹಾಲುಮೀಸಲು(ಜನಿಗೆ) ಹಾಲು, ಕರಿಕಂಬಳಿ, ಚಿಪ್ಪುಗೊಡಲಿ, ದೇವರ ಪರಿಕರಗಳೆಂದರೆ ಅಪಾರವಾದ ಭಕ್ತಿ ಮತ್ತು ಪ್ರೀತಿ. ಅವರ ಪೂರ್ವಿಕರು ಸಹ ದೇವರಿಗೋಸ್ಕರ, ಪೂಜೆಯ ಹಕ್ಕಿಗೋಸ್ಕರ, ಪಶುಗಳಿಗೋಸ್ಕರ ತಮ್ಮ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಕಾದಾಟ ನಡೆಸಿಕೊಂಡೇ ಬಂದು ಸಂಘರ್ಷದ ಜೀವನ ನಡೆಸಿದ್ದಾರೆ. ಈ ಹಿನ್ನಲೆಯಲ್ಲಿ ಕುಂಬಾರಹಳ್ಳಿ ಅಜ್ಜಪ್ಪ, ಭರಮಗಿರಿ ಈರಣ್ಣ, ಜುಂಜಪ್ಪ, ದುರ್ಗದ ದಂಡು ದಾಳಿ ನಡೆಸಿದಾಗ ಕೇತೇದೇವರಿಗಾಗಿ ಹೋರಾಡಿ ಮಡಿದ ದೈವಭಕ್ತ ಕರಿಯಣ್ಣ ಇನ್ನು ಮುಂತಾದ ಈರಗಾರರು ಕಂಡುಬರುತ್ತಾರೆ. ತಮ್ಮ ತಮ್ಮ ಜಾತಿಯೊಂದಿಗೆ ಅಥವಾ ಇತರೇ ಜಾತಿ, ಧರ್ಮದವರೊಂದಿಗೆ ದೇವರು ಹಾಗೂ ಅದರ ಪೂಜೆಯ ಹಕ್ಕಿಗಾಗಿ ಜಗಳ ಮಾಡಿಕೊಂಡು ಎಷ್ಟೋ ಜಾತ್ರಾಚರಣೆಗಳು ನಿಂತು ನ್ಯಾಯಾಲಯದ ಮೆಟ್ಟಿಲು ಹತ್ತಿ ನಿಂತೇ ಹೋಗಿವೆ.

**ಸಲಹೆಗಳು**

- ದೈವ ಹಾಗೂ ಜಾತ್ರಾ ಆಚರಣೆ ಬಗೆಗೆ ವ್ಯಾಪಕ ಪ್ರಚಾರ ಇರಬೇಕು.
- ನಂಬಿಕೆಗಳು ಜನರಲ್ಲಿ ಮೌಢ್ಯ ಬಿತ್ತಬಾರದು.
- ಸಾರ್ವಜನಿಕರಿಗೆ ಸುಲಭವಾಗಿ ಸಂಬಂಧಿತ ಮಾಹಿತಿ ನೀಡುವಂತಾಗಬೇಕು.
- ಎಲ್ಲಾ ವರ್ಗದ ಜನರಿಗೂ ಮುಕ್ತ ಅವಕಾಶ ಇರಬೇಕು. ಯಾವುದೇ ಮೇಲು ಕೀಳು ಭಾವನೆಗಳು ಇರಬಾರದು.
- ಜಾತ್ರೆಗಳ ಸೊಗಡನ್ನು ಉಳಿಸಿಕೊಳ್ಳುವಲ್ಲಿ ಎಲ್ಲರೂ ಒಟ್ಟಾಗಿ ಶ್ರಮಿಸಬೇಕು.
- ಲಿಂಗ ತಾರತಮ್ಯ ಮಾಡಬಾರದು.
- ಕುಟುಂಬದ ಎಲ್ಲಾ ಸದಸ್ಯರು ಭಾಗವಹಿಸುವಂತೆ ಹಾಗೂ ಅವರಲ್ಲಿ ಅವಿನಾವಭಾವ ಸಂಬಂಧ ಗಟ್ಟಿಗೊಳ್ಳುವಂತೆ ಮಾಡುವುದು.
- ಬುಡಕಟ್ಟು ಸಮುದಾಯಗಳಲ್ಲಿರುವ ಬೆಡಗುಗಳ ಕಥನ ಪರಂಪರೆ ಕುರಿತು ಅಧ್ಯಯನ ಕೈಗೊಳ್ಳುವುದು.
- ಗ್ರಾಮೀಣ ಕ್ರೀಡೆ ಹಾಗೂ ಜನಪದ ಕಲಾಮೇಳಗಳಿಗೆ ಅಧ್ಯತೆ ನೀಡುವುದು.

- മൗഖിക കാവ്യഗളു ജനപദരിംദ ദൂര ഉളിയദംതെ അവുഗള ബഗ്ഗെ എച്ചരികെ വഹിസുവുദു.

# ಅನುಬಂಧ : ಒಂದು

ಅ. ಪರಾಮರ್ಶನ ಗ್ರಂಥಗಳು

ಆ. ನಿಘಂಟುಗಳು, ವಿಶ್ವಕೋಶಗಳು, ಗೆಜೆಟಿಯರ್‌ಗಳು, ಶಾಸನ ಸಂಪುಟಗಳು.

ಇ. ಪತ್ರಿಕೆಗಳು

ಈ. ಇಂಗ್ಲಿಷ್ ಗ್ರಂಥಗಳು

ಉ. ನಕ್ಷೆಗಳು

## ಅನುಬಂಧ ೧

### ಅ. ಪರಾಮರ್ಶನಾ ಗ್ರಂಥಗಳು


೧. ಕೃಷ್ಣಮೂರ್ತಿ ಹನೂರು, ಅಜ್ಞಾತನೊಬ್ಬನ ಆತ್ಮಚರಿತ್ರೆ , ಅಂಕಿತ ಪುಸ್ತಕ ಪ್ರಕಾಶನ ಬೆಂಗಳೂರು- ೨೦೦೨

೨. ಕೃಷ್ಣಮೂರ್ತಿ ಹನೂರು –ಸಾವಿರದ ಸಿರಿ ಬೆಳಗು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೧೩

೩. ಕೃಷ್ಣಮೂರ್ತಿ ಹನೂರು– ಜನಪದ ವೀರಕಾವ್ಯಗಳು

೪. ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ. ೧೯೮೮

೫. ಕಪಟರಾಳ ಕೃಷ್ಣರಾಯ– ಕರ್ನಾಟಕ ಲಾಕುಳ ರವರ ಇತಿಹಾಸ ೧೯೭೦

೬. ಕರ್ನಾಟಕ ಪರಂಪರೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕರ್ನಾಟಕ ಸರ್ಕಾರ ಬೆಂಗಳೂರು– ೧೯೯೨

೭. ಕನ್ನಡ ಜಾನಪದ ಕೋಶ ಕರ್ನಾಟಕ ಜಾನಪದ ಪರಿಷತ್ತು ಬೆಂಗಳೂರು.

೮. ಕರೀಂಖಾನ್ ಎಸ್.ಕೆ. : ಕನ್ನಡ ಜನಪದಗೀತೆಗಳು, ಪುಸ್ತಕಾಲಯ, ಮೈಸೂರು –೧೯೮೭

೯. ಕೇಶವನ್‌ಪ್ರಸಾದ್ : (ಸಂ) ಮಲೆ ಮಾದೇಶ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಗೋವಿಂದರಾಜು ಚಿನ್ನದೇವಿ ಅಗ್ರಹಾರ ಜಾನಪದೀಯ ಅಧ್ಯಯನ ಬೆಂಗಳೂರು ೧೯೯೩

೧೧. ಗಿರಿಜಾ ಟಿ. ಚಿತ್ರದುರ್ಗ ಜಿಲ್ಲಾ ದರ್ಶಿನಿ, ರೇಣು ಪ್ರಕಾಶನ ದಾವಣಗೆರೆ.೧೯೯೫

೧೨. ಗುರುಲಿಂಗಯ್ಯ ಪಿ. ಕಾಡುಗೊಲ್ಲರ ಅಧ್ಯಯನ. ಮಂಗಳೂರು ವಿಶ್ವವಿದ್ಯಾಲಯ ಮಂಗಳೂರು

೧೩. ಗೋಪಾಲ್ ಆರ್.-ಚಿತ್ರದುರ್ಗ ಜಿಲ್ಲೆಯ ಪ್ರೇಕ್ಷಣೀಯ ಸ್ಥಳ

೧೪. ಗುರುಪ್ರಸಾದ್ ಸಿ.ಟಿ. ಕನ್ನಡ ಜಾನಪದ ಗ್ರಂಥ ಸೂಚಿ ಸಂಕಲನ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ೨೦೦೦

೧೫. ಗುರುಮೂರ್ತಿಕೆ.ಜಿ: ಜಾನಪದ ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ವಿ.ವಿ.,ದಾರವಾಡ □ ೧೯೭೯.

೧೬. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಸಮಗ್ರ ಸಂಪುಟ-೧ ಸ್ವಪ್ನಬುಕ್ ಹೌಸ್ ಬೆಂಗಳೂರು-೧೯೬೬

೧೭. ಚಲುವರಾಜ □ಜುಂಜಪ್ಪನ ಸಮಗ್ರ ಕಾವ್ಯ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೧೮. ಜೀ.ಶಂಪ □ ಕನ್ನಡ ಜನಪದ ಕತೆಗಳು, ಚೇತನ ಬುಕ್ ಹೌಸ್ ಮೈಸೂರು ೨೦೦೯

೧೯. ತಪಸ್ವಿಕುಮಾರ್ : ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ಪ್ರಸಾರಾಂಗ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ; ೧೯೮೨

೨೦. ಜೀ.ಶಂ.ಪ- ಜನಪದ ಖಂಡಕಾವ್ಯಗಳು, ಚೇತನ ಬುಕ್ ಹೌಸ್ ಮೈಸೂರು. ೨೦೦೫

೨೧. ಜಾನಪದ ಗಂಗೋತ್ರಿ-ಕನ್ನಡ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ ಬೆಂಗಳೂರು.

೨೨. ಜಾನಪದ ನಂಬಿಕೆ ಸಂಪ್ರದಾಯ ಮತ್ತು ಆಚರಣೆಗಳು, ಡಾ. ಪುಟ್ಟಸ್ವಾಮಿ, ಪ್ರಕಾಶನ -೧೯೯೭.

೨೩. ಜಾನಪದ ಸಾಹಿತ್ಯ ಸಂಗಾತಿ, ಡಾ.ಬಿ.ಸಿ.ಲಿಂಗಣ್ಣ (ಲೇ) ಕಾವ್ಯಕಿರಣ ಪ್ರಕಾಶನ ಗುಲ್ಬರ್ಗ-೧೯೯೭

೨೪. ತಿಪ್ಪೇರುದ್ರಸ್ವಾಮಿ.ಎಚ್ : ಶರಣರ ಅನುಭಾವ ಸಾಹಿತ್ಯ' ಬೆಂಗಳುರು. ೧೯೮೦

೨೫. ತಿಪ್ಪೇರುದ್ರಸ್ವಾಮಿ ಎಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರು. ಡಿ.ವಿ.ಕೆ.ಮೂರ್ತಿ ಪ್ರಕಾಶನ. ೧೯೮೩

೨೬. ತಿಪ್ಪೇಸ್ವಾಮಿ ಜಿ.ಆರ್- ಕೋಲಾರಮ್ಮ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ ಬೆಂಗಳೂರು.

೨೭. ತಾರಾನಾಥ್ ಎನ್.ಎಸ್ : ಶತಮಾನದ ಸಂಶೋಧನೆ ಕನ್ನಡ ಸಾಹಿತ್ಯ ಆಕಾಡೆಮಿ, ಬೆಂಗಳೂರು –೨೦೦೧.

೨೮. ದೇವುಡು ನರಸಿಂಹಶಾಸ್ತ್ರೀ : ಕರ್ನಾಟಕ ಸಂಸ್ಕೃತಿ ಬೆಂಗಳೂರು ಶಾರದ ಪ್ರಕಾಶನ. ೧೯೮೮

೨೯. ದಾಸೇಗೌಡ–ಮಂಡ್ಯಜಿಲ್ಲೆ ಜಾತ್ರೆಗಳು

೩೦. ಪುರುಷೋತ್ತಮ ಬಿಳಿಮಲೆ: ಹಂಪಿ ಜಾನಪದ ಹಂಪಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೬

೩೧. ಪುರುಷೋತ್ತಮ ಬಿಳಿಮಲೆ ಜಾನಪದ ಕ್ಷೇತ್ರ ಕಾರ್ಯ ಆಧುನಿಕ ವಿಧಾನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.೧೯೯೩

೩೨. ಪ್ರೇಮಾ ಕಾಡುಗೊಲ್ಲರ ಮಹಿಳೆಯರ ಅಧ್ಯಯನ ೨೦೦೪

೩೩. ಬೋರಲಿಂಗಯ್ಯ, ಹಿ.ಚಿ., ಕಾಳೇಗೌಡ ನಾಗವರ : (ಸಂ) ಗಿರಿಜನಕಾವ್ಯ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.

೩೪. ಬಸವರಾಜ ನೆಲ್ಲಿಸರ– ಜಾನಪದ ಸುಗಂಧ, ಸಿ.ವಿಜಿ.ಪ್ರಕಾಶನ ಬೆಂಗಳೂರು. ೨೦೦೪

೩೫. ಬೋರಲಿಂಗಯ್ಯ ಹಿ.ಚಿ – ಉಜ್ಜನಿಚೌಡಮ್ಮ ಜಾತ್ರೆ ಅಧ್ಯಯನ

೩೬. ಬರಗೂರು ರಾಮಚಂದ್ರಪ್ಪ: ಸಂಸ್ಕೃತಿ ಮತ್ತು ಸೃಜನಶೀಲತೆ ಸಾಹಿತ್ಯ ಆಕಾಡೆಮಿ, ಬೆಂಗಳೂರು ೧೯೮೯.

೩೭. ಬಸವರಾಜ ನೆಲ್ಲಿಸರ: ಜಾನಪದ ೧೯೯೫, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ, ಬೆಂಗಳೂರು –೧೯೯೬.

೩೮. ಬಸವರಾಜ ಕಲ್ಗುಡಿ: ಅನುಭಾವ ಸಂಸ್ಕೃತಿ ಸಾಮಾನ್ಯ ಮತ್ತು ಹುಡುಕಾಟ, ಕನ್ನಡ ಮಸ್ತಕ ಪ್ರಾಧಿಕಾರ, ಬೆಂಗಳೂರು –೨೦೦೧.

೩೯. ಬಸವರಾಜ ಸಬರದ–ಜಾನಪದ ಆಯಾಮಗಳು ಕನ್ನಡ ವಿಶ್ವವಿದ್ಯಾನಿಲಯ ಹಂಪಿ.೨೦೧೦,

೪೦. ಮೈಲಹಳ್ಳಿ ರೇವಣ್ಣ : ಚಿತ್ರದುರ್ಗ ಸುತ್ತಿನ ಜಾನಪದ ಕಾವ್ಯಗಳು (ಸಂ) ಮೈಸೂರು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ.; ೧೯೮೪

೪೧. ಮಲ್ಲೇಪುರಂ ಜಿ.ವೆಂಕಟೇಶ : (ಸಂ) ಶಂಬಾ ಜೋಶಿಯವರ ಆಯ್ದ ಲೇಖನಗಳು ಬೆಂಗಳೂರು ಕನ್ನಡ ಪುಸ್ತಕ ಪ್ರಾಧಿಕಾರ.೨೦೦೪

೪೨. ಮಂಜುನಾಥ ಬೇವಿನಕಟ್ಟೆ– ಕರ್ನಾಟಕದ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.೨೦೦೯,

೪೩. ಮೋಹನ್ ಎನ್. (ಸಂ) ಕಾಡುಗೊಲ್ಲರ ಕೋಲಾಟದ ಪದಗಳು ಕ.ಜಾ.ವಿ.೨೦೧೩

೪೪. ಮೀರಾಸಾಬಿಹಳ್ಳಿ ಶಿವಣ್ಣ ಪಿ.ಬಿ : ಗೊಲ್ಲ ಕಡಗ ಸಿ.ವಿ.ಜಿ.ಪಬ್ಲಿಕೇಶನ್ ಬೆಂಗಳೂರು. ೧೯೯೯

೪೫. ಮೀರಾಸಾಬಿಹಳ್ಳಿ ಶಿವಣ್ಣ ಪಿ.ಬಿ : ದುರುಗ ಜಾನಪದ ಬೆಂಗಳೂರು ಶಕ್ತಿ ಮುದ್ರಣ ಮತ್ತು ಪ್ರಕಾಶನ. ೧೯೯೯

೪೬. ಮೊಗಳ್ಳಿ ಗಣೇಶ್: ದಲಿತರು ಮತ್ತು ಜಾಗತೀಕರಣ ಹಂಪಿ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.೧೯೯೯.

೪೭. ಮಹಾದೇವ ಪಿ. : ಕರ್ನಾಟಕ ಪುರತತ್ವಶೋಧ ಶ್ರೀ ಲಕ್ಷ್ಮೀ ಪ್ರಕಾಶನ ಶ್ರೀರಂಗಪಟ್ಟಣ.

೪೮. ಮಲ್ಲೇಪುರಂ ಜಿ.ವೆಂಕಟೇಶ್: ಶಂಭಾ ಕೃತಿ ಸಂಪುಟ ( ೧ರಿಂದ೬) ಪುಸ್ತಕ ಪ್ರಾಧಿಕಾರ ಬೆಂಗಳೂರು –೧೯೯೯.

೪೯. ಮಲ್ಲಿಕಾರ್ಜುನ ಲಠ್ಠೆ: ಜಾನಪದ ಸಂಶೋಧನಾತ್ಮಕ ಪ್ರಬಂಧಗಳು, ನೆಹರುಗಂಜ್ ಕಲುಬುರ್ಗಿ–೧೯೮೦.

೫೦. ಮುತ್ತಯ್ಯ ಎಂ.ಎಸ್. : ಕನ್ನಡ ಜಾನಪದ ಮಹಾಕಾವ್ಯಗಳ ಲ್ಲಿ ಸಾಂಸ್ಕೃತಿಕ ಮುಖಾಮುಖಿ.

೫೧. ಮೊಗಳ್ಳಿ ಗಣೇಶ್: ದಲಿತ ಕಥನ, ಪ್ರಸಾರಾಂಗ ಕನ್ನಡ ವಿ.ವಿ., ಹಂಪಿ–೨೦೦೬.

೫೨. ಮಂಜುನಾಥ ಬೇವಿನಕಟ್ಟೆ: ಮೈಲಾರಲಿಂಗನ ಕಾವ್ಯ(೧೯೯೯), ಜನ ಜಾನಪದ (೨೦೦೩), ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ–೧೯೯೩.

೫೩. ಮುತ್ತಯ್ಯ ಎಸ್.ಎಂ – ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ

೫೪. ಮೇತ್ರಿ ಕೆ.ಎಂ.– ಕೃಷ್ಣಗೊಲ್ಲರ ಕಾವ್ಯ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೫೫. ಮುತ್ತಯ್ಯ ಎಸ್.ಎಂ – ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ

೫೬. ಮಲ್ಲಿಕಾರ್ಜುನ ಕಲಮರಹಳ್ಳಿ-ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ

೫೭. ಮೀರಾಸಾಬಿಹಳ್ಳಿ ಶಿವಣ್ಣ- ಜುಂಜಪ್ಪ ಮತ್ತು ಎತ್ತಪ್ಪ ಸಾಂಸ್ಕೃತಿಕ ವೀರರ ಅಧ್ಯಯನ

೫೮. ಯಳನಾಡು ಅಂಜಿನಪ್ಪ : ಹಗಲುವೇಷದವರ ಸಂಸ್ಕೃತಿ ಸಾಹಿತ್ಯ ಅಕಾಡೆಮಿ ಬೆಂಗಳೂರು. ೧೯೭೩

೫೯. ರಹಮತ್ ತರಿಕೆರೆ : ಕರ್ನಾಟಕದ ಸೂಫಿಗಳು ಹಂಪಿ ಪ್ರಸಾರಂಗ ಕನ್ನಡ ವಿ.ವಿ.ಹಂಪಿ.೧೯೯೮

೬೦. ರಾಮಚಂದ್ರೇಗೌಡ ಹಿ.ಶಿ: ಜಾನಪದ ಸಾಂಸ್ಕೃತಿಕ ಆಯಾಮಗಳು.ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೧೯೯

೬೧. ರಾಮೇಗೌಡ: ಜನಪದ ಸಂಶೋಧನೆ ಮೈಸೂರು ಚಿತ್ರಕೂಟ. ಮೈಸೂರು-೧೯೮೧

೬೨. ರಾಮದಾಸೆಡ್ಡಿ ಎಸ್.ಜಿ : ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ ೨೦೦೯

೬೩. ರಾಜಶೇಖರಪ್ಪ ಬಿ.ದುರ್ಗಶೋಧನ ಸಿವಿಜಿ ಪಬ್ಲಿಕೇಶನ್ ಬೆಂಗಳೂರು ೨೦೦೧

೬೪. ರಾಮಚಂದ್ರರಾವ್ ಎಸ್.ಕೆ. ಭಾರತದ ದೇವಾಲಯ ನೆಲೆ, ಹಿನ್ನೆಲೆ ೧೯೮೦

೬೫. ರಾಜೇಂದ್ರ ಡಿ.ಕೆ. ಜಾನಪದ ಶಿಷ್ಟಪದ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೬೬. ರಹಮತ್ ತರಿಕೆರೆ : ಮರದೊಗಣ ಕಿಚ್ಚು, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ- ಪ್ರತಿ ಸಂಸ್ಕೃತಿ, ಬೆಂಗಳೂರು, ಷೋರಂ ಬುಕ್‌ಹೌಸ್ ಬೆಂಗಳೂರು□೧೯೯೩.

೬೭. ರಾಮಚಂದ್ರಗೌಡ ಹಿ.ಶಿ. : ಜಾನಪದ ಸಂಸ್ಕೃತಿ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು□೧೯೮೮.

೬೮. ರಂಗಾರೆಡ್ಡಿ ಕೋಡಿರಾಂಪುರ : ಬಂಡಾಯ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ, ಬೆಂಗಳೂರು □ ೧೯೯೫.

೬೯. ರಂಗರಾಜ ವನದುರ್ಗ, : ಸಾಂಸ್ಕೃತಿಕ ಮುಖಾಮುಖಿ, ಕನ್ನಡ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು□೨೦೦೨.

೭೦. ರಾಜಶೇಖರಪ್ಪ ಬಿ. :೧) ನಿರಂತರ, ೨) ಇತಿಹಾಸ ಕಥನ ಸಿ. ವಿ.ಜಿ.ಬೆಂಗಳೂರು-೨೦೦೧

೭೧. ರೇಣುಕಾ – ಪಾವಗಡ ತಾಲ್ಲೂಕಿನ ಕಾಡುಗೊಲ್ಲರ ಮಹಿಳೆಯರ ಅಧ್ಯಯನ ಕನ್ನಡ ವಿಶ್ವವಿದ್ಯಾಲಯ ಹಂಪಿ

೭೨. ರಾ.ಗೌ, ಜಾನಪದ ಸಮೂಹ ರೂಪಗಳು, ಸಂವಹನ ಪ್ರಕಾಶನ ಮೈಸೂರು. ೧೯೯೬,

೭೩. ಲಕ್ಮಣ್ ತೆಲಗಾವಿ : ಹರಿತಿಸಿರಿ (ಸಂ); ಹರ್ತಿಕೋಟೆ ವಾಲ್ಮೀಕಿ ಸಾಹಿತ್ಯ ಸಂಪದ. ೧೯೮೭

೭೪. ಲೋಕೇಶ ಅಗಸನಕಟ್ಟೆ : ಕನ್ನಡ ಕಾವ್ಯ–ಸಮಾಜ–ಸಾಹಿತ್ಯ, ಅಲೋಕ ಪ್ರಕಾಶನ, ಚಿತ್ರದುರ್ಗ ೨೦೦೩

೭೫. ಲಕ್ಕಪ್ಪಗೌಡ ಹೆಚ್.ಜೆ. : ಕರ್ನಾಟಕ ಬುಡಕಟ್ಟುಗಳು ಭಾಗ ೧–೨, ೧೯೯೮. ವೀರಣ್ಣದಂಡೆ, ಶ್ರೀಪಾದಶೆಟ್ಟಿ (ಸಂಪಾದಕರು) ಸುವರ್ಣ ಜಾನಪದ ಲೇಖನಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು

೭೬. ವಿವೇಕ ರೈ.ಬಿ.ವಿ. : ಅನ್ವಯಿಕ ಜಾನಪದ ಮಂಗಳೂರು ಮಂಗಳ ಗಂಗೋತ್ರಿ ಮಂಗಳೂರು – ೧೯೮೫

೭೭. ವೀರಭದ್ರಪ್ಪ ಬಿ.ವಿ : ಧರ್ಮ ಮತ್ತು ವೈಚಾರಿಕತೆ ಬೆಂಗಳೂರು ನವ ಕರ್ನಾಟಕ. ೧೯೯೯

೭೮. ವೆಂಕಟೇಶ.ಎಂ.ಎನ್ : ಮೈಲಾರಲಿಂಗನ ಜಾತ್ರೆಗಳು ಪ್ರದರ್ಶನ ಅಧ್ಯಯನ ಭದ್ರಾವತಿ ಆದರ್ಶನ ಪ್ರಕಾಶನ. ೧೯೯೮

೭೯. ವೀರೇಂದ್ರಕುಮಾರ್– ಬುಡಕಟ್ಟು ಸಂಸ್ಕೃತಿ ಹಿನ್ನೆಲೆಯಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿ (ದುರ್ಗದ ಸಿರಿಗನ್ನಡ ದ್ವೈಮಾಸಿಕ) ಮಾರ್ಚ್೨೦೦೦

೮೦. ವೀರೇಂದ್ರ ಸಿಂಪಿ, ಸಮಾಗ್ರ ಜಾನಪದ ಸಂಪುಟ ಪ್ರಸಾರಾಂಗ ಕನ್ನಡ ವಿಶ್ವದ್ಯಾನಿಲಯ ೨೦೦೭

೮೧. ಶಿವಕುಮಾರಸ್ವಾಮಿ.ಸಿ.ಎಸ್.ಕರ್ನಾಟಕದ ಜಾತ್ರೆಗಳು

೮೨. ವಿರೂಪಾಕ್ಷಪ್ಪ ಪ್ರಜಾರಹಳ್ಳಿ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ– ಮೈಸೂರು– ೨೦೦೧

೮೩. ಶಂಕರನಾರಾಯಣ,ತೀ.ನಂ : ಜನಪದ ಸಮೀಕ್ಷೆ–ವಿಶ್ಲೇಷಣೆ ಬೆಂಗಳೂರು ಪ್ರಿಯದರ್ಶಿನಿ ಪ್ರಕಾಶನ. ೧೯೯೯

೮೪. ಶಿವರಾಮಕಾರಂತ– ಪ್ರಾಣಿ ಪ್ರಪಂಚ ೧೯೯೦

೮೫. ಶಿವರಾಮ ಕಾರಂತ– ಪ್ರಾಣಿ ಪ್ರಪಂಚದ ವಿಸ್ಮಯಗಳು

೮೬. ಶಂಕರನಾರಾಯಣ ತೀ.ನಂ – ಕಾಡುಗೊಲ್ಲರ ಸಂಪ್ರದಾಯ ಮತ್ತು ಆಚರಣೆಗಳು

೮೭. ಸಂಧ್ಯಾರೆಡ್ಡಿ.ಕೆ.ಆರ್. ಮೈತ್ರಿ (ಸಂ)– ಜಾನಪದ ಆಟಗಳು ೨೦೦೬.

೮೮. ಸಂಧ್ಯಾರೆಡ್ಡಿ.ಕೆ.ಆರ್. □ ಜಾನಪದ ಪರಿಶೀಲನಾ

೮೯. ಸಂಧ್ಯಾರೆಡ್ಡಿ.ಕೆ.ಆರ್. ಗ್ರಾಮೀಣ ವೃತ್ತಿಗಳುಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೦,

೯೦. ಸಣ್ಣರಾಮ: ಬುಡಕಟ್ಟು ಸಂಸ್ಕೃತಿ, ಪ್ರಸಾರಾಂಗ. ಕನ್ನಡ ವಿ.ವಿ., ಹಂಪಿ–೨೦೦೧

೯೧. ಸತೀಶ್– ನಾಯಕನಹಟ್ಟಿ ತಿಪ್ಪೇಸ್ವಾಮಿ ಸಾಂಸ್ಕೃತಿಕ ಕಥನ

೯೨. ಸಿದ್ದಲಿಂಗಯ್ಯ: ಗ್ರಾಮದೇವತೆಗಳು, ಮೂಲ ಭಾರತಿ ಬೆಂಗಳೂರು □ ೧೯೯೭.

೯೩. ಹೀರೆಮ್ಮಠ ಎಸ್.ಎಸ್ – ಕರ್ನಾಟಕದ ಜಾತ್ರೆಗಳು

೯೪. ಹೆಬ್ಬಾಲೆ ಕೆ.ನಾಗೇಶ್ – ಬಹುಸಂಸ್ಕೃತಿ ಮತ್ತು ದೇಶಿ ಜಾತ್ರೆಗಳ ಮಹಾ ಸಮನ್ವಯ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೯೫. ಹೆಬ್ಬಾಲೆ ಕೆ.ನಾಗೇಶ್– ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ

೯೬. ಹೆಬ್ಬಾಲೆ ಕೆ. ನಾಗೇಶ್ □ ದಲಿತ ಸ್ತ್ರೀ ದೈವಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ

೯೭. ಹೀರೆಮಠ ಎಸ್.ಎಸ್. ಕರ್ನಾಟಕದ ದಲಿತ ಸಂಸ್ಕೃತಿ ಪರಂಪರೆ ಮತ್ತು ಜಾತ್ರೆ(ಭಾಗ,೨)೧೯೯೩ ಹಂಪನಾ– ಕರ್ನಾಟಕದ ಜಾತ್ರೆಗಳು

೯೮. ಹೆಬ್ಬಾಲೆ ಕೆ. ನಾಗೇಶ್ ದಲಿತರು: ಅನುಭಾವ ಕಥನ

**ಆ. ನಿಘಂಟುಗಳು, ವಿಶ್ವಕೋಶಗಳು, ಗೆಜೆಟಿಯರ್‌ಗಳು, ಶಾಸನ ಸಂಪುಟಗಳು**

೧. ಹಳಗನ್ನಡ ನಿಘಂಟು(ಪ್ರ.ಸಂ.) : ಬಸವರಾಧ್ಯ.ಎನ್.ಕ.ಸಾ.ಪ.ಬೆಂಗಳೂರು, ೨೦೦೦

೨. ರ ನಿಘಂಟು (ಪ್ರ.ಸಂ.) : ಬಸವರಾಧ್ಯ.ಎನ್.ಕ.ಸಾ.ಪ.ಬೆಂಗಳೂರು, ೨೦೦೦

೩. ಕಾವ್ಯಪದಮಂಜರಿ (ಸಂ) ಮಾಳವಾಡ, ಸ.ಸ.ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು–೧೯೮೦

೪. ಕಿಟ್ಟೆಲ್‌ರ ಕನ್ನಡ-ಇಂಗ್ಲಿಷ್‌ಕೋಶ ಪ್ರಸಾರಾಂಗ ಮೈಸೂರು.

೫. ಕಸ್ತೂರಿ ಕೋಶ ಪಂಡಿತಕವಲಿ ರಾಮಾಶ್ರಯ, ದಾರವಾಡ,೧೯೫೭.

೬. ಕನ್ನಡ ನಿಘಂಟು ಪ್ರೊ॥ ವೆಂಕಟಸುಬ್ಬಯ್ಯ, ನವಕರ್ನಾಟಕ, ಬೆಂಗಳೂರು-೧೯೯೬(ಮೊ.ಮು.)

೭. ಬೃಹತ್ ಹಿಂದಿಕೋಶ್ (೭ನೇ ಮುದ್ರಣ) (ಸಂ) ಕಾಲಿಕಾ ಪ್ರಸಾದ್, ಜ್ಞಾನಮಂಡಲಿ (ಲಿ), ವಾರಣಾಸಿ-೧೯೯೨.

೮. ಪುರಾಭರತ ಕೋಶ ವಿದ್ವಾನ್ ರಂಗನಾಥಶರ್ಮ.

೯. ಜಾನಪದ ಕೈಪಿಡಿ. (ಪ್ರ.ಸಂ.) ಹೆಚ್.ಜೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು -೧೯೯೭.

೧೦. ಜಾನಪದ ವಿಶ್ವಕೋಶ (ಸಂ:೧-೨) (ಸಂ) ಚಂದ್ರಶೇಖರ ಕಂಬಾರ, ಕ.ಸಾ.ಪ.ಬೆಂಗಳೂರು-೧೯೮೩.

೧೧. ಜನಪದ ಕಲೆಗಳ ಕೋಶ (ಸಂ) ಬೋರಲಿಂಗಯ್ಯ ಹಿ.ಚಿ. ಪ್ರಸಾರಾಂಗ ಕನ್ನಡ ವಿ.ವಿ.

೧೨. ಭಾಷೆ (ಸಂ) ನಾರಾಯಣ ಕೆ.ವಿ. ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ-೨೦೦೦.

೧೩. ಧರ್ಮ (ಸಂ) ರಹಮ್ ತರೀಕೆರೆ, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ-೨೦೦೦.

೧೪. ಸಮಾಜಶಾಸ್ತ್ರ ಕಿರುವಿಶ್ವಕೋಶ ಚ.ನ.ಶಂಕರರಾವ್, ಜೈಭಾರತ್ ಪ್ರಕಾಶನ ಮಂಗಳೂರು-೨೦೦೧.

೧೫. ಕರ್ನಾಟಕದ ಕೈಪಿಯತ್‌ಗಳು ಡಾ॥ ಎಂ.ಎಂ.ಕಲಬುರ್ಗಿ, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ-೧೯೯೪.

೧೬. ಭಾರತದ ಗ್ಯಾಸೆಟಿಯರ್ ಭಾಗ-೧, (ಕರ್ನಾಟಕ) (ಸಂ) ಸೂರ್ಯನಾಥಕಾಮತ್, ೧೯೮೪.

೧೭. ಮೈಸೂರು ಸ್ಟೇಟ್ ಗ್ಯಸೆಟಿಯರ್ (ಸಂ) ಕೆ.ಅಭಿಶಂಕರ್.(ತುಮಕೂರು ಬಳ್ಳಾರಿ,ಕೋಲಾರ,ಚಿಕ್ಕಮಂಗಳೂರು, ಹಾಸನ ಉತ್ತರಕನ್ನಡ,ಬೀದರ್,ಶಿವಮೊಗ್ಗ,ಕೊಡಗು, ಚಿತ್ರದುರ್ಗ.)

ಇ. ಪ್ರತಿಕೆಗಳು

೧. ಕೊಳಲು □ ವಿಶೇಷ ಸಂಚಿಕೆ ಗೊಲ್ಲರ ಸಂಸ್ಕೃತಿ ಅಧ್ಯಯನದ ಕೆಲವು ಟಿಪ್ಪಣಿಗಳು(೨೦೦೭), ಉಪ್ಪಾರಹಟ್ಟಿ ಚಿತ್ತಯ್ಯ.

೨. ಪ್ರಜಾವಾಣಿ, ಕರ್ನಾಟಕ ದರ್ಶನ (೨೦೦೮) ಕಳ್ಳೆಮುಳ್ಳಿನ ಕ್ಯಾತಪ್ಪನ ಪರಿಷೆ, ಉಪ್ಪಾರಹಟ್ಟಿ ಚಿತ್ತಯ್ಯ.

೩. ವಾರಪತ್ರಿಕೆ (೧೧-೧೧-೧೯೮೪) ಚಿದಾನಂದ ದೊಡ್ಡೇರಿ, ಪಾರಿಬೇಲಿ (ಕಥೆ)

೪. ಹೊನ್ನಾರು (ಫೆಬ್ರವರಿ -೨೦೦೭), ಕಸವನಹಳ್ಳಿ ಶಿವಣ್ಣ, ಕಾಡುಗೊಲ್ಲರ ಸಾಂಸ್ಕೃತಿಕ ನಾಯಕ ಕರಡಿಬುಳ್ಳಪ್ಪ.

೫. ಸಂವಾದ ಪತ್ರಿಕೆ ಸೆಪ್ಟಂಬರ್ ೨೦೧೬ ಕಾಡುಗೊಲ್ಲರ ಕಟ್ಟೆಮನೆಗಳು, ವಿರೂಪಾಕ್ಷ ಜಿ.

೬. ವೇದಾವತಿ ವಾರ್ಷಿಕ ಸಂಚಿಕೆ (೨೦೦೭) ಎಚ್‌ಪಿಪಿಸಿ ಸರ್ಕಾರಿ ಪದವಿ ಕಾಲೇಜು ಚಳ್ಳಕೆರೆ, ಕಾಡುಗೊಲ್ಲರ ಸಾಂಸ್ಕೃತಿಕ ಆಚರಣೆಗಳು, ಅಜ್ಜಯ್ಯ ಎಚ್.

೭. ಜನಿಗೆ ಪ್ರತಿಕೆ ಕಾಡುಗೊಲ್ಲ ಬುಡಕಟ್ಟು ಸಂಸ್ಕೃತಿಯ ಆಚಾರ-ವಿಚಾರಗಳು, ಜಯರಾಂ, ಪಾವಗಡ.

೮. ಅರುಹು-ಕುರುಹು, ಕಾಡುಗೊಲ್ಲರ ಕೇತಪ್ಪನ ಸಂಪ್ರದಾಯ, ಗೌಡಪ್ಪ ಜಿ.ಇ. ಚಳ್ಳಕೆರೆ.

೯. ಹಟ್ಟಿ ಸಿರಿ ಸ್ಮರಣ ಸಂಚಿಕೆ ಕ.ಸಾ.ಪ.ಚಳ್ಳಕೆರೆ. ತಾಲ್ಲೂಕಿನ ಬುಡಕಟ್ಟು ಸಮುದಾಯದ ಜನಪದ ಕಲೆಗಳು. ೨೦೦೪

೧೦. ವಿಜಯ ಕರ್ನಾಟಕ ಪತ್ರಿಕೆ. ಉಪ್ಪಾರಹಟ್ಟಿ ಚಿತ್ತಯ್ಯ. ಆಧುನಿಕತೆಗೆ ಮಾಸದ ಕೇತಪ್ಪ ದೈವದ ಜಾತ್ರಾ ಆಚರಣೆ ೨೦೦೫

ಈ. ಇಂಗ್ಲೀಷ್ ಗ್ರಂಥಗಳು

1. Daid. L. Sills (Ed), International Encyclopedia of the Social Sciences-Vol.3.INC, USA, 1968.

2. Francis Buchanan. M. D, A Journey from Madras Thro the Counties of Mysore, Canara and Malabar, Asian Educational Services, New Delhi.

3. Kosambi. D. D, The Culture and Civilization of Ancient India in Historical Out line, Vikas Publishing House, New Dehli-1970.Madras Govt. ,Press -1909
4. Naanjundaaih and Ananthakrushnaaih.L.K, The Mysore Tribes and Cast V-III, Mysore University, Mysore-1936.
5. Nadeem Hasnain, Tribal India.Palaka prakashan, Delhi,2015.
6. Nisha Chaudhary, Caste, Class and Social Inequality. Murarilal and Sons, New Delhi, 2010.RCC, MGM College, Udupi – 1994.
7. Shankaranarayana. T. N, The Epic of Junjappa – Text and Performance,
8. Sir James Frazer, The Golden Bough: History of Myth and Religion.Chancellor press, London-1994.
9. Thurston and Rangachari, Cast and Tribes of Southern India. V-II,
10. Vesta Sarkhosh Curtis, Persian Myths.Orient black swan, Hyderabad, 2009.

ಸಾಧ್ಯವಾಗುತ್ತಿಲ್ಲ. ಮಾಹಿತಿ ಸಂಗ್ರಹಣೆಗಾಗಿ ಕೇತ್ರಕಾರ್ಯದಲ್ಲಿ ಮೂಲ ವಕ್ತೃಗಳು, ಅಕ್ಷರಸ್ಥ ಮತ್ತು ಅನಕ್ಷರಸ್ಥ ಸ್ತ್ರೀಯರು, ವಯೋವೃದ್ಧರು ಹಾಗೂ ಪುರುಷರನ್ನು ಭೇಟಿ ಮಾಡಿ, ಸಂದರ್ಶಿಸಲಾಗಿದೆ. ಇದರಿಂದ ಆಯ್ದ ವಿಷಯಕ್ಕೆ ಸಂಬಂಧಿಸಿದ ನಿಖರವಾದ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಯಿತು. ಜನಪದರಲ್ಲಿ ಇರುವಂತಹ ನಂಬಿಕೆ, ಸಂಪ್ರದಾಯ, ಆಚರಣೆಗಳು, ಹರಕೆಗಳು, ಕಲೆ, ಸಂಸ್ಕೃತಿ, ಆಚಾರ–ವಿಚಾರ, ಹಾಗೂ ಪೂಜಾವಿಧಾನಗಳಲ್ಲಿ ಎಲ್ಲಾ ಜಾತಿ, ಧರ್ಮ, ವರ್ಗದವರು ಸಾಮೂಹಿಕವಾಗಿ ಭಾಗವಹಿಸುವ ಮತ್ತು ದೈವದ ಜಾತ್ರೆಯ ಆಚರಣಾ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಿಕೆಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆದರೆ ಕ್ಷೇತ್ರ ಅಧ್ಯಯನದಿಂದ ತಿಳಿದು ಬಂದ ಮತ್ತೊಂದು ಪ್ರಮುಖ ಅಂಶವೆಂದರೆ ಈ ದೈವಗಳ ಆರಾಧನಾ ಕೇಂದ್ರಗಳಲ್ಲಿ ಕೆಲ ಸಮುದಾಯವನ್ನು ದೇವಸ್ಥಾನದ ಒಳಗಡೆ ಇಂದಿಗೂ ಬಿಟ್ಟುಕೊಳ್ಳುವುದಿಲ್ಲ. ಸಮುದಾಯದ ಆಯಾ ಬೆಡಗಿನ ವ್ಯಕ್ತಿಗಳು ಹೇಳಿರುವ ಮಾಹಿತಿಯನ್ನು ಆಧರಿಸಿ, ಖುದ್ದಾಗಿ ಜಾತ್ರಾ ಆಚರಣೆಗಳನ್ನು ನೋಡಿ ಜಾತ್ರೆಯ ಮಾಹಿತಿಯನ್ನು ಪೂರ್ಣಪ್ರಮಾಣದಲ್ಲಿ ದಾಖಲುಗೊಳಿಸಲಾಗಿದೆ. ಮೂಲ ಸಮುದಾಯದೊಂದಿಗೆ ಜಾತ್ರಾ ಸಂದರ್ಭದಲ್ಲಿ ಪರಸ್ಪರ ಬೆರೆತು ಒಡನಾಡಿದ ಇತರೆ ಸಮುದಾಯದವರ ಆಚರಣಾ ವಿಧಾನಗಳನ್ನು ಕುರಿತಂತೆ ಅವರ ಅನುಭವಗಳನ್ನು ಸಂಗ್ರಹಿಸಲಾಗಿದೆ.

ಒಟ್ಟಾರೆಯಾಗಿ ಹೇಳಬಹುದಾದರೆ ಈ ಜಾತ್ರೆಯಲ್ಲಿ ಇಂದಿಗೂ ಸಹ ಕೆಲವು ಆಚರಣೆಗಳು ಹಿಂದಿನ ಪದ್ಧತಿಯಂತೆಯೇ ನಡೆದು ಬಂದಿವೆ. ಎಲ್ಲಾ ವರ್ಗದ ಜಾತಿಯವರು ತಮ್ಮಲ್ಲಿ ಯಾವುದೇ ದ್ವೇಷ–ಅಸೂಯೆಗಳು ಇದ್ದರೂ ಅವುಗಳನ್ನು ದೂರಮಾಡಿಕೊಂಡು ಎಲ್ಲರು ಸಹಬಾಳ್ವೆಯಿಂದ ಒಂದಾಗಿ ಆಚರಿಸುತ್ತಾರೆ. ಕಟ್ಟೆಮನೆ ಹಾಗೂ ಗುಡಿಕಟ್ಟಿನ ಮುಖ್ಯಸ್ಥರು ಸೇರಿ ಹಿಂದಿನ ಪದ್ಧತಿಯಲ್ಲಿ ಆಚರಣೆಗಳನ್ನು ಆಚರಿಸುವುದರ ಜೊತೆಗೆ ಈ ಜಾತ್ರೆಯಲ್ಲಿ ತಪ್ಪದೇ ಜಗಳವಾಡುತ್ತಾರೆ. 'ಕ್ಯಾತಪ್ಪನ ಜಾತ್ರೆಯಲ್ಲಿ ಕ್ಯಾತೆ' ಎಂಬ ಗಾದೆಯನ್ನೇ ಕಟ್ಟಿದ್ದಾರೆ. ಇಂದಿಗೂ ಈ ದೈವದ ಜಾತ್ರಾ ಆಚರಣಾ ಸಂದರ್ಭದಲ್ಲಿ ಕೆಲವು ಕಟ್ಟು ನಿಟ್ಟಾದ ಪದ್ಧತಿ ನಡೆಯುವುದನ್ನು ಕ್ಷೇತ್ರಕಾರ್ಯ ನಡೆಸುವುದರ ಮೂಲಕ ಕಂಡುಕೊಳ್ಳಲಾಗಿದೆ.

**ಇ. ವಕ್ತೃಗಳ ವಿವರ**

೧. ಗುಡಿಹಳ್ಳಿಯರು,ಸಣ್ಣಸಿರಿಯಮ್ಮ,೫೬ವರ್ಷ,ಕ್ಯಾತಗೊಂಡನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

೨. ಚಿತ್ತಯ್ಯರುಕ್ಯಾತಮ್ಮ, ೬೦ವರ್ಷ,ಕರಿಯಮ್ಮ ೭೬ವರ್ಷ, ಉಳ್ಳೆಗಡ್ಡೆರು ಚಿತ್ತಮ್ಮ ೭೮ವರ್ಷ,ಗುಡಿಹಳ್ಳಿ ಈರಜ್ಜಿ ೭೨ವರ್ಷ,

೩. ಕುರುಡಿಹಳ್ಳಿ ನಾಗಜ್ಜರ ಸಾಂತಮ್ಮ೪೫ವರ್ಷ, ಹೊಚ್ಚಿಕಜ್ಜರ ಈರಮ್ಮ ೫೫ವರ್ಷ,ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.

೪. ಪುಟ್ಟೀರಮ್ಮ ೬೦ವರ್ಷ, ಕ್ಯಾತಮ್ಮ೫೩ವರ್ಷ, ಚನ್ನಮ್ಮನಾಗತಿಹಳ್ಳಿ ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.

೫. ಕುರಿ ವೀರಣ್ಣ-೫೮ ವರ್ಷ, ಹೆಗ್ಗೆರೆ, ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.

೬. ಕದುರಮ್ಮ-೪೦ ವರ್ಷ, ಕಸ್ತೂರಿ ತಿಮ್ಮನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೭. ತಿಪ್ಪಮ್ಮ- ೪೦ ವರ್ಷ, ಕ್ಯಾತಗೊಂಡನಹಳ್ಳಿ, ಚಳ್ಳಕೆರೆ ತಾಲ್ಲೂಕ, ಚಿತ್ರದುರ್ಗ ಜಿಲ್ಲೆ.

೮. ಕ್ಯಾತಮ್ಮ-೫೦ ವರ್ಷ, ಗೋಪನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೯. ಸ್ವಾರಿ ಮದೇಗೌಡ-೭೫ ವರ್ಷ,ದೊಡ್ಡಸಂಪಿಗೆ ಬಿಳಿಗಿರಿರಂಗನಬೆಟ್ಟ ಚಾಮರಾಜನಗರ ಜಿಲ್ಲೆ.

೧೦. ತಮ್ಮಡಿ ಕೆಂಚೇಗೌಡ-೬೦ ವರ್ಷ, ಕೆ.ಗುಡಿ ಬಿಳಿಗಿರಿರಂಗನಬೆಟ್ಟ ಚಾಮರಾಜನಗರ ಜಿಲ್ಲೆ.

೧೧. ಕೇತಪ್ಪಗುಡ್ಡ ರಾಮೇಗೌಡ-೫೨ವರ್ಷ,ಹೊಸಪೋಡು ಬಿಳಿಗಿರಿರಂಗನಬೆಟ್ಟ ಚಾಮರಾಜನಗರ.

೧೨. ರುದ್ರ-೩೨ವರ್ಷ, ಹೊಸಪೋಡು ಬಿಳಿಗಿರಿರಂಗನಬೆಟ್ಟ ಚಾಮರಾಜನಗರ.

೧೩. ದಾಸಪ್ಪ-೪೮ವರ್ಷ ಲಿಂಗಣ್ಣಹಳ್ಳಿ ಜಗಲೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.

೧೪. ರಾಮಲಿಂಗಪ್ಪ ಪೂಜಾರಿ- ೫೮ವರ್ಷ,ಇಸ್ಸಮುದ್ರ ಗೊಲ್ಲರಹಟ್ಟಿ ಭರಮಸಾಗರ.

೧೫. ಕೇತಪ್ಪಗೌಡ-೭೦ವರ್ಷ,ಭರಮಸಾಗರ.

೧೬. ದೊಡ್ಡಕೇತಪ್ಪ-೬೨ವರ್ಷ,ದಿಂಡದಳ್ಳಿ ದಾವಣಗೆರೆ.

೧೭. ಪ್ರಕಾಶ-೪೦ವರ್ಷ,ದಿಂಡದಳ್ಳಿ ದಾವಣಗೆರೆ.

೧೮. ಪೂಜಾರಿ ಬೊಮ್ಮಣ್ಣ-೪೫ವರ್ಷ, ಕರವಿನಕಟ್ಟೆ ಸರ್ಕಲ್ ಚಿತ್ರದುರ್ಗ.

೧೯. ಪೂಜಾರಿ ಉಮೇಶ್-೩೮ವರ್ಷ, ಗುಂಜಗನೂರು ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೨೦. ಕೆಂಗಪ್ಪ.ಪಿ–೭೨ವರ್ಷ,ಕೋಣನೋರುಗೊಲ್ಲರುಕೊರ್ಲಕುಂಟೆ,ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.

೨೧. ಪೂಜಾರಿಈರಣ್ಣ–೬೧ವರ್ಷ, ಐಗಾರ್ಲಹಳ್ಳಿ ಮಡಕಶಿರಾ ತಾಲ್ಲೂಕು, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.

೨೨. ಪೂಜಾರಿ ನರಸಿಂಹಪ್ಪ–೩೩ವರ್ಷ, ಪೆರಗುಪಾಳ್ಯ ಮಡಕಶಿರಾ ತಾಲ್ಲೂಕು, ಅನಂತಪುರ ಜಿಲ್ಲೆ.

೨೩. ಕಾಳಮ್ಮ–೬೦ವರ್ಷ, ಗೋಪನಹಳ್ಳಿ ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೨೪. ಓದೋಈರಣ್ಣ–೪೮ವರ್ಷ, ಸೂರನಹಳ್ಳಿ ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೨೫. ಪುಟ್ಟೀರಮ್ಮ–೬೯ವರ್ಷ, ಚನ್ನಗಾನಹಳ್ಳಿ ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೨೬. ದಡ್ಡಿ ಸೂರಣ್ಣ–೬೦ವರ್ಷ ನಾಯಕ ಜನಾಂಗ,ನಡುವಲರಹಟ್ಟಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ

೨೭. ಗುರುಲಿಂಗಪ್ಪ–೬೯ವರ್ಷ ನಾಯಕ ಜನಾಂಗ,ಚಿಕ್ಕಜೋಗಿಹಟ್ಟಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೨೮. ಬಸವರಾಜ–೫೦ವರ್ಷ ನಾಯಕ ಗುಂಡುಮಣಗು ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೨೯. ದೊಡ್ಡಪ್ಪ–೪೬ವರ್ಷ ಗೊಲ್ಲ ಜನಾಂಗ ಕ್ಯಾಸನಕೆರೆ ಗೊಲ್ಲರಹಟ್ಟಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೦. ಕರಿಕಲ್ಲಪ್ಪ–೪೯ವರ್ಷ ಗೊಲ್ಲ ಜನಾಂಗ ಆಲೂರು ಗೊಲ್ಲರಹಟ್ಟಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೧. ದುರುಗಮ್ಮ–೪೬ವರ್ಷ ಆದಿ ಕರ್ನಾಟಕ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೨. ತಿಪ್ಪೇಸ್ವಾಮಿ–೬೯ವರ್ಷ ನಾಯಕ ಜನಾಂಗ,ಜರ್ಮಲಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೩. ಈರಣ್ಣ–೬೯ವರ್ಷ ಗೊಲ್ಲ ಜನಾಂಗ,ಬೊಮ್ಮಗಟ್ಟ ಗೊಲ್ಲರಹಟ್ಟಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೪. ವೀರಭದ್ರಪ್ಪ ಶಿಕ್ಷಕರು ೬೦ವರ್ಷ ಗೊಲ್ಲ ಜನಾಂಗ, ,ಬೊಮ್ಮಗಟ್ಟ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೫. ಸುರೇಶ–ಉಪನ್ಯಾಸಕರು,೩೯ವರ್ಷನಾಯಕಜನಾಂಗ ಸೂರಮ್ಮನಹಳ್ಳಿ ಕೂಡ್ಲಿಗಿ ತಾ.ಬಳ್ಳಾರಿ ಜಿಲ್ಲೆ.

೩೬. ಜಗನ್ನಾಥ–೪೬ವರ್ಷ ಕುರುಬ ಜನಾಂಗ ಹದಡಿ ದಾವಣಗೆರೆ ಜಿಲ್ಲೆ

೩೭. ಹೀರೆ ಕೇತಪ್ಪ–೬೨ವರ್ಷ,ಗೊಲ್ಲ ಜನಾಂಗ ಚಿಕ್ಕಜಾಜೂರು ಗೊಲ್ಲರಹಟ್ಟಿ ಹೊಳಲ್ಕೆರೆ.

೩೮. ಸಿದ್ದಪ್ಪ–೬೦ವರ್ಷ, ಕೂನಿಕೆರೆ ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೩೯. ನಾಗಲಿಂಗಪ್ಪ –೬೫ವರ್ಷ, ವೇದಾವತಿ ನಗರ ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

೪೦. ಕರಿಯಣ್ಣ–ಗ್ರಾಮಲೆಕ್ಕಾಧಿಕಾರಿ ೫೭ವರ್ಷ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

### ಈ. ಕೇತದೇವರ ಪದಗಳು

### ೧. "ಈರಮ್ಮ ಮತ್ತು ಕ್ಯಾತಮ್ಮ ಹಾಡಿದ ಕೇತೇದೇವರ ಪದಗಳು"

*ಅಕ್ಕಿ ಬಸಿಯಾತಿದ್ದೆ,*
*"ಪುತ್ರನ ತೂಗುತಲಿ ವೋಳಗಿದ್ದೇ ॥ತಂದಾನ್ನ ತಾನ॥*
*ಪುತ್ರನ ತೂಗುತಲಿ ವೋಳಗಿದ್ದೆನ್ನ ಬಂಡಿ*
*ಮುಕ್ಕಣ್ಣ ನೆರಿಯೋಗದಾರಿಯನು ॥ ತಂದಾನ್ನ ತಾನ॥*

*ಹಾಲು ಕಾಸಲುತಿದ್ದೆ ಬಾನ ಬಸಿಯಲುತಿದ್ದೆ*
*'ಬಾಲುನು ತೂಗುತಲಿ ವೋಳಗಿದ್ದೆ' ॥ ತಂದಾನ್ನ ತಾನ॥*
*ಬಾಲನ ತೂಗುತಲಿ ವೋಳಗಿದ್ದೋನ್ನ ಬಂಡಿ*
*ರೇವಣ್ಣ ಸೆರಿಯೋಗದಾರಿಯನು ॥ತಂದಾನ್ನ ತಾನ॥*

*ಅಪ್ಪಾ ನಿಮ್ಮ ಬಣ್ಣ ಸುತ್ತಿ ಸಿಂಬೆ ಮಾಡಿ*
*ಮತ್ಯಾವ್ವನ ದುರುಗ ವೂರಿಯಲು ॥ ತಂದಾನ್ನ ತಾನ॥*
*ಮತ್ತೆ ಅವನ ದುರುಗ ಉರಿಯಲಿ*
*ಮೊಳಗಳ*
*ಮುತ್ತಿನ ಕಳಸ ಸೀಡಿಯಾಲಿ ॥ತಂದಾನ್ನ ತಾನ॥*

*ಅಪ್ಪಾ ನಿಮ್ಮ ಬಣ್ಣ ಸುತ್ತಿ ಸಿಂಬೆ ಮಾಡಿ*
*ಮತ್ಯಾವ್ವನ ದುರುಗ ವೂರಿಯಲು ॥ ತಂದಾನ್ನ ತಾನ॥*
*ಮತ್ತೆ ಅವನ ದುರುಗ ಉರಿಯಲಿ ನಿಂಗಣ್ಣ*
*ವಪೂವಾದ ಬಣ್ಣ ಸೇರಿವೋತು ॥ ತಂದಾನ್ನ ತಾನ॥*

*ಸ್ವಾಮಿ ನಿಮ್ಮ ಬಣ್ಣ ಸೀಳಿ ಸಿಂಬೆ ಮಾಡಿ*
*ಮ್ಯಾಲವನ ದುರುಗ ಉರಿಯಲು ॥ತಂದಾನ್ನ ತಾನ॥*
*ಮ್ಯಾಲೆ ಅವನ ದುರುಗ ಉರಿಯಾಲು ನಿಂಗಣ್ಣ*
*ಮೋವಾದ ಬಣ್ಣ ಸೆರಿವೋಯ್ತು ॥ತಂದಾನ್ನ ತಾನ॥*

ಹೆತ್ತ ಬಾಣತೀಯ ಸೆರಿವ್ಯೆದು  ತಂದಾನ್ನ
ಹೆತ್ತೋನೆ ಬಾಣತಿಯಾ ಸೆರಿವ್ಯೆದು ತುರುಕಾಯ
ಉಪ್ಪರಿಗೆ ನಿಂದು ಉರಿಯಾಲು ॥ತಂದಾನ್ನ ತಾನ॥

ಉಪ್ಪರಿಗೆ ನಿಂದು ಉರಿಯಾಲು ವಳಗಾಳ
ಪುತ್ರಮ್ಮಗೆ ಸಿಡಿಲೆ ಬಡಿಯೋಲ ॥ತಂದಾನ್ನ ತಾನ॥
ಪುತ್ರಮ್ಮಗೆ ಸಿಡಿಲೆ ಬಡಿಯಲು ಮೇಗಳ
ಮುತ್ತಿನ ಕಳಸ ಸಿಡಿಯಾಲು ॥ತಂದಾನ್ನ ತಾನ॥

ಹಾವುಗಳು ಸೆರಿವ್ಯೆದು ಗೋವುಗಳ ಸೆರಿವೊದು
ಆಡ ಮಕ್ಕಳ ತೆರಿವ್ಯೆದು  ॥ತಂದಾನ್ನ ತಾನ॥
ಆಡನೆ ಮಕ್ಕಳ ತೆರಿವ್ಯೆದು ತುರುಕರು
ಲಾವಣಿಗೆ

ದೇವರ ಪೆಟ್ಟಿಗೆ ಹೋರುವಾಗ ಹಾಡುವ ಪದಗಳು
ಸುತುಗಂಬೆದಟ್ಟಿ ಸೇರಗಿನ ॥ತಂದಾನ್ನ ತಾನ॥

ಸುತುಗಂಬೆದಟ್ಟಿ ಸೇರಗಿನ ಚಂದ್ರಣ್ಣ
ಅಪ್ಪನಂದುಲವಾ ವರುಬಾರೋ ॥ತಂದಾನ್ನ ತಾನ॥

ದೇವಾರು ವೊರುವಾಗ ಏನೆಂದೊ ಚಂದ್ರಣ್ಣ
ಹೇ ನನ್ನ ಗುರುವೇ ಎದಾರಿದೆ ॥ತಂದಾನ್ನ ತಾನ॥

ಹೇ ನನ್ನ ಗುರುವೇ ಹೆದರಿದೊನ್ನಬಂಡೆ
ಮಾಲಿಂಗ ಬಂದೇರೊ ಬಲಾ ಬುಜುಕೆ ॥ತಂದಾನ್ನ ತಾನ॥
ಅಪ್ಪನಾ ವೊರುವಾಗ ಏನೆಂದೆ ಚಂದ್ರಣ್ಣ
ತಪು ನನ್ನ ಗುರುವೆ ಯಾದರಿದೆ ॥ತಂದಾನ್ನ ತಾನ॥

ತಪ್ಪು ನನ್ನ ಗುರುವೇ ಯದರಿಂದೊನ್ನಬಂಡೆ
ಅಪ್ಪ ಬಂದೇರು ಬಲಾ ಬುಜುಕೆ ॥ತಂದಾನ್ನ ತಾನ॥

ಮಂಚ ಆದ ಕೆಳಗೆ ನಿಂತಂತ ಹಾವಿಗೆ,
ಪಂಚೆ ಮುಕುದಯ್ಯ ಈವಾ ಮೆಟ್ಟು ॥ತಂದಾನ್ನ ತಾನ॥

ಪಂಚೇನೇ ಮುಕುದಯ್ಯ.ಇವ ಮೆಟ್ಟು ವನ್ನಾಬಂಡೆ
ಸಂಪನ್ನ ಬಂದೇರು ಬಲಾ ಬುಜುಕೆ ॥ತಂದಾನ್ನ ತಾನ॥

ನೆತ್ತೀಯ ಮೇಲೇನೆ ಇದ್ದಂತೆ ಹಾವಿಗೆ
ಮುದ್ದು ಮುಕುದಯ್ಯ ಇವಾ ಮೆಟ್ಟು ॥ತಂದಾನ್ನ ತಾನ॥

ಮುದ್ದೊನೆ ಮಕದಯ್ಯ ಇವಮೆಟ್ಟೊನ್ನಬಂಡೆ
ದೊಡ್ಡನು ಬಂದೇರು ಬಲಾ ಬುಜುಕೆ ॥ತಂದಾನ್ನ ತಾನ॥

ಹಾಸಿಗೆ ಇಲ್ಲದ ಆತ ತಾನೊರಡಾನೆ
ಹಾಸಿಗೆ ಹಾಸೋ ಮಾಡಿವಾಳ ॥ತಂದಾನ್ನ ತಾನ॥

ಹಾಸಿಗೆ ಹಾಸೋ ಮಾಡಿವಾಳ ನಿಂಗಣ್ಣ
ಕಾಸಿ ತಿರುತುಕೆ ನಡುದಾನೆ ॥ತಂದಾನ್ನ ತಾನ॥

ನೆಡಮುಡಿ ಇಲ್ಲದ ಒಡೆಯ ತಾನೊರಡಾನೆ
ನೆಡಮುಡಿ ಹಾಸೋ ಮಾಡಿವಾಳ ॥ತಂದಾನ್ನ ತಾನ॥

ಜಲಧಿ ಹೊರಡುವಾಗ ಹೇಳುವ ಪದಗಳು
ಸರುಪನಾ ಸರುಸ ನೋಡೆ
ನಿಂಗಣ್ಣ ಸೆದುರಿಗೆ ಹೊರಟ ಕಾಣೇ

ಹೋದಾನೆ ಹೋದಾನೆ ಹೋದಾನೆ ನನ್ನಯ್ಯ
ಬಾದೇಯ ವುಲ್ಲು ತುಳುವುತ
ಸರುಪಾನ ಸರಸ ಕಾಣೇ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಬಾದೇಯ ವುಲ್ಲು ತಳ್ಳಂಡು
ಅಕ್ಕಬಾವಿಗೋಗ್ಗಿ ಬಿಟ್ಟಾನೆ ಹ್ರೆರದಂಡು
॥ಸರುಪನಾ ಸರಸ ನೋಡೆ॥
॥ ನಿಂಗಣ್ಣ ಸೆದರುಗೆ ಹೊರಟಾ ಕಾಣೇ॥

ಹಲಸಿನ ಮರಕೆ ನಿಲ್ಲಿಸಿ ಕುದುರೆ ಕಟ್ಟಿ
ಕನಕ ಸೆತ್ತುರಿಕೆ ನೆರಳಾಗಿ
ಸರುಪಾನ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕನಾಕನೇ ಸೆತ್ತುರಿಕೆ ನೆರಳ ಗೆಜ್ಜೆಯ ಕಾಲು
ದನಕೊರಟ ನೊರವ ಜಲಾಧಿಗೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ನಲ್ಲಿಯ ಮರಕೆ ನಿಲ್ಲಿಸಿ ಕುದುರೆಕಟ್ಟಿ
ನೆರಳಾಗೆ ನೀಲಿ ಸೆತ್ತುರಿಗಿ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ನೀಲಿಯ ಸೆತ್ತುರಿಗಿ ನೆರಳಾಗೆ ಗೆಜ್ಜೆಯ ಕಾಲು
ಬಡಿಡೊಡಾಟದೊನರವಾ ಜಲಾಧಿಗೆ
। ಸರುಪನಾ ಸರಸ ನೋಡೇ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಇಗ್ಗಿಯ ಬಾಯಾಂಗೆ ಎದ್ದು ಮೂಡಿದ ಕೇಂಜೇಡಿ
ಮುದ್ದೇ ನನ್ನಯ್ಯ ಸಿರಿವಾಲ
।ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ತೊಗಸೆ ಕಾಯಾಂಗೆ ಸೊಗಸು ಮಾಡಿದ ಕೆಂಜೇಡಿ
ಸೊಗಸೆ ನನ್ನಯ್ಯ ಸಿರಿವಾಲ
ಸರುಪನಾ ಸರಸ ಕಾಣೇ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಸೊಗಸೇ ನನ್ನಯ್ಯ ಸಿರಿವಾಲ ಜುಗುಮ
ಪರಿಸೆಯ ಮಾಡಲೊರಟಾನೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಚಂದ್ರಾ ತೂರಿದಾನಂಗೆ ಬಂದರೇರಿ ಮ್ಯಾಲೆ
ಸೆಂದಪ್ಪ ಉಣಸೆ ವಸಾದೀಯ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಸೆಂದು ಅಪ್ಪ ವಸದೀಯ ಸಿಕ್ಕುದರೆ
ಜಂಗುಮುದಾಂದರವ ಎಳೂದಾರೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

[ತಾತ] ಸಾಸ ತೂರಿದುನಂಗೆ ಹೋದರೇರುರಿಯ ಮ್ಯಾಲೆ
ಸಾಸಪ್ಪ ಉಣಸೆ ವಸದೀಯ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಸಾಸ ಅಪ್ಪ ಉಣಸೆ ವಸದೀಯ ದಿಬ್ಬದಲಿ
ಹೇಗೆಂದರವ ಎಳುದಾರೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕಾಸಿ ಮ್ಯಾಲೆ ಕಾಸಿನೇಶ್ವರನ ಇಡಕೊಟ್ಟು
ಈಶ್ವರ ನಿಂಗಣ್ಣ ಜಲುಪಾಕೆ
ಸರುಪಾನ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಈಸ್ವುರ ನಿಂಗಣ್ಣ ಜಲುಪಕೋಗುವಾಗ
ಕಾಸಿಯಗಳು ಲಿಂಗಾ ಹೊರುಟಾವೆ
ಸರುಪಾನ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಂಗಿ ಮ್ಯಾಲೆ ಅಂಗಿ ಬಂಗಾರುದ ನೆಡಕಟ್ಟು
ಜಂಗುಮ ನಿಂಗಣ್ಣ ಜಲುಪಾಕೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಜಂಗುಮ ನಿಂಗಣ್ಣ ಜಲುಪಕೋಗುಲುವಾಗ
ಅಂಗ್ಯಾಗಳು ಲಿಂಗಾ ವೊಳುದಾವೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಬಾಳೆ ಎಲೆಯಾಗೆ ಬಾಗಿ ಬಂದಳು ಗಂಗೇ
ಆಕಾಸುದ ಗಂಗೇ ತೆರಿವಯ್ದು
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಆಕಾಸುದ ಗಂಗೇ ತೆರಿವಯ್ದು ನಿಂಗಣ್ಣ
ಭೂಪ ಮಜ್ಜುಣುಕೆ ಇಳುದಾನೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ನಿಂಬೆ ಎಲಿಯಾಗೆ ಮುಂದೆ ಬಂದಳು ಗಂಗೇ
ಅಂಬಾರುದ ಗಂಗೇ ತೆರಿವಯ್ದು
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಂಬಾರುದ ಗಂಗೇ ತೆರಿವಯ್ದು ನಿಂಗಣ್ಣ
ಲಿಂಗಾ ಮಜ್ಜುಣಾಕೆ ಇಳುದಾಬೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಪ್ಪಾನೇ ಮಾಲಿಂಗ ಮತ್ತೆಲ್ಲಿ ಅಸುನಾದಾವೆ
ಸಿಕ್ಕ ಹೊನ್ನಾಬಂಡಿ ಜಲಾಧಿಗೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಣ್ಣಾ ಮಾಲಿಂಗ ಇನ್ನೆಲ್ಲಿ ಅಸುನದಾವೆ
ಇನ ಸೂರನಹಳ್ಳಿ ತೊರಿಯಾಗೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಇನ್ನು ಸೂರನಹಳ್ಳಿ ತೊರೆಯಾಗಳು ಮಣ್ಣಿಗೆ
ಅಣ್ಣಾನೆ ಮಾಲಿಂಗ ಅಸುನಾಗಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಂಗ್ನೆ ವೋಟು ಕೆರೆ ಮುಂಗೈವೋಟು ತೂಬು
ಮುಂದೆ ಜಂಗುಮರಾ ಹೊಸಬಾವಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಮುಂದೆ ಜಂಗುಮುರಾ ಹೊಸಬಾವಿ ತೋಟುದಲಿ
ತಂದೆ ನಿಂಗಣ್ಣೆ ಶಿವಾ ಪ್ರಜೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ತಾಳಿ ವೋಟು ಕೆರೆ ಲ್ಯಾವಣದೋಟು ತೂಬು
ಮ್ಯಾಲೆ ಜಂಗುಮುರ ಹೊಸಬಾವಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಮೇಲೆ ಜಂಗುಮುರ ಹೊಸಬಾವಿ ತೋಟದಲೇ
ಸ್ವಾಮಿ ನಿಂಗಣ್ಣುನಾ ಶಿವಾ ಪೂಜೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಹರಿವ ನೀರಿನಂಗೆ ಅರಿಗಿಮೊರತೇಯ ತೋಡಿ
ಸಾಲೆದಚ್ಚುಡುವಾ ಸೆಂಗಟ್ಟಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಸಾಲೆದಚ್ಚುಡುವೆ ಸೆರಿಗಟ್ಟಿ ಚಂದ್ರಣ್ಣ
ಮಾಲಿಂಗನ ಮಕುವಾ ತೊಳೆದಾನೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ತುಂಬಿದ ತೊರೆಯಾಗೆ ವಂದಿಸಿ ಚಲುಮೆ ತೋಡಿ
ಗಂಗೇ ಅಚ್ಚುಡುವೆ ತೆರೆಗಟ್ಟಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಗಂಗೇಯ ಅಚ್ಚುಡುವೆ ತೆರೆಗಟ್ಟಿ ಚಂದ್ರಣ್ಣ
ಮಾಲಿಂಗನ ಮಕುವಾ ತೊಳೆದಾನೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥
ಕಟ್ಯಾಗೆ ಇರುವೋನು ಸೆಟಿಗಾರಂದಲು ತಿದ್ದೆ
ಸೆಟಿಗಾರ ಅಲ್ಲ ನಿಜಾಲಿಂಗ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಸೆಟ್ಟಿಗಾರ ಅಲ್ಲ ನಿಜಾಲಿಂಗ ಸಿಂಗಣ್ಣ
ಗಟ್ಟಿಸಿ ಜಡಿಯಾ ಮಡಿ ಮಾಡಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕೆರಿಯಾಗೆ ಇರುವೋನು ಮಡಿವಾಳಂದಲು ತಿದ್ದೆ
ಮಡಿವಾಳ ಅಲ್ಲ ನಿಜಾಲಿಂಗ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಮಡಿವಾಳ ಅಲ್ಲ ನಿಜಾಲಿಂಗ ನಿಂಗಣ್ಣ
ಜಾಡಿಸಿ ಜಡಿಯಾ ಮಡಿ ಮಾಡಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಆತಾನೆ ತಡೆಯಲ್ಲಿ ಧೂಪದ ಮರವುಟ್ಟಿ
ಆಕಳಿಸುತಾವೆ ವುಲಿ–ಕರಡಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಆಕಳಿಸುತಾವೆ ವುಲಿ ಕರಡಿ ನಿಂಗಣ್ಣ
ವೊಂಕುರಿಸಿ ವಳೀಯಾ ಇಳುದಾನೆ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಗಂಗೇಯ ದಡದಲ್ಲಿ ಗಂಧಾದ ಮರವುಟ್ಟಿ
ಅಂದರುಸುತಾವೆ ವುಲಿ ಕರಡಿ
ಸರುಪನಾ ಸರುಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಂದರುತಾವೆ ವುಲಿ ಕರಡಿ ನಿಂಗಣ್ಣ
ವಂದೀಸಿ ವಳೀಯ ಇಳುದಾನೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಣ್ಣನೇ ಮೊದಲಿಂಗ ಅಣ್ಣಯ್ಯ ಮಾದಲಿಂಗ
ಅಣ್ಣಾ ನಿಂಗಣ್ಣ ಮೊದಲಿಂಗ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಣ್ಣಾನೇ ನಿಂಗಣ್ಣ ಮದಲಿಂಗೊ ಅಂಬೊಸುದ್ದಿ
ಹನ್ನೇರು ರಾಜ್ಯಕೆ ಹರಿದಾವೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಪ್ಪಾನೇ ಮದಲಿಂಗ ಅಪ್ಪಯ್ಯ ಮಾದಲಿಂಗ
ಅಪ್ಪ ನಿಂಗಣ್ಣ ಮೊದಲಿಂಗ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಆಪ್ಪಾನೇ ನಿಂಗಣ್ಣ ಮೊದಲಿಂಗಾಂಬೊ ಸುದ್ದಿ
ಇಪ್ಪತ್ತು ರಾಜ್ಯಕೆ ಹರುದಾವೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ನಿಂಬಿಯಾ ಗುಡಾರ ಯಂಬತ್ತು ವಯ್ಯಾರೆ
ದುಂಡು ಮುತ್ತಿಟ್ಟು ಬಿಗುಸ್ಯಾರೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ದುಂಡಾನೆ ಮುತ್ತಿಟ್ಟು ಬಿಗುಸ್ಯಾರು ಗುಡಾರುದಾಗೆ
ತಂದೆ ನಿಂಗಣ್ಣ ಮೊದಲಿಂಗ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಆಸ್ಪಿಯಾ ಗುಡಾರ ಆರವತ್ತು ವಯ್ಯಾರೆ
ಹಸಿರ ಮುತ್ತಿಟ್ಟು ಬಗುಸ್ಯಾರೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಹಸಿರೇನೆ ಮುತ್ತಿಟ್ಟು ಬಿಗುಸಿದ
ಗುಡಾರದಾಗೆ ಅಸುಮಗ ನಿಂಗಣ್ಣ ಮೊದಲಿಂಗ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕಂಬುಳಿ ಗುಡಾರ ಯಂಬತ್ತು ವಯ್ಯಾರೆ
ದುಂಡ ಮುತ್ತಿಟ್ಟು ಬಿಗುಸ್ಯಾರೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥
ದುಂಡಾನೆ ಮುತ್ತಿಟ್ಟು ಬಿಗುಸಿದ ಗುಡಾರುದಾಗೆ
ತಂದೆ ನಿಂಗಣ್ಣ ಮೊದಲಿಂಗ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕೆಂಪಾನೆ ಸೆತ್ತರಿಕೆ ಅಂಚಿನ ತಂದಾನಿದಾಗ
ಅಂಚಿನೇ ಮುತ್ತು ಮುಗಿಸ್ಯಾರೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಅಂಚಿನ ಮುತ್ತು ಬಿಗಿಸ್ಯಾರು ಹೊನ್ನಗುಂಡಿ
ಸಂಪನ್ನಗಳಾಡಿಸಿ ಇಡಿಸ್ಯಾರೆ
ಸರುಪನಾ ಸರಸ ನೋಡೆ
॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥

ಕರಿಯಾಗೆ ಸೆತ್ತರಗೆ ಅರಗಿಳಿ ತಂದಿನಿ ತಾನ
ಅರಗಿಳಿ ಮುತ್ತೇ ಬಿಗಿಸ್ಯಾರೆ

*ಸರುಪನಾ ಸರಸ ನೋಡೆ*
*॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥*

*ಅರಗಿಳಿ ಮುತ್ತು ಬಿಗಿಸ್ಯಾರು ಹೊನ್ನಬಂಡಿ*
*ದೊರೆ ಮಕ್ಕಳ ಗುಡಿಸಿ ಇಡಿಸ್ಯಾರೆ*
*॥ ಸರುಪನಾ ಸರಸ ನೋಡೆ॥*

*ಬಿಳಿಯಾನೆ ಸೆತ್ತೆರೆಗೆ ಅರಗಿಳಿ ತಂದನಿ ತಾನ*
*ಅರಗಿಳಿ ಮುತ್ತೇ ಬಿಗಿಸ್ಯಾರೆ*
*ಸರುಪನಾ ಸರಸ ನೋಡೆ*
*॥ನಿಂಗಣ್ಣ ಸೆದುರಿಗೆ ಹೊರಟ ಕಾಣೇ॥*

**ಈ ಕಥನವನ್ನು ಹಾಡಿದವರು**

- ಗುಡಿಹಳ್ಳಿಯರು ಸಣ್ಣಸಿರಿಯಮ್ಮ, ೫೬ವರ್ಷ, ಕ್ಯಾತಗೊಂಡನಹಳ್ಳಿ ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
- ಚಿತ್ತಯ್ಯರುಕ್ಯಾತಮ್ಮ, ೬೦ವರ್ಷ,ಕರಿಯಮ್ಮ ೭೬ವರ್ಷ, ಉಳ್ಳೆಗಡ್ಡೆರು ಚಿತ್ತಮ್ಮ ೭೮ವರ್ಷ, ಗುಡಿಹಳ್ಳಿ ಈರಜ್ಜಿ ೭೨ವರ್ಷ,
- ಕುರುಡಿಹಳ್ಳಿ ನಾಗಜ್ಜರ ಸಾಂತಮ್ಮ೪೫ವರ್ಷ, ಹೊಚ್ಚಿಕಜ್ಜರ ಈರಮ್ಮ ೫೫ವರ್ಷ,ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.
- ಪುಟ್ಟೀರಮ್ಮ ೬೦ವರ್ಷ, ಕ್ಯಾತಮ್ಮ೫೩ವರ್ಷ,ಚನ್ನಮ್ಮನಾಗತಿಹಳ್ಳಿ ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ.

**೨. ಹೆಗ್ಗೆರೆ ಕುರಿವೀರಣ್ಣ ಮತ್ತು ಸಂಗಡಿಗರು ಹಾಡಿದ ಪದಗಳು.**

*ನಾವೆದ್ದು ನೆನುದೇವು ಸ್ವಾಮಿ ಈರಣ್ಣನಾ*
*ಬಂಜಿಗೆರೆ ಗ್ರಾಮದ ವಾಡಿಯಾನ ॥ತಂದಾನ್ನ ತಾನ॥*
*ವುಳ್ಳಿ–ನಣ್ಣೆ ಬತವ*

*ಇಡಿಸೋನು–ಬಿಡಿಸೋನು*
*ಬತವಿನ ಸ್ವಾಮಿಯಾ ನೇನಾದೇವು ॥ತಂದಾನ್ನ ತಾನ॥*
*ಸುತ್ತ ಕನಗಾಲೂವು ಸುತ್ತಿಕ್ಕಿ*
*ನಾ ಕೊಯ್ದು ಸ್ವಾಮಿ ನಿಂಗಣ್ಣೆ ॥ ವಾಪ್ಪಿಸಿ ತಂದಾನ್ನ ತಾನ॥*
*ಸ್ವಾಮಿನೇ ನಿಂಗಣ್ಣೆ ವಪ್ಪಿಸಿ*

ನಮ ಗುರುವು ಕಳಕಳನೆ
ಬಾರಲು ಸ್ವಾಮಿಯಾಗೆ ॥ತಂದಾನ್ನ ತಾನ॥

ಯಳಿಯ ಹೊಂಬಾಳೆಯ
ಜಂಗೀ ನಾ ಕಿತ್ತು
ಸ್ವಾಮಿ ಈರಣ್ಣಗೆ ಓಪ್ಪಿಸಿ ॥ತಂದಾನ್ನ ತಾನ॥
ದೇವ ಗನಗಲೂವ್ವ
ದೇಸದ ಭಕ್ತರು ತಂದು
ಬತವಿನ ಸ್ವಾಮಿಗೆ ॥ತಂದಾನ ತಾನ॥

ಬತವಿನ ಸ್ವಾಮಿಗೆ ಓಪ್ಪಿಸಿ ನಮ ಗುರುವು
ಕಗ್ಗದಲಿ ಬರಲು ಸ್ವಾಮಿಯಾಗೆ ॥ತಂದಾನ್ನ ತಾನ॥
ನಾವೆದ್ದು ನೆನದೇವೆ ದೊಡ್ಡ ನಿಂಗಣ್ಣನ
ಮೂರು ಸಾವಿರೊಕ್ಕಲು
ದೊರಿಮಗ ನಿಂಗಣ್ಣನ ॥ತಂದಾನ್ನ ತಾನ॥

ಮೂರು ಸಾವಿರೊಕ್ಕಲು ದೊರಿಮಗ ನಿಂಗಣ್ಣನ
ದಿಬ್ಬ ಬಂದಲ್ಲಿ ನೇನದೇವು ॥ತಂದಾನ್ನ ತಾನ॥

ಕಂಡುಗ ಜಡೆಯಾನ ಕಂಡೆನೇರಿ ಮ್ಯಾಲೆ
ಕಂಡುಗುದೀಭೂತಿ ಬಸುಮಾಂಗ ತಂದಾನ ತಾನ
ಕಂಡುಗದ ವಿಭೂತಿ ಬಸ್ಮಂಗದಯ್ಯನ
ಕಂಡೇಗಕ್ಕುಗಳ ಗುಡಿಯಾಗೆ ॥ತಂದಾನ್ನ ತಾನ॥

ಓಣಿಯಾ ಕುಳಿಯಾಗೆ ಓಡ್ಯಾಡ ಇವ್ನ್ಯಾರೇ
ಆವ್ವುದು ಕೆಂಜಡಿ ನಮ ಗುರುವು
ನಿಂಗಣ್ಣನ ಗಡಿಸುತ್ತ
ಬಂಗಾರುದ ಬಸವಣ್ಣ
ತುಂಬಾಲೋದರೆ ಆಲಾಗೇಯ ॥ತಂದಾನ್ನ ತಾನ॥

ತುಂಬಾಲು ಹೋದರೆ ಬಾರೇ ಕಳ್ಳೆ
ಗುಡಿಯಾಗಿಡಿಯುವಾ ಸ್ವಾಮಿ
ಜಂಗಮ ಶಿವಾ ನುಡಿಯು ॥ತಂದಾನ್ನ ತಾನ॥

ನಿಂಗಣ್ಣಂದರಿವನೆ
ಮಾಲಿಂಗಂದರಿವನೆ
ಕ್ಯಾತಪ್ಪಂದರಿವನೆ
ಕೆಂಜಡಿಯಂದರಿವನೆ
ಜಂಗುಮಂದರಿವನೆ
ನಿಜಲಿಂಗಾಂದರಿವನೆ
ಇವನಿಗೆ ಮೂರ್ನಾಲ್ಕು
ಐದಾರು ಹೆಸರುಗಳು ಇವನಾ
ಜಾತ್ರೆಯ ಮಾಡೋರು ತಂದಾನ್ನ ತಾನ

ಕ್ಯಾಪ್ಪನಾ ಜಾತ್ರೆ ಮಾಡೋರು
ಯಾವ ಕುಲದೋರು
ಕಾಡುಗೊಲ್ಲರು ॥ತಂದಾನ್ನ ತಾನ॥

ಕಾಡುಗೊಲ್ಲ ಕುಲದ ಸೋಮ್ನರು
ಗೊಲ್ಲರು(ಅಜ್ಜೇರು) ಕಲೆತು
ಕ್ಯಾತಪ್ಪನ ಜಾತ್ರೆಯ ಮಾಡೋರು ॥ತಂದಾನ್ನ ತಾನ॥
ಚಳ್ಳಕೆರೆ ತಾಲ್ಲುಕ್ ಚಿತ್ರದುರ್ಗ ಜಿಲ್ಲೆ
ಪರಶುರಾಂಪುರ ಹೋಬಳಿ
ಚನ್ನಮ್ಮನಾಗತಿಹಳ್ಳಿ ಊರಲ್ಲಿ ಸ್ವಾಮಿ ಕೇತಪ್ಪನ
ನೆಲೆಗೊಂಡ ॥ತಂದಾನ್ನ ತಾನ॥

ಸ್ಥಿರವಾಗಿ ಅಲ್ಲಿನೆ ನೆಲೆಗೊಂಡ
ಸ್ವಾಮಿ ಕೇತೇಲಿಂಗ
ಪುಷಿ ಮಾಸದಾಗೆ
ಜಾತ್ರೆಯ ಮಾಡೋರು ॥ತಂದಾನ್ನ ತಾನ॥

ಜನವರಿ ತಿಂಗಳು ಪುಷಿ ಮಾಸದಾಗೆ
ಈ ಪರಿಸೆ ಭಾರಿ ದೊಡ್ಡಾ ಜಾತ್ರೆ ಕಾಲಿಯೋದು
॥ತಂದಾನ್ನ ತಾನ॥

ಇದಕ್ಕೆ ಸೇರಿದಂತ ಏಳೆಂಟು
ನರಸಿಂಹಗಳು ದೇವರ ದ್ಯಾನವಾ
ಮಾಡೇವು ॥ತಂದಾನ್ನ ತಾನ॥

ಸ್ವಾಮಿ ಕ್ಯಾತೇಲಿಂಗ
ಕಾಡೇನೆ ಗೊಲ್ಲರಿಗೆ ವಲಕಂಡ
ಕತೆಯ ಹೇಳೇವು ॥ತಂದಾನ್ನ ತಾನ॥
ಸೋಮನೂರು ಎಂಬ
ಸಣ್ಣ ಗ್ರಾಮದಾಗೆ ಸೋಮ್ನರ
ಗೊಲ್ಲರ ಬೊಮ್ಮಣ್ಣ ॥ತಂದಾನ್ನ ತಾನ॥

ಹಟ್ಟಿ ಗೊಲ್ಲರೆಲ್ಲ ಹಟ್ಟಿ ಕಟ್ಟಿ ಕೊಂಡು
ವಾಸವಾಗಿ ಇದ್ದರು ॥ತಂದಾನ್ನ ತಾನ॥
ಅತ್ತಿಗೆ ನಾಗಮ್ಮ ಪುತ್ರಗಾಲನೆರಿವೆ
ಹೊತ್ತುಂಟೆ ಹೊಲಾ ಮನೆ ॥ತಂದಾನ್ನ ತಾನ॥

ಹೊತ್ತುಂಟೆ ಏಳೆ
ಹೊಲ ಮನೆ ಬೊಮ್ಮಣ್ಣನ
ಮಾನ್ಯದ ಹೊಲಕೆ ನಡಿಯಮ್ಮ ॥ತಂದಾನ್ನ ತಾನ॥

ಇಂತೆಂಬ ಮಾತುಗಳು
ಕೇಳಿದ ನಾಗಮ್ಮ
ಮೊದಲಿಲ್ಲ ಮೈದುನಾ
ನಾಗಾದ ಲೋರಿ ಆಡವ್ಯಾಗೆ ॥ತಂದಾನ್ನ ತಾನ॥

ಇಂತಂಬ ಮಾತನ್ನು
ಕೇಳಿದ ಬೊಮ್ಮಣ್ಣ
ಮನಸ್ಸಿಗೆ ಬೇಜಾರ ತಂದುಕೊಂಡು
ನಡೆದಾನು ॥ತಂದಾನ್ನ ತಾನ॥

ಕರಿಯ ಕಂಬಳಿ ಕೊಡವಿ
ಯಗಾಲಿಗಾಕಿ ಸಿಪ್ಪುಗೊಡಲೀಯ
ಯಾಗಲಿಟ್ಟು ವಸಲೀಯ ಕಲ್ಲು
ಈಳುದಾನು ॥ತಂದಾನ್ನ ತಾನ॥

ಎಡ ಓಣೆಗುಂಟ ನಡೆದಾನು
ತಡೆದಾರು ಬೊಮ್ಮಣ್ಣನ
ಹಟ್ಟಿ ಗೊಲ್ಲರ ಹಟ್ಟಿ ಉದಿಗೋಗಿ
ನೀಂತಾನು ॥ತಂದಾನ್ನ ತಾನ॥
ಅವರೇಳಿದ ಮಾತು ಕೇಳಾದೆ ಬೊಮ್ಮಣ್ಣ
ಈ ಊರಿಗೂ ನನಗೂ
ರುಣಾವ ತೀರಿತೆಂದು ಗುಡ್ಡೆಕಲ್ಲಿಗೆ
ಕೈಮುಗಿದು ಬಡಗಲ ಮಕನಾಗಿ
ನಡೆದಾನು ॥ತಂದಾನ್ನ ತಾನ॥

ಅಲ್ಯಾಡಿ ಇಲ್ಯಾಡಿ ಹಳ್ಳಿಯ ತರಿಗ್ಯಾಡಿ
ತಿರಗಿದ ಬೊಮ್ಮಣ್ಣ ನಡುದಾನು ॥ತಂದಾನ್ನ ತಾನ॥
ಊರು ಜನಗುಳೆಲ್ಲ ತುಂಬಾ ನೀರಿಗೆ ಬಂದು
ನೋಡ್ದರು ದಿಬ್ಬದಲಿ ಮನಗಿರುವ ಹುಡುಗನ
॥ತಂದಾನ್ನ ತಾನ॥

ಹೇಮಾರಡ್ಡಿ ಸೊಸೆ ಬಾವಿ ನೀರಿಗೆ ಬಂದು
ನೋಡ್ದಳು ಮನಗಿರುವ ಹುಡುಗಾನ
॥ತಂದಾನ್ನ ತಾನ॥

ಯಾವೂರು ನಿನದಪ್ಪ ಯಾವಳ್ಳಿ ನಿನದಪ್ಪ
ಎಲ್ಲಿಂದಿಲ್ಲಿಗೆ ಬಾಂದ್ಯಪ್ಪ ಹೀಗೆಂದೆ ಆ ಸೊಸೆ
ಕೇಳಿದಾಗ ಬೊಮ್ಮಣ್ಣ ತನ್ನ ಕಷ್ಟಗಳ
ಗಳಿಸ್ಯಾನು ॥ತಂದಾನ್ನ ತಾನ॥

ಆರೂನೆ ಪಡಿಜ್ವಾಳ ಕೂಲಿಯ ಕೊಟ್ಟರೆ
ಆವುಗಳ ಕಾಯಾಲೀರತೀನಿ
ಹೇಮರೆಡ್ಡಿ ಸೊಸೆ ತನ್ನ ಆರಮನೆಗೆ ನಡೆದು
ಅತ್ತೆ ಮಾವರಿಗೆ ಹೇಳಿದಾಳು ॥ತಂದಾನ್ನ ತಾನ॥

ಬೇಗಾನೆ ಹೋಗಮ್ಮ ವುಡುಗಾನ ಕರೆತಾರೆ
ಎಂದು ಹೇಳಿದಾರು
॥ತಂದಾನ್ನ ತಾನ॥

ಹೋದಾಳು ಸೊಸೆಯು ಜಾಣ ಬೊಮ್ಮಣ್ಣನ
ಕರಕೊಂಡೆ ಮಾನೇಗೆ ನಡೆದಾಳು
॥ತಂದಾನ್ನ ತಾನ॥
ಹೇಮರೆಡ್ಡಿಯು ನೋಡು ಏನೆಂದು ಕೇಳಿದ
ಯಾವೂರು ನಿನದಯ್ಯ ಯಾದೇಸ ನಿನದಯ್ಯ
ಕುಲವೇನು ನಿನ್ನಾ ಬೇಡಾಗೇನು
॥ತಂದಾನ್ನ ತಾನ॥

ಆಳುನೂರು ಎಂಬ ಸಣ್ಣ ಗ್ರಾಮವು ನನದು
ಗೊಲ್ಲರ ವುಡುಗಾನು ಹೆಸರು ಬೊಮ್ಮಣ್ಣಾನು
ಮೂರನೆ ಪಡಿಜ್ವಾಳ ಕೂಲಿಯ ಕೊಟ್ಟರೆ
ಕರುಗಳ ಕಾಯಲು ಇರುತೀನಿ
॥ತಂದಾನ್ನ ತಾನ॥

ಇಂತೆಂಬ ಮಾತುಗಳು ಕೇಳಿದ
ಹೇಮಾರೆಡ್ಡಿ ಬಟ್ಟೆಗಳ ಕೋಡುತೀವಿ
ಹಿಟ್ಟುಗಳ ಕೊಡುತೀವಿ
ಗೋವುಗಳ ಕಾಯೆಂದ ॥ತಂದಾನ್ನ ತಾನ॥

ಕೇಳಪ್ಪ ಸೌವಕ್ರೆ ಹೇಳಿದೆ ಒಂದು ಮಾತು
ನಿಮ್ಮ ಮನೀಯ ಮುಂದೆ
ಕಸವು ಹೊಡೆಯೋನಲ್ಲ
ನೀವು ಮಾಡಿದ ಅಡಿಗೆ
ಊಟ ಮಾಡೋನಲ್ಲ ನೀವಿನ್ನು
ಗೂಡಾಕಿ ಕೊಟ್ಟರೆ
ಪಡಿ ಭತ್ತೇವು ಅಳೆದರೆ
ನನ್ನ ಅಡಿಗೇನೆ ಮಾಡಿಕಂಡು ನೋಡಯ್ಯ
ನಿಮ್ಮ ಗೋವುಗಳ ಕಾಯೋನು ॥ತಂದಾನ್ನ ತಾನ॥

ಇಂತಂಬ ಮಾತಿಗೆ ಒಪ್ಪಿದೇಮರೆಡ್ಡಿ
ವಕ್ಕ ಕಣದ ಮುಂದೆ
ಎತ್ತಿನ ಕೊಟ್ಗೆ ಮುಂದೆ
ಗೋವಿನ ಗೂಡುಗಳೇ ಹಾಕಿಸಿದ
॥ತಂದಾನ್ನ ತಾನ॥

ರಡ್ಡೇರ ಮನಿಯಾಗೆ ಗೊಲ್ಲರ ಬೊಮ್ಮಣ್ಣ
ದನಗಳ ಕಾಯಲು ಜೀತವಿದ್ದ
॥ತಂದಾನ್ನ ತಾನ॥

ಅಂತಂಬ ರಡ್ಡೆರು ಮಾನಿಯಾಗೆ
ಕ್ಯಾತೇಲಿಂಗ ಮನೆ ಸ್ವಾಮಿ ಈದ್ದಾನು
॥ತಂದಾನ್ನ ತಾನ॥

ಒಂದೆತ್ತು ಒಂದು ಕ್ವಾಣ
ವಡಕೊಂಡೇಮರೆಡ್ಡಿ
ಊರ ಗೌಡರ ಹೊಲಗಳ
ಕೋರು ಮಾಡುತ್ತಾ ಇದ್ದಾನು
॥ತಂದಾನ್ನ ತಾನ॥

ಅಂತಂಬ ಬಡವನಿಗೆ
ಸ್ವಾಮಿ ಕೇತೇಲಿಂಗ
ವಲಕಂಡು ಅವನಿಗೆ ಐಶ್ವರ್ಯ
ಕೊಟ್ಟಾನು ಬಾಳಕಾಲಾದಿ ಇದ್ದಾನು
॥ತಂದಾನ್ನ ತಾನ॥

ಊರ ಮುಂದಿನ ವಲೆ ಮಾರಿಯ ತನಕ
ಭೂಮಿ ಕಣಕೊಟ್ಟು
ಅಷ್ಟು ಐಶ್ವರ್ಯ ಕೊಟ್ಟು
ಹೇಮರೆಡ್ಡಿ ಸೌಕರ‍್ರಗೆ ॥ತಂದಾನ್ನ ತಾನ॥

ಸ್ವಾಮಿ ಕ್ಯಾತೇಲಿಂಗ ರೆಡ್ಯಾರಿಗೆ ವಲಿವಾಗ
ವುಳ್ಳಿ-ನಣ್ಣೆ ನೀವು ದೂರವಿಡಲೂಬೇಕು
ನನ್ನ ಪೂಜೆಯ ಭಕ್ತೀಲಿ ಮಾಡಿದರೆ
ಬಡತನ ಕಳೆವೇನು ಸಿರಿತನವ ಕೊಡುವೇನು
ಇಂಗೆಂದು ನಿಂಗಣ್ಣ ಹೇಳಿದ
॥ತಂದಾನ್ನ ತಾನ॥

ಬರಬರುತ ರಡ್ಡೆರು ಗರ್ವದಿಂದಿರುವಾಗ
ಹೇಮರಡ್ಡಿಯು ನೋಡು
ಮಗ ಭೀಮರಡ್ಡಿಯೂ
ಮೊಮ್ಮಗ ಚೆನ್ನಪ್ಪ ರಾಡ್ಡಿಯು ॥ತಂದಾನ್ನ ತಾನ॥

ಅವನ ಯುಮಾನ್ನೆಯು
ದರ್ಬಾರು ಬಂದಾಗ
ಗರ್ವ ಬಂದೀತು ರಾಡ್ಯಾರಿಗೆ
॥ತಂದಾನ್ನ ತಾನ॥
ಬೆಳಗಿನ ಪೂಜೆ ಮರೆತು
ಮದ್ಯಾನುದ ಪೂಜೆ ಮರೆತು
ಸಂಜೆಯ ಪೂಜೆಯೂ
ಸಾರವೊತ್ತು ॥ತಂದಾನ್ನ ತಾನ॥

ಸೇಂದಿಯ ಕುಡಿಯೋದು
ಬಂಗಿಯ ಸೇದೊದು
ಇಂತ ಕೆಟ್ಟವಾ ನಡತೆಯಾ ॥ತಂದಾನ್ನ ತಾನ॥

ಇದನೆಲ್ಲ ನಿಜಲಿಂಗ ನೋಡುತ್ತ ಕುಂತಿದ್ದ
ಬಂದೀತು ವಕ್ಕರವು ರಡ್ಡೆರಿಗೆ ॥ತಂದಾನ್ನ ತಾನ॥
ವುಳ್ಳಿ-ನಣ್ಣೆ ಬೆಳೆದ ಕೆಟ್ಟ ನಡತೆ ನಡೆದ
ಏನೇನು ನಡತೆ ನಡುದಾನು
॥ತಂದಾನ್ನ ತಾನ॥

ರಡ್ಡೆರು ಮನೆಯನ್ನು ಬಿಟ್ಟರೆ ನಾನೀಗ
ನನ್ನ ಪೂಜೆಯ ಮಾಡೋರು ॥ತಂದಾನ್ನ ತಾನ॥

ದೇಸನೆಲ್ಲ ನಾನು ತಿರಿಗ್ಯಾಡಿ ಬಂದೇನು
ಎಷ್ಟು ದಿನ ನೋಡಿದರು ತಿರುಗ್ಯಾಟ ತಪ್ಪಲಿಲ್ಲ
ಕುರುಡನಾಗಲ್ಲಿ ಕುಂತಿದ್ದ ॥ತಂದಾನ್ನ ತಾನ॥

ದನಗಳ ಕಾಯುವ ಬೊಮ್ಮಣ್ಣನಾ ಕಂಡಾನು
ಬೊಮ್ಮಣ್ಣನ ಭಕ್ತಿಯು ಎಂತದ್ದು ನೋಡಿರಿ

ಬೆಳಗಿಲಿ ಏಳುವನು ಕೈ ಕಾಲು ಮಕವ
ತೊಳೆದು ಸೂರ್ಯ ನಿಂಗಣ್ಣನ
ಕೈಯಾ ಮುಗಿದು ॥ತಂದಾನ್ನ ತಾನ॥
ಅಡಿಗೆ ತಾನಗಲ್ಲಿ ಮಾಡಿಕಂಡು ದನಗಳು
ಸಂಜೆವತ್ತಿಗೆ ನೋಡು ಬರುವವನು ಬೊಮ್ಮಣ್ಣ
ಗೋವಿನ ಗೂಡಿಗೆ ಗೋವುಗಳ ಕೂಡ್ಯಾನು
ಕರಿಯ ಕಂಬಳಿಯನ್ನು ಗೂಡಿನ ಬಾಗಿಲಿಗ್ಯಾಕಿ
ಉದ್ದಾಗಿ ಅಡ್ಡ ಬೀಳೊನು ॥ತಂದಾನ್ನ ತಾನ॥

ಇಂತ್ತಂಬ ಭಕ್ತಿಯ ಬೊಮ್ಮಣ್ಣ ಮಾಡುತ
ರಡ್ಡೆರ ದನಗಳ ಕಾತ್ತಿಯುತ್ತಿದ್ದ ತಂದಾನ್ನ ತಾನ
ಒಂದು ದಿನ ನೋಡು ಸ್ವಾಮಿ ಕ್ಯಾತೇಲಿಂಗ
ಅವನು ಭಕ್ತಿಯ ನೋಡಿದ ॥ತಂದಾನ್ನ ತಾನ॥

ಇವನಿಗೆ ನಾನೀಗ ವಲಿಯಬೇಕೆಂದು
ರೆಡ್ಡೆರು ಮನೆಯನ್ನು ಬಿಡಬೇಕೆಂದು
ಸಂಜೆವೊತ್ತಿಗೆ ನೋಡು ಗೋವಿನ
ಗೂಡಿಗೆ ನಡೆದು
ತಾನೊಂದೇ ಧ್ವನಿಯಾ ತೋರಿದನು
॥ತಂದಾನ್ನ ತಾನ॥

ಸ್ವಾಮಿ ಮಾಡಿದ ದನಿಯ
ಕೇಳಿದ ಗೋವುಗಳು ಗೋವಿನ
ಗೂಡಿನ್ಯಾಗೆ ಬೆದರ್ಯಾವೆ ॥ತಂದಾನ್ನ ತಾನ॥

ಎದ್ದಾನು ಬೊಮ್ಮಣ್ಣ ಗೂಡಿನ್ಯಾಗೆ ನೋಡ್ಯಾನು
ಬೆದರಿದ ಕಾರಣ ಕಾಣಾಲಿಲ್ಲ
॥ತಂದಾನ್ನ ತಾನ॥

ಆಗ ಸ್ವಾಮಿ ನೋಡು ಏನೆಂದು ನುಡಿದಾನು
ಹೆದರಬೇಡ ನೀನು ಬೆದರಬೇಡ ನೀನು
ನಾನು ಕಾಣಯ್ಯ ನಿಜಾಲಿಂಗ ॥ತಂದಾನ್ನ ತಾನ॥

ಶಿವನ ಮಗನು ನಾನು ಹಾಲುಕ್ಯಾತೇಲಿಂಗ
ನರಲೋಕಕೆ ನನ್ನ ಕಳುಹಿದ ॥ತಂದಾನ್ನ ತಾನ॥
ನೀನು ಹೇಳಿದ ಮಾತು ಸುಳ್ಳು ಬಾರದಂತೆ
ನಿನ್ನ ನಾಲಿಗೇಲಿ ಬಾರುದಯ್ಯ ॥ತಂದಾನ್ನ ತಾನ॥

ಹಿಂಗೆಂದು ಶಿವರಾಯ ನನ್ನನ್ನು ಕಳುವ್ಯಾನು
ನರಲೋಕಕೆ ನಾನು ಬಾಂದೇನು ॥ತಂದಾನ್ನ ತಾನ॥
ಅಲ್ಲ್ಯಾಡಿ ಇಲ್ಲ್ಯಾಡಿ ಹಳ್ಳಿಯ ತಿರುಗ್ಯಾಡಿ
ಅಳುನೂರಿಗೆ ನಾನು ನಡೆದೇನು ॥ತಂದಾನ್ನ ತಾನ॥

ಅಳುನೂರು ಎಂಬುವ ಸಣ್ಣ ಗ್ರಾಮದಾಗೆ
ಒಕ್ಕಲ ಲಕ್ಕಣ್ಣನಿಗೆ ವಲಕಂಡೆ

ಅಷ್ಟು ಅಶ್ವರ್ಯ ಕೊಟ್ಟೆ
ಧನ ಧನ ಸಂಪತ್ತು ಕೊಟ್ಟೆ
ಬರಬರುತ ಲಕ್ಕಣ್ಣ ನನ್ನ
ಪೂಜೆ ಮರೆತ ಕೆಟ್ಟ ನಡೆತೆಯ
ನಡೆದಾನು ॥ತಂದಾನ್ನ ತಾನ॥

ಅಂತೆಂಬ ಲಕ್ಕಣ್ಣನ ಹಾಡು ಮಾಡಿ ನಾನು
ಮುಂದೆ ಮುಂದೆಯೂ ನಡುದೇನು
ಕಾಡು ಮೇಡು ತಿರುಗಿ, ಗುಡ್ಡ ಬೆಟ್ಟ ತಿರುಗಿ
ದಿಬ್ಬದಳ್ಳಿಗೆ ನಡೆದೇನು ॥ತಂದಾನ್ನ ತಾನ॥

ದಿಬ್ಬದಳ್ಳಿ ಯೆಂಬ ದೊಡ್ಡ ಗ್ರಾಮದಾಗೆ
ಉಪ್ಪಾರ ನಿಂಗಮ್ಮಗೆ ವಾಲಕಂಡೆ
ವುಳ್ಳಿ–ನಣ್ಣೆ ಎರಡು ದೂರ ಇಟ್ಟು ನೀನು
ನನ್ನ ಪೂಜೆಯ ಮಾಡಿದರೆ ॥ತಂದಾನ್ನ ತಾನ॥

ಅಷ್ಟ ಅಶ್ವರ್ಯ ಕೊಡುವೆ
ದನ–ಧನ್ಯ ಸಂಪತ್ತು ಕೊಡುವೆ
ಹಿಂಗೆಂದು ನಿಂಗಣ್ಣ ಹೇಳಿದ
॥ತಂದಾನ್ನ ತಾನ॥

ಉಪ್ಪಾರ ನಿಂಗಮ್ಮ ಗಂಡನಿಲ್ಲದ ರಂಡೆ
ಸಣ್ಣ ಮಗನಾದ ತಿಮ್ಮಣ್ಣ
ಸ್ವಾಮಿ ನಿಂಗಣ್ಣಾನ ಪೂಜೆ ಮಾಡಲು ನಿಂತ
ಅಷ್ಟು ಅಶ್ವರ್ಯ ಕೊಟ್ಟೆ
ದನ–ಧನ್ಯ ಸಂಪತ್ತು ಕೊಟ್ಟೆ
ಕ್ವಾಣನ ಗೂಟ ಬಂಗಾರ ॥ತಂದಾನ್ನ ತಾನ॥

ಕ್ವಾಣ ಕಟ್ಟಾ ಗೂಡ ಬಂಗಾರ ಮಾಡಿದನು
ಬರಬರುತ ಉಪ್ಪಾರು ಸಾವುಕಾದ್ರು ನೋಡು
ಜಂಬಂದಿಂದ ಸ್ವಾಮಿ ಪೂಜೆಯ ಮಾರತಾರೂ
॥ತಂದಾನ್ನ ತಾನ॥

ಅಂತೆಂಬ ನಿಂಗಮ್ಮನ ಹಾಳು ಮಾಡಿ
ನಾನು ಮುಂದೆ ಮುಂದೆ ನಡುದೇನು
ಅಲ್ಲ್ಯಾಡಿ ಇಲ್ಲ್ಯಾಡಿ ಹಳ್ಳಿಯ ತಿರುಗ್ಯಾಡಿ
ಲಕ್ಷಣದ ಪುರಾಕೆ ಬಾಂದೇನು ॥ತಂದಾನ್ನ ತಾನ॥

ಈವೂರಿಗೆ ಬಂದು ಹೇಮರೆಡ್ಡಿರಿಗೆ
ಇವರಿಗೆ ನಾನು ವಾಲಿಕಂಡೆ
ಬಡವರಾಗಿದ್ದಂತ ಹೇಮಾರಡ್ಡೆರು ನೋಡು
ಸುತ್ತೇಳಳ್ಳಿಗೆ ಸಾವುಕಾರ ॥ತಂದಾನ್ನ ತಾನ॥

ಇಂತೆಂಬ ಬಿರುದನ್ನು ಕೊಟ್ಟೇನು ರಡ್ಡೆರಿಗೆ
ಮೊಮ್ಮಗ ಚೆನ್ನಪ್ಪ ರೆಡ್ಡಿಯು

ಉಳ್ಳಿ ನಣ್ಣೆ ಬೆಳೆದ ಸೇಂದಿ ಭಂಗಿ ಕುಡಿದ
ಇಂಥ ನಡತೆಯ ನೆಡೆದಾನು ॥ತಂದಾನ್ನ ತಾನ॥

ನಿನ್ನ ಭಕ್ತಿಯ ನೀಗ ನೋಡಿದೆ ಬೊಮ್ಮಣ್ಣ
ಇಂತ್ತಂಬ ಹುಟ್ಟಿದ ಕತೆಯೆಲ್ಲ ಹೇಳಿದ
ನಿನ್ನ ಭಕ್ತಿಯು ನಾನು ನೋಡಿದೆ ಬೊಮ್ಮಣ್ಣ
ನಿನ ಕೂಡಿ ನಾನು ಬಾರುತೀನೊ ॥ತಂದಾನ್ನ ತಾನ॥

ಇಂತ್ತಂಬ ಮಾತನ್ನು ಕೇಳಿದ ಬೊಮ್ಮಣ್ಣ
ಬಂಧಿಲ್ಲ ಬಳಗಿಲ್ಲ ಕೂರಿಲ್ಲ ಕುರಿತಿಲ್ಲ
ನಾನು ಎಲ್ಲಿಗೆ ಹೋಗದು ॥ತಂದಾನ್ನ ತಾನ॥
ತೆಂಕನ ಮಕುನಾಗಿ ಹೋಗೋಣ ನಡಿಯಯ್ಯ
ನಿಮ್ಮ ಬಂಧು ಬಳಗ ತೋರೇನು ಬೊಮ್ಮಣ್ಣ
ಒಂದಾಕು ನಿನಗೆ ಯೋಚನೆಯು ॥ತಂದಾನ್ನ ತಾನ॥

ಒಂದಾಕು ಯೋಚನೆ ಮಾಡದೆ ಬೊಮ್ಮಣ್ಣ
ನಡಿಯಯ್ಯ ಹೋಗಣ ಬೊಮ್ಮಣ್ಣ
ಸಾಕಿದ ಗೋವುಗಳು ಬಿಟ್ಟು ಬರೋದೆಲ್ಲಿ
ಹ್ಯಾಂಗೆ ಬಾರಲಯ್ಯ ನಿಂಜಾಲಿಂಗ ॥ತಂದಾನ್ನ ತಾನ॥

ಉಂಡದೀಯ ಉಟ್ಟದೀಯ ತುಂಡುಗಂಬಳಿ
ವದ್ದೀಯ ಮುಂದೆ ಈ ರೀತಿ ರಡ್ಡೇರು
ಮೋಸ ಮಡೋರು ನಿನಗೆ ಅವಾರು
॥ತಂದಾನ್ನ ತಾನ॥

ಇಂಗೆಂದು ಮಾತನ್ನು ಕೇಳಿದ ಗೋವುಗಳು
ಅಂಬಾ ಎಂದು ಕೂಗಿವೆ ಗೋವುಗಳು
ಅರಿಸ್ಯಾಡಿ ॥ತಂದಾನ್ನ ತಾನ॥
ಸಾಕಿದ ಗೋವುಗಳು ಬಿಟ್ಟು ಬರಲಾರೆ
ನಾನು ಬರಲಾರೆ ನಿಜಾಲಿಂಗ
॥ತಂದಾನ್ನ ತಾನ॥

ಸಾಕಿದ ಗೋವುಗಳ ವಡಕಾಲೊ ಬೊಮ್ಮಣ್ಣ
ಟೆಂಕ ಮಕುನಾಗಿ ಹೋಗೋಣ
॥ತಂದಾನ್ನ ತಾನ॥

ಉಂಡ ಮನಿಗೆ ನಾನು ಗುಂಡು ದಬ್ಬೊಲಾರೆ
ಮೋಸದ ಮಾತು ಹೇಳಬ್ಯಾಡ
ಇಂತಂಬ ವಾದವ ಮಾಡುತ ಇಬ್ಬರೂ
ತನ್ನ ಪಾವಡ ನೋಡೇಂದ ॥ತಂದಾನ್ನ ತಾನ॥

ನೀನು ಕೇಳಿದವ ಮಾತು ನಿಜವಾಗಿ ತೊರುತಲಿ
ನೋಡೊ ಬೊಮ್ಮಣ್ಣ ನೋಡೆಂದ
ಎದುರಿಗೆ ಇರುವಂತ ದೊಡ್ಡ ವೂಲಿ ಮರವ
ಬೇವಿನ ಮರವಾಗಿ ಮಾಡಿದ
॥ತಂದಾನ್ನ ತಾನ॥

ಕಾರೇಯ ಬೆಳೆಗಳ ಕವಳಿ ಬೆಳೆ ಮಾಡಿದ
ಜಾಲಿ ಮರಗಳೆಲ್ಲ ಬಾರೆ ಮರ ಮಾಡಿದ
ನೋಡೊ ಬೊಮ್ಮಣ್ಣ ನೋಡೆಂದ
॥ತಂದಾನ್ನ ತಾನ॥

ಇಂತಂಬ ಪವಾಡ ನನ್ನಲ್ಲಿರುವುದು
ಹೇಮರಡ್ಡರ ದನಗಳ ವಡಕಳೊ
ಬೊಮ್ಮಣ್ಣ ಹೋದಾನು ಟೆಂಕಲ ಮುಕನಾಗಿ
॥ತಂದಾನ್ನ ತಾನ॥

ಹೇಮರಡ್ಡರು ನೋಡೊ ಊರಿಗೆ
ಸವಕಾರರು ದಂಡೆದ್ದು ಬಂದು
ವಡುದಾರು ॥ತಂದಾನ್ನ ತಾನ॥

ಒಂದಕ್ಕು ಯೋಚನೆ ಮಾಡದೆ ಬೊಮ್ಮಣ್ಣ
ನನಕೂಟೆ ನೀನು ಬಾರೆಂದ ॥ತಂದಾನ್ನ ತಾನ॥
ಇಂತಂಬ ಮಾತಿಗೆ ಒಪ್ಪಿದ ಬೊಮ್ಮಣ್ಣ
ಭಾನುವಾರ ನೋಡೊ ಬೆಳಗಿನ ಸೋಮವಾರ
ಗೋವುಗಳ ಭಾಗ ತಗುದಾನು ॥ತಂದಾನ್ನ ತಾನ॥

ದುಡಿಯ ಎತ್ತುಗಳೆಲ್ಲಾ ಕಂಬಿಗಗ್ಗ ಸುತ್ತಿ
ಗೋವುಗಳ ವಡುದಾರು
॥ತಂದಾನ್ನ ತಾನ॥
ವತ್ತು ಹುಟ್ಟುವತ್ತೆ ಮೂರು ಹರ ದಾರಿಯೂ
ಬಂದರು ಗೋವುಗಳ ವಡಾಕಂಡು ॥ತಂದಾನ್ನ ತಾನ॥

ಬೆಳಗಿಲೆ ಎದ್ದಾರು ಹೇಮರಡ್ಡೆರಲ್ಲಿ
ಗೋವುಗಳ ಕಾಣವು ದುಡಿಯ ಹೋರಿಗಳಿಲ್ಲ
ಗೋವುಗಳ ವಡುದಾನು ಗೋವಿಲ್ಲ
॥ತಂದಾನ್ನ ತಾನ॥

ಕಳ್ಳ ಗೊಲ್ಲನಿವನು ಗೋವುಗಳ ಕದ್ದಾನು
ದುಡಿಯ ಹೋರಿಗಳ ವಡುದಾನು ॥ತಂದಾನ್ನ ತಾನ॥

ಡಂಗುರ ವಡಿಸ್ಯಾರು ಮನೆಗೊಬ್ಬರ ಕರೆಸ್ಯಾರು
ಗೊಲ್ಲಿನ ಈಗ ತಡಿಬೇಕು ಎಂದಾನು
ದಟ್ಟಿ ಚಲ್ಲಣದರೊ ಈಟಿ ಬರಿಸಿ ಹಿಡಿದು
ಕೇಕೆಯ ವಡೆದು ಗುಂಪು ಕಟ್ಟಿ ॥ತಂದಾನ್ನ ತಾನ॥

ಮುದ್ದೆ ಭಂಟರೆಲ್ಲ ಲಾಗವ ವಡೆದಾರು
ಕಟ್ಟುಣಿ ಸರುಪುಣಿ ಹಾಕಿದ ನಾಯಿಗಳ
ಇಡಕಂಡು ಹೊರಟರು ಡಾಂಡೆದ್ದು ॥ತಂದಾನ್ನ ತಾನ॥

ದೊಡ್ಡ ಉಂಬತ್ತೀಗೆ ನಡೆದಾತು ಆ ದಂಡು
ಎದ್ದು ದಿನ್ನೆಮ್ಯಾಲೆಕಂಡಂತ ಗೋವುಗಳ
ಸಿಕ್ಕಿದ ಗೊಲ್ಲನ ಕಡಿದೇವು ॥ತಂದಾನ್ನ ತಾನ॥

ಇಂತಂಬ ಅರ್ಭಟವ ಕೇಳಿದ ಬೊಮ್ಮಣ್ಣ
ನೋಡೊ ನಿಜಾಲಿಂಗ ರಡ್ಡೇರು ॥ತಂದಾನ್ನ ತಾನ॥
ದಂಡೆದ್ದು ಬಂದರು ನನ್ನನ್ನು ಬಡಿವಾರು
ನನ್ನ ಪ್ರಣಗಳ ತಗುದಾರು ॥ತಂದಾನ್ನ ತಾನ॥

ಹೆದರಬೇಡೊ ನೀನು ಬೆದರ ಬೇಡೊ ನೀನು
ನನ್ನ ಮಾಯಾವ ನೋಡಯ್ಯ
ನನ್ನ ಮಂತ್ರವ ನೋಡಯ್ಯ ॥ತಂದಾನ್ನ ತಾನ॥

ಬಿಳಿಯ ದನಗಳೆಲ್ಲ ಕರಿ ದನವ ಮಾಡಿದ
ಕರಿಯ ದನಗಳೆಲ್ಲ ಬಟ್ಟನಾ ಮಾಡಿದ
ನೆಟ್ಟಂದ ಕಂಬುಗಳ ಸೊಟ್ಟಗು ಮಾಡಿದ
ಅಂಡ ಹುಂಡನ ಮಾಡಿ ದಂಡೆ ಕೊರಳಿಗ್ಯಾಕಿ
ಇಂತಂಬ ಮಾಯಾ ಮಾಡಿದನೋ ॥ತಂದಾನ್ನ ತಾನ॥

ಹುಡ್ಗ ಬೊಮ್ಮಣ್ಣ ಮುದುಕನಾ ಮಾಡಿದ
ಮೊಳದುದ್ದ ಬ್ಯಾಳಿಸ್ಯಾನ ॥ತಂದಾನ್ನ ತಾನ॥

ಇಂತಂಬ ವೇಷವ ಹಾಕಿದ ಬೊಮ್ಮಣ್ಣಾಗೆ
ದೊಡ್ಡ ಗುಂಡಿಗೆ ಕುಳ್ಳಿರಿಸಿ ॥ತಂದಾನ್ನ ತಾನ॥

ಹೇಮರಡ್ಡೆರು ದಂಡು ದನವೀನ ಹತ್ತಿರ
ಬಂದು ಏನೆಂದೆ ಮಾತು ಹಾಡಿದರು
॥ತಂದಾನ್ನ ತಾನ॥

ಕರುವು ನಮ್ಮವಲ್ಲ ಎತ್ತು ನಮ್ಮವಲ್ಲ
ಗೋವು ನಮ್ಮವಲ್ಲ ಆವು ನಮ್ಮಾವಲ್ಲ
ಆವಟ್ಟಿ ಕಿಲಾರಿ ನಮ್ಮಾನಲ್ಲ ॥ತಂದಾನ್ನ ತಾನ॥

ಬೇರೆ ಕಡೆ ಗೋವುಗಳ ವಡೆದವ್ನೆ ಗೊಲ್ಲನು
ಮುದುಕನ ತಾವು ಕೇಳಿದನು
ಗೋವುಗಳ ನೋಡಿದೇಯ
ಕರುಗಳ ನೋಡಿದೆಯ
ದುಡಿಯ ಹೋರಿಗಳ ನೋಡಿದಿಯ
॥ತಂದಾನ್ನ ತಾನ॥

ಇಂಗೆಂದ ರಡ್ಡೆರು ಕೇಳಿಗ ಬೊಮ್ಮಣ್ಣ
ಕಿವುಡನಂತವನು ಮಾತಾಡಿ
ಮಲ ಸೀಮೆ ನಮದಯ್ಯ
ಮಲನಾಡು ನಮದಯ್ಯ
ಮೇವು ನೀರಿಗೆ ಬಾಂದೇವು ॥ತಂದಾನ್ನ ತಾನ॥

ಇಂಗೆಂಬ ಮಾತನ್ನು ಕೇಳಿದ ರೆಡ್ಡೆರು
ಹುಟ್ಟು ಕಿವುಡಾನಿವನು ಇವ್ನಕೂಟೆ ಮಾತೇನು
ಇಂಗೆಂದು ರಡ್ಡೆರು ಹಿಂದಕ್ಕೆ ಹೊರಟರು
ಸ್ವಾಮಿ ನಿಜಾಲಿಂಗ ಹೇಳಿದ ॥ತಂದಾನ್ನ ತಾನ॥

# ಅನುಬಂಧ : ಎರಡು

ಅ. ಪತ್ರಿಕಾ ಪ್ರಕಟಣಾ ಲೇಖನಗಳು

ಆ. ಕ್ಷೇತ್ರಕಾರ್ಯದ ಅನುಭವಗಳು

ಇ. ವಕ್ತೃವಿವರಗಳು

ಉ. ಕೇತಪ್ಪನ ಪದಗಳು

ಊ. ನಕ್ಷೆಗಳು

ಋ. ಕಥನ ಗೀತೆಗಳು

# ಅನುಬಂಧ ೨

## ಅ. ವಿವಿಧ ಪತ್ರಿಕೆಗಳಲ್ಲಿ ಪ್ರಕಟಣೆಗಳ ಛಾಯಾ ಚಿತ್ರಗಳು

ನಿಮ್ಮ ಪುಟ

ಭಾವೈಕ್ಯ, ಸಾಮಾಜಿಕ ಸಾಮರಸ್ಯದ ದ್ಯೋತಕ

### ಕಾಡುಗೊಲ್ಲರ ಕ್ಯಾತಪ್ಪನ ಪರಿಷೆಗೆ ಚಾಲನೆ

ದೇವರ ಮರ ಹೆಗಲಿಗೆ ಮುಟ್ಟಿಸಿದ ಭಕ್ತರು ಹೆಗಲ ಮೇಲೆ ಹೊತ್ತುಕೊಂಡರು.

- ಮರ ಕಡಿದ ಚಳ್ಳಕೆರೆ ಮರವಾಯಿ ವಂಶಸ್ಥರು.
- ಕಳೆದ 13 ಬುಡಕಟ್ಟಿನ ಜನರು ಹಾಜರು.
- ಕಾಡುಗೊಲ್ಲರು ಆರಾಧ್ಯ ಮೂಲದ ಸಂಸ್ಕೃತಿ ಪೋಷಕರು.

೧.ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಲ್ಲಿ ಜರುಗುವ ಕಾಡುಗೊಲ್ಲರ ಬುಡಕಟ್ಟು ಸಮುದಾಯದ ಪ್ರಮುಖ ಆರಾಧ್ಯ ದೈವವಾದ ಕೇತಪ್ಪನ ಜಾತ್ರಾ ಆಚರಣೆಗೆ ಮರವಾಯಿ ಬೆಡಗಿನ ಗೊಲ್ಲರು (ಪೂಜೆ) ದೇವರ ಮರವನ್ನು ಕಡಿದು ಪುರ್ಲೆಹಳ್ಳಿ ಬಳಿ ಇರುವ ವಸತಿ ದಿಬ್ಬಕ್ಕೆ ಸಾಗಿಸುತ್ತಿರುವುದು.

(ವಿಜಯ ಕರ್ನಾಟಕ ದಿನ ಪತ್ರಿಕೆ)

ಚಿತ್ರದುರ್ಗ ಲೋಕಲ್ ಎಕ್ಸ್‌ಪ್ರೆಸ್ — ವಿಜಯವಾಣಿ CHITRADURGA

### ಆಧುನಿಕತೆಗೆ ಮಾಸದ ಕ್ಯಾತಪ್ಪನ ಜಾತ್ರಾ ಆಚರಣೆ

■ ಇಂದು ಪುರ್ಲಹಳ್ಳಿಯಲ್ಲಿ ಜಾತ್ರೆ ಸಂಭ್ರಮ ■ ಹರಿದು ಬರಲಿದೆ ಜನಸಾಗರ ■ ಬುಡಕಟ್ಟು ಸಂಸ್ಕೃತಿಯ ಪ್ರತೀಕ

■ ಚಿತ್ರ ಲೇಖನ-ಅಪ್ಪಾರಹಟ್ಟಿ ಚಿತ್ತಯ್ಯ, ಅಧ್ಯಾಪಕರು, ಚಳ್ಳಕೆರೆ

೨.ಚಳ್ಳಕೆರೆ ತಾಲ್ಲೂಕಿನ ಬಂಜಗೆರೆ ಗ್ರಾಮದ ದೈವ ಈರಗಾರ ಈರಣ್ಣ, ಬತವಿನ ದೇವರು ಇತರೆ ಪರಿವಾರದ ದೈವಗಳನ್ನು ಕೇತಪ್ಪನ ಜಾತ್ರೆಗೆ ಕರೆ ತರುತ್ತಿರುವುದು.(ವಿಜಯವಾಣಿ ಪತ್ರಿಕೆ)

# ಕಳ್ಳೆ ಮುಳ್ಳು ಕ್ಯಾತಪ್ಪನ ಪರಿಷೆ





೩.ಚಳ್ಳಕೆರೆ ತಾಲ್ಲೂಕಿನ ಪುರ್ಲೆಹಳ್ಳಿ ಬಳಿ ಇರುವ ವಸತಿ ದಿಬ್ಬದಲ್ಲಿ ಬೆಮ್ಮನೋರು ಹಾಗೂ ಕೋಣನೋರು ಬೆಡಗಿನವರು ಕಟ್ಟಿದ ಕಳ್ಳೆ ಮುಳ್ಳಿನ ಗುಡಿ ಹತ್ತಿ ಈರಗಾರರು ಕಳಸ ಇಡುತ್ತಿರುವುದು.

# ಚಳ್ಳಕೆರೆ ತಾಲೂಕಲ್ಲಿ ಕೇತೇದೇವರ ಜಾತ್ರೆ...

● ಅಪ್ಪಟ ಜಾನಪದ ಶೈಲಿಯ ಜಾತ್ರೆ ● ಮುಳ್ಳಿನ ದೇವಸ್ಥಾನ ನಿರ್ಮಿಸಿ ಪೂಜೆ ಸಲ್ಲಿಸುವುದು ಈ ಜಾತ್ರೆಯ ವಿಶೇಷ





೪.ಕಳ್ಳೆ ಮುಳ್ಳಿನ ಗುಡಿಯೊಳಗೆ ಪ್ರತಿಷ್ಠಾಪಿಸಿರುವ ಕಾಡುಗೊಲ್ಲರ ಸಾಂಸ್ಕೃತಿಕ ವೀರ ಕೇತಪ್ಪ ಹಾಗೂ ಬಂಜಗೆರೆಯ ಈರಗಾರ ಈರಣ್ಣನ ಪೆಟ್ಟಿಗೆ ದೈವಗಳು. ( ಕನ್ನಡ ಪ್ರಭ ದಿನ ಪತ್ರಿಕೆ)



Kyathalingeswara festival celebrated with pomp in G'durga

೬.ಹದಿಮೂರು ಗುಡಿಕಟ್ಟಿನ ಮುಖ್ಯಸ್ಥರುಗಳ ನೇತೃತ್ವದಲ್ಲಿ ಕೇತಪ್ಪ ಹಾಗೂ ಇತರೆ ದೈವಗಳನ್ನು ಜಾತ್ರೆಗೆ ಹೊತ್ತು ಸಾಗಿಸುತ್ತಿರುವುದು. (ದಿ.ಹಿಂದು ವೃತ್ತ ಪತ್ರಿಕೆ )

### ಆ. ಕ್ಷೇತ್ರಕಾರ್ಯದ ಅನುಭವಗಳು

ಕ್ಯಾತಪ್ಪ ದೈವಗಳ ಆರಾಧನೆಯಲ್ಲಿ ಕಂಡು ಬಂದ ಆಚರಣೆಗಳನ್ನು ನೋಡಿದಾಗ ಈ ಹಬ್ಬ, ಉತ್ಸವ ಹಾಗೂ ಜಾತ್ರೆ ಬಗ್ಗೆ ಯಾವುದೇ ರೀತಿಯಾದ ಉಲ್ಲೇಖ ಹಾಗೂ ಯಾವುದೇ ಬರಹಗಳು ಇಲ್ಲದ ಕಾರಣ ಈ ದೈವದ ಜಾತ್ರೆ ಬಗ್ಗೆ ವಿಶೇಷ ಆಸಕ್ತಿ ಉಂಟಾಯಿತು. ಕ್ಷೇತ್ರ ಅಧ್ಯಯನಕ್ಕೆ ತೊಡಗಿಸಿಕೊಂಡಾಗ ಇಲ್ಲಿಯ ಜನರಲ್ಲಿ ಭಿನ್ನ ಪ್ರತಿಕ್ರಿಯೆಗಳು ಕಂಡು ಬಂದವು. ಈ ಜಾತ್ರೆಯ ಆಚರಣೆಗಳಲ್ಲಿ ಭಾಗವಹಿಸುವಂತಹ ಈ ದೈವಗಳ ಒಕ್ಕಲಿಗೆ ಸೇರಿದ ವಿವಿಧ ಗ್ರಾಮಗಳ ಮುಖ್ಯಸ್ಥರು, ಗೌಡರು, ಪೂಜಾರಿಗಳು, ಆಯಾಗಾರರು, ಕಲಾವಿದರನ್ನು ಸಂದರ್ಶಿಸಿ ಅವರಿಂದ ಮಾಹಿತಿ ಪಡೆಯಲಾಗಿದೆ. ಈ ಜಾತ್ರೆಯಲ್ಲಿ ನಡೆಯುವಂತ ಆಹಾರದ ವಿಚಾರಗಳು, ನೀತಿ ನಿಯಮಗಳು, ಆಚರಣೆ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಗೌಡರು, ದೇವಸ್ಥಾನ ಸಮಿತಿಯವರು ತಾವು ನಿರ್ವಹಿಸುವಂತಹ ಕೆಲಸ ಕಾರ್ಯಗಳ ಬಗ್ಗೆ ಅವರಿಗೆ ತಿಳಿದ ಮಟ್ಟಿಗೆ ವಿಷಯವನ್ನು ಸವಿಸ್ತಾರವಾಗಿ ತಿಳಿಸಿಕೊಟ್ಟಿದ್ದಾರೆ.

ಜಾತ್ರೆಯಲ್ಲಿ ಹಲವಾರು ಆಚರಣೆಗಳು ಹಿಂದಿನ ಪದ್ಧತಿಯಲ್ಲಿಯೇ ಕಂಡು ಬಂದರೂ ಅವುಗಳಲ್ಲಿ ಕೆಲವು ಸಡಿಲಿಕೆಗಳೂ ಆಗಿವೆ. ಆಧುನಿಕತೆ ಎಷ್ಟೇ ಪ್ರಭಾವ ಬೀರಿದರೂ ಕೆಲವು ಮೂಲ ಆಚರಣೆಗಳನ್ನು ಕಾನೂನುಗಳಿಂದಲೂ ತಡೆಯಲು

**ಪದಗಳನ್ನು ಹಾಡಿದ ವರ್ಕ್ಗಗಳು**

- ಕುರಿ ವೀರಣ್ಣ–೫೮ ವರ್ಷಹೆಗ್ಗೆರೆ, ಕದುರಮ್ಮ ೪೦ವರ್ಷ, ಕಸ್ತೂರಿತಿಮ್ಮನಹಳ್ಳಿ, ತಿಪ್ಪಮ್ಮ೪೦ವರ್ಷ, ಕ್ಯಾತಗೊಂಡನಹಳ್ಳಿ,
- ಕ್ಯಾತಮ್ಮ ೫೦ವರ್ಷ, ಗೋಪನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

ಉ. ನಕ್ಷೆಗಳು



